

# ಆರ್ಯಸಂಸ್ಕೃತಿ

ಭಗವಾನ್ ಶ್ರೀಧರಪರಮಹಂಸರ

## ದಿವ್ಯಸಂದೇಶ





ದಾಸನವಮಿ

ಮಾಘ ವದ್ಯ ನವಮೀ

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯವರ್ಯ
ಭಗವಾನ್ ಶ್ರೀ ಶ್ರೀಧರಸ್ವಾಮಿಗಳವರು
ಮನ್ಮಥ ಸಂ॥ ಚಾತುರ್ಮಾಸ್ಯದ
ಪರಿಸಮಾಪ್ತಿಯಲ್ಲಿ ನೀಡಿದ

# ದಿವ್ಯಸಂದೇಶ



# ದಾಸನವಮಿ

(ಮಾಘ ವದ್ಯ ನವಮಿ)

ತಾ॥ ೬-೩-೧೯೫೬



ಪ್ರಕಾಶಕರು
ಶ್ರೀ ಶ್ರೀಧರ ಭಕ್ತಮಂಡಲಿ
ಸಾಗರ - - ಶಿವಮೊಗ್ಗ

॥ ಶ್ರೀ ಗುರವೇ ನಮಃ ॥

## ಪ್ರಕಾಶಕರ ಪ್ರಾರ್ಥನೆ

ಶ್ರೀಮತ್ಪರಮಹಂಸ ಭಗವಾನ್ ಶ್ರೀ ಶ್ರೀಧರಸ್ವಾಮಿಗಳವರು ಲೋಕಕಲ್ಯಾಣಾರ್ಥವಾಗಿ ಪ್ರತಿವರ್ಷ ಚಾತುರ್ಮಾಸ್ಯಾಂತ್ಯದಲ್ಲಿ ಅನುಗ್ರಹಿಸುವ ಸಂದೇಶವನ್ನು ಪ್ರಕಟಪಡಿಸುತ್ತಿರುವುದು ತಮ್ಮೆಲ್ಲರಿಗೂ ವೇದ್ಯವೇ ಇದೆ. ಈ ವರ್ಷದ ಸಂದೇಶವನ್ನು ಒಂದು ಗ್ರಂಥರೂಪದಲ್ಲಿ ಪ್ರಚುರಪಡಿಸಬೇಕೆಂದು ಶ್ರೀ ಗುರುಪ್ರೇರಣೆಯಿಂದ ನಿಶ್ಚಯಿಸಿದೆವು.

ಈ ಕಾರ್ಯವು ಶ್ರೀ ದಾಸನವಮೀ ಮಹೋತ್ಸವದ ಆರಂಭಕ್ಕೆ ಸಿದ್ಧವಾಗಬೇಕೆಂದು ನಮ್ಮೆಲ್ಲರ ಆಶೆ. ಆದರೆ ಬಹಳ ಅಲ್ಪಕಾಲದಲ್ಲಿಯೇ ಗ್ರಂಥದ ಮುದ್ರಣವು ಆಗಬೇಕಾಯಿತು. ನಮ್ಮ ಆತುರದಲ್ಲಿ ಲೋಪಗಳೇನಾದರೂ ಕಂಡುಬಂದರೆ ವಾಚಕವೃಂದವು ಉದಾರತೆಯಿಂದ ದೋಷಗಳನ್ನು ತಿಳಿಸಿದಲ್ಲಿ, ಮುಂದಿನ ಮುದ್ರಣದಲ್ಲಿ ಅವುಗಳನ್ನು ತಿದ್ದಿಕೊಳ್ಳುವೆವು.

ಶ್ರೀಧರ ಭಕ್ತಮಂಡಲಿ
ಸಾಗರ

ತಾ॥ ೬-೩-೧೯೫೬

# ವಿಷಯಾನುಕ್ರಮಣಿಕೆ

ಪುಟ

## ವಿಶ್ವಧರ್ಮ ಸೂರ್ಯೋದಯ


| | |
|---|---|
| ವಿಶ್ವಭಾಗ್ಯೋದಯ .. .. | ೨ |
| ಧರ್ಮ ಮತ್ತು ಧರ್ಮದ ಪ್ರಭು .. .. | ೩ |
| ಆನಂದಘನ ಪರಮಾತ್ಮನು .. .. | ೪ |
| ಆತ್ಯಂತಿಕ ಹಿತ .. .. | ೫ |
| ಸನಾತನ ಧರ್ಮ .. .. | ೫ |
| ಮಾನವ ಜೀವನದ ಹೆಗ್ಗುರಿ .. .. | ೫ |
| ವೈದಿಕ ಧರ್ಮದ ಹೆಚ್ಚುಗಾರಿಕೆ .. .. | ೬ |
| ತತ್ವಜ್ಞಾನದ ತಾಯಿನಾಡು .. .. | ೬ |
| ಹಿಂದೂ ಸಂಸ್ಕೃತಿಯು .. .. | ೭ |
| ಹಿಂದು .. .. | ೮ |
| ಹಿಂದುಸ್ಥಾನ .. .. | ೯ |
| ಭಾರತ .. .. | ೧೨ |
| ಭಾರತದ ಶ್ರೇಷ್ಠತ್ವ .. .. | ೧೩ |
| ಭಾರತೀಯರು .. .. | ೧೪ |
| ವೇದದಲ್ಲಿ ಭಾರತ .. .. | ೧೫ |
| ಭಾರತ ಶಬ್ದದ ವ್ಯುತ್ಪತ್ತಿ .. .. | ೧೫ |
| ಆರ್ಯ ಶಬ್ದ .. .. | ೧೬ |
| ಎಲ್ಲರ ಕರ್ಮಭೂಮಿ ಭಾರತವರ್ಷ .. .. | ೧೮ |
| ಆರ್ಯ ಮತ್ತು ಆರ್ಯಭೂಮಿ .. .. | ೧೯ |
| ಆರ್ಯ ಮತ್ತು ಆರ್ಯಾವರ್ತದ ಲಕ್ಷಣ .. .. | ೨೧ |
| ವಿದೇಶೀಯರ ಅಭಿಪ್ರಾಯ .. .. | ೨೧ |
| ವರ್ಣಧರ್ಮ ಕರ್ಮಗಳು .. .. | ೨೯ |
| ವರ್ಣಗಳ ಉಪಯುಕ್ತತೆ .. .. | ೩೧ |
| ವರ್ಣ ವೈಶಿಷ್ಟ್ಯ .. .. | ೩೨ |
| ಅಖಿಲ ಮಾನವ ಧರ್ಮ .. .. | ೩೩ |
| ಹಿಂದು ಶಬ್ದದ ವ್ಯಾಖ್ಯೆಗಳು .. .. | ೩೪ |
| ಹಿಂದುವಿನ ಸ್ವಾಭಾವಿಕ ಗುಣಗಳು .. .. | ೩೯ |

ಪುಟ

## ಆದರ್ಶ ರಾಜ್ಯಪದ್ಧತಿಯ ರಾಮರಾಜ್ಯ

ಭಾರತದ ರಾಮರಾಜ್ಯವಾಗುವ ಕೋರಿಕೆ .. .. ೪೨
ಧರ್ಮಮೂರ್ತಿ ಶ್ರೀರಾಮನು .. .. ೪೩
ಗಾಂಧೀಜಿಯವರ ಅನುಭವ .. .. ೪೪
ವಾಲ್ಮೀಕಿ ನಾರದರ ಸಂವಾದ .. .. ೪೫
ಶ್ರೀರಾಮನ ವರ್ಣನೆ .. .. ೪೬
ಶ್ರೀರಾಮನ ಆದರ್ಶ ಗುಣಗಳು .. .. ೪೯
ಶ್ರೀರಾಮನು ಧರ್ಮಾವತಾರ .. .. ೫೪
ಆರ್ಯಸಂಸ್ಕೃತಿಯ ಆದರ್ಶಪುರುಷ ಶ್ರೀರಾಮ .. ೫೫
ಶ್ರೀರಾಮನ ಲೋಕಪ್ರಿಯತೆ ಮತ್ತು ಸರ್ವಸಮತ್ವ .. ೫೬
ಶ್ರೀರಾಮನ ಪಿತೃಭಕ್ತಿ .. .. ೫೭
ಶ್ರೀರಾಮನ (ಸ್ಥಿತಪ್ರಜ್ಞತ್ವ) ಅಂತರಸ್ಥಿತಿ .. .. ೫೮
ಶ್ರೀರಾಮನ ಆತ್ಮಸ್ಥಿತಿ .. .. ೫೯
ಸಾಪತ್ನ ಆದರ್ಶ .. .. ೬೦
ಶ್ರೀರಾಮನ ಧರ್ಮದೃಷ್ಟಿ .. .. ೬೩
ದುರ್ದಮ್ಯ ದೈವೀ ವಿಲಾಸ .. .. ೬೫
ರಾಮನು ನುಡಿದ ಸತೀ ಧರ್ಮ .. .. ೬೯
ಮನುಷ್ಯನ ಆದರ್ಶ ಗುಣಗಳು .. .. ೭೦
ಶ್ರೀರಾಮನ ದಯೆ ಮತ್ತು ಬ್ರಾಹ್ಮಣ ಪೂಜ್ಯತೆ .. ೭೧
ಶ್ರೀರಾಮನ ವಿವೇಕ ವಿಚಾರ .. .. ೭೩
ಸಮಾಜ ಮತ್ತು ಸುರಾಜ್ಯದ ವ್ಯವಸ್ಥಿತರೂಪ .. ೭೪
ಪುರೋಹಿತರು .. .. ೭೫
ಅಮಾತ್ಯರು .. .. ೭೬
ಪ್ರಾತರುತ್ಥಾನ .. .. ೭೭
ಕಾರ್ಯಾಲೋಚನೆ ಮತ್ತು ಕಾರ್ಯ .. .. ೭೮
ಸಮಾಜಶಾಸ್ತ್ರದ ಕೆಲವು ನಿಯಮಗಳು .. .. ೭೯
ಅಧಿಕಾರಿ ವರ್ಗದ ನಿಯೋಜನೆ .. .. ೮೨
ದುರ್ಜನರ ಸಂಗತ್ಯಾಗ .. .. ೮೩
ಅಯೋಧ್ಯೆಯ ವರ್ಣನೆ .. .. ೮೩
ಮುಖಂಡರ ಕರ್ತವ್ಯ ಮತ್ತು ಆದರ್ಶ ಸ್ವರಾಜ್ಯ .. ೮೪
ಭರತನಿಗೆ ಶ್ರೀರಾಮನ ಉಪದೇಶ .. .. ೮೫
ಭರತನ ಪ್ರಶ್ನೆ .. .. ೯೨

| | ಪುಟ |
|---|---|
| ಶ್ರೀರಾಮನು ಜಾಬಾಲಿಗಳಿಗಿತ್ತ ಉತ್ತರ | ೯೩ |
| ಶ್ರುತಿಯ ಆಸ್ತಿಕ್ಯ ಉಪದೇಶ | ೯೬ |
| ನಾಸ್ತಿಕತೆಯ ದುಷ್ಪರಿಣಾಮ | ೯೬ |
| ನಿಷಿದ್ಧ ಕರ್ಮದಿಂದಾಗುವ ಕೇಡು | ೯೭ |
| ರಾಜ್ಯಕರ್ತರ ಹೊಣೆಗಾರಿಕೆ | ೯೮ |
| ಸತ್ಯ | ೯೮ |
| ಪುನರ್ಜನ್ಮ | ೧೦೦ |
| ಪುನರ್ಜನ್ಮವು ಕರ್ಮಫಲರೂಪವು | ೧೦೦ |
| ಜನ್ಮಕ್ಕೆ ಕಾರಣ ವಾಸನೆ | ೧೦೩ |
| ಪುನರ್ಜನ್ಮದ ವಿಷಯದಲ್ಲಿ ಶ್ರುತಿಪ್ರಮಾಣಗಳು | ೧೦೩ |
| ನಿಷ್ಕಾಮನು ಬ್ರಹ್ಮೈಕ್ಯವನ್ನು ಪಡೆಯುವನು | ೧೦೪ |
| ಅವಿದ್ವಾಂಸರಿಗೇ ಪುನರ್ಜನ್ಮ | ೧೦೪ |
| ದೇಹವು ಆತ್ಮವಲ್ಲ | ೧೦೫ |
| ಸಂಸಾರ ಮತ್ತು ಮೋಕ್ಷ | ೧೦೫ |
| ಈ ಜನ್ಮದಲ್ಲೇ ಮುಕ್ತನಾಗಬೇಕು | ೧೦೬ |
| ಯಮ ನಚಿಕೇತರ ಸಂವಾದ | ೧೦೭ |
| ಲೋಕ ಮತ್ತು ಲೋಕಾಂತರ ಪ್ರಾಪ್ತಿ | ೧೦೯ |
| ಪರಲೋಕದ ಮಾರ್ಗದ್ವಯ | ೧೧೦ |
| ಇಷ್ಟಾಪೂರ್ತ ಕರ್ಮ | ೧೧೦ |
| ಬ್ರಹ್ಮಲೋಕ ಗಮನ | ೧೧೧ |
| ಶ್ರಾದ್ಧ | ೧೧೫ |
| ಶ್ರಾದ್ಧದ ಉದ್ದೇಶ್ಯ | ೧೧೫ |
| ಪಿತೃಲೋಕ | ೧೧೫ |
| ದೇವ, ಪಿತೃ ಯಜ್ಞ | ೧೧೬ |
| ಅಗ್ನಿಯು ದೇವತೆಗಳ ಮುಖ | ೧೧೬ |
| ಹವ್ಯ ಕವ್ಯ | ೧೧೬ |
| ಪರಮಾತ್ಮನ ಮುಖ | ೧೧೭ |
| ಬ್ರಾಹ್ಮಣ ಭೋಜನ | ೧೧೭ |
| ಬ್ರಾಹ್ಮಣ ಭೋಜನದ ಪ್ರಯೋಜನ | ೧೧೭ |
| ಸಂಕಲ್ಪದಿಂದ ಕೊಟ್ಟದ್ದು ಮುಟ್ಟುವುದು | ೧೧೮ |
| ಮನೋಭಾವನೆ | ೧೧೯ |
| ಎಲ್ಲಾ ಮನೋಮಯ | ೧೧೯ |

ಪುಟ

ಅಪರಿಹಾರ್ಯ ಈಶಸೃಷ್ಟಿ .. .. ೧೩೦
ಶ್ರುತಿ ಸ್ಮೃತಿ ವಚನ .. .. ೧೩೦
ಶ್ರುತಿಯ ಏಕಾತ್ಮ ಉಪದೇಶ .. .. ೧೩೩
ಯಜ್ಞ, ದಾನ, ತಪಸ್ಸು .. .. ೧೩೩
ಯಜ್ಞದ ಮಹತ್ವ .. .. ೧೩೩
ತಪಸ್ಸಿನ ಮಹತ್ವ–ತಪಸ್ಸು .. .. ೧೩೪

## ವೈದಿಕ ವಾಙ್ಮಯ

ವೈದಿಕ ಆರ್ಯಸಂಸ್ಕೃತಿಯು ವೇದಮೂಲ .. .. ೧೪೧
ಅಪೌರುಷೇಯ ವೇದ .. .. ೧೪೧
ವೇದದ ಅರ್ಥ .. .. ೧೪೧
ವೇದದ ಉತ್ಪತ್ತಿ .. .. ೧೪೩
ಮಂತ್ರಕೃತ ಮತ್ತು ಮಂತ್ರಪತಿ ಋಷಿಗಳು .. ೧೪೪
ವೇದದಿಂದ ಅಲೌಕಿಕ ಜ್ಞಾನಪ್ರಾಪ್ತಿ .. .. ೧೪೪
ಭಕ್ತಿಯೋಗದ ರಹಸ್ಯ .. .. ೧೪೫
ವೇದ ವಿಷಯಕ ಋಷಿ ಮುನಿಗಳ ಮತ .. .. ೧೪೬
ವೇದದಿಂದ ಸೃಷ್ಟ್ಯುತ್ಪತ್ತಿ .. .. ೧೪೭
ವೇದವು ಧರ್ಮಮೂಲ .. .. ೧೪೭
ಉತ್ಕ್ರಾಂತಿವಾದ .. .. ೧೪೮
ಅಪಕ್ರಾಂತಿವಾದ .. .. ೧೪೯
ವೇದ ಮತ್ತು ಧರ್ಮಗ್ರಂಥಗಳ ಬಗ್ಗೆ ಪಾಶ್ಚಾತ್ಯರ ಮತ .. ೧೪೯
ವೇದವೇದ್ಯ ಪರಮಾತ್ಮ .. .. ೧೫೬
ಋಗ್ವೇದದಲ್ಲಿ ಪರಮಾತ್ಮ ಸೃಷ್ಟಿ ಕ್ರಮದ ವರ್ಣನೆ .. ೧೫೬
ಋಗ್ವೇದ ನಾಸದೀಯ ಸೂಕ್ತ .. .. ೧೫೬
ಅಜ್ಞಾತವಾದ .. .. ೧೬೩
ಆತ್ಮನಿಷ್ಠರ ಆತ್ಮಗೀತ .. .. ೧೭೧
ಶ್ರುತಿಯಲ್ಲಿ ಸಂಘಟನೆ .. .. ೧೭೫
ಆರ್ಯಸಂಸ್ಕೃತಿಯು ಸಾಮ್ಯವಾದ .. .. ೧೭೭
ಭಗವಂತನ ಪ್ರಿಯಭಕ್ತ ಮತ್ತು ಮುಮುಕ್ಷು .. ೧೮೩
ಶಿಷ್ಯನ ದಿವ್ಯಜೀವನ .. .. ೧೮೫
ಶಿಷ್ಯನಿಗೆ ವೇದದ ಉಪದೇಶ .. .. ೧೮೭

| | | | |
|---|---|---|---|
| | | | ಪುಟ |
| ವೈದಿಕ ಪ್ರಾರ್ಥನೆ | .. | .. | ೧೯೩ |
| ಲೋಕನಾಯಕರ ಹೊಣೆಗಾರಿಕೆ | .. | .. | ೧೯೯ |
| ಶ್ರುತಿಯ ಉಪದೇಶದ ತಾತ್ಪರ್ಯ | .. | .. | ೨೦೧ |
| ಜ್ಞಾನಿಗಳ ವ್ಯವಹಾರ | .. | .. | ೨೦೩ |
| ದ್ವೈತಾದ್ವೈತ ವಿವೇಕ | .. | .. | ೨೦೫ |
| ಬ್ರಾಹ್ಮಣರು | .. | .. | ೨೦೭ |
| ಮನುಷ್ಯ ಜಾತಿಯ ವಿಶೇಷ | .. | .. | ೨೧೦ |
| ಗೃಹಸ್ಥಾಶ್ರಮದ ಮೂಲ | .. | .. | ೨೧೨ |
| ಸತಿ ಪತಿಗಳು | .. | .. | ೨೧೫ |
| ಆರ್ಯರ ವಿಭಾಗ ಪದ್ಧತಿ | .. | .. | ೨೧೮ |


## ಭಾರತದ ಸದ್ಯಃ ಪರಿಸ್ಥಿತಿಯ ಕೆಲವು ವಿಚಾರಗಳು


| | | | |
|---|---|---|---|
| ಆರ್ಯರ ವಿವಾಹ ಪದ್ಧತಿ | .. | .. | ೨೨೦ |
| ಸತಿ, ಪತಿ ಮತ್ತು ಸಂತತಿಯಲ್ಲಿ ಆರ್ಯರ ದೃಷ್ಟಿ | | .. | ೨೨೧ |
| ಋಣತ್ರಯ | .. | .. | ೨೨೨ |
| ಕನ್ಯಾದಾನ | .. | .. | ೨೨೪ |
| ಸಪ್ತಪದಿ | .. | .. | ೨೨೫ |
| ದೇವತಾ ಪ್ರಾರ್ಥನೆ | .. | .. | ೨೨೭ |
| ಲಾಜಾ ಹೋಮ | .. | .. | ೨೨೭ |
| ಪ್ರಕೃತಿ ಪುರುಷರು | .. | .. | ೨೩೦ |
| ಸ್ತ್ರೀ ಪುರುಷರ ಏಕದೇಹನ್ಯಾಯ | .. | .. | ೨೩೧ |
| ವಿಧವಾ ವಿವಾಹ | .. | .. | ೨೩೨ |
| ಪತಿ ಪತ್ನಿಯರ ಸಂಬಂಧ | .. | .. | ೨೩೩ |
| ವಿಧವಾ ಧರ್ಮ | .. | .. | ೨೩೮ |
| ಸಹಶಿಕ್ಷಣ ಮತ್ತು ಸಹಚರ್ಯ | .. | .. | ೨೪೩ |
| ತತ್ವಜ್ಞಾನಿ | .. | .. | ೨೪೫ |
| ಆರ್ಯರ ಸ್ವಭಾವ | .. | .. | ೨೪೬ |
| ಸಂಸ್ಕಾರಗಳು | .. | .. | ೨೪೬ |
| ಪ್ರವೃತ್ತಿ, ನಿವೃತ್ತಿರೂಪವಾದ ಸಗುಣ ನಿರ್ಗುಣೋಪಾಸನೆ | | .. | ೨೪೬ |
| ಆರ್ಯಸಂಸ್ಕೃತಿಯು ಮೋಕ್ಷಪ್ರಾಣವಾದುದು | | .. | ೨೪೮ |
| ಹರಿಜನರ ಜನ್ಮ | .. | .. | ೨೪೯ |

| | ಪುಟ |
|---|---|
| ಪಾವಿತ್ರ್ಯ | ೩೪೯ |
| ಅಸ್ಪೃಶ್ಯತೆಯ ಕಾರಣ | ೩೫೦ |
| ಸ್ವಧರ್ಮ | ೩೫೧ |
| ಆರ್ಯರ ವಿಶಾಲ ದೃಷ್ಟಿ | ೩೫೧ |
| ಪೂರ್ವಸಂಸ್ಕಾರ | ೩೫೩ |
| ಆಹಾರ ಶುದ್ಧಿ | ೩೫೪ |
| ಧರ್ಮಾಂತರಿಸುವ ಕ್ರಮ | ೩೫೫ |
| ಕ್ಷೇಮಕರ ರಾಜ್ಯಪದ್ಧತಿ | ೩೫೬ |
| ಹರಿಜನರ ಉದ್ಧಾರ | ೩೫೭ |
| ವೈದಿಕ ರಾಷ್ಟ್ರಗೀತೆ | ೩೬೧ |
| ಗೋರಕ್ಷಣ | ೩೬೩ |



ಶ್ರೀ ಶ್ರೀಧರಸ್ವಾಮಿಜೀ ಮಹಾರಾಜ್

ॐ

ಶೃಣ್ವಂತು ವಿಶ್ವೇ ಅಮೃತಸ್ಯ ಪುತ್ರಾಃ

# ಆ ರ್ಯ ಸಂ ಸ್ಕೃತಿ

## ಭಗವಾನ್ ಶ್ರೀಧರ ಪರಮಹಂಸರ
## ದಿವ್ಯ ಸಂದೇಶ

ನಿಜಕಿರಣ ವಿಕಾಸಿತಂ ಜಗತ್
ಗಮಯತಿ ನಿಜಸೌಖ್ಯಮುದ್ವಯಂ ಯತ್ ।
ಸುಖಶರಧಿಭವಾಂಶುಮಾನಯಂ
ಜಗತಿ ವಿಜಯತೇಽತ್ರ ವಿಶ್ವಧರ್ಮಃ ॥

## ವಿಶ್ವಧರ್ಮ ಸೂರ್ಯೋದಯ

ಇದು ವಿಶ್ವಧರ್ಮರೂಪನಾದ ಸೂರ್ಯನ ಉದಯಕಾಲ; ಎಷ್ಟು ಸುಶಾಂತ ಸಮಯವಿದು. ದೇವತೆಗಳೇ ಪಕ್ಷಿಗಳಾಗಿ ವಿಧವಿಧವಾದ ಕಲರವಗಳಿಂದ ಈತನನ್ನು ಸ್ತುತಿಸುತ್ತಲಿಹರು. ಈ ಸಮಯದಲ್ಲಿಯೇ ಮುಮುಕ್ಷು ಜನರೆಲ್ಲ ತಮ್ಮ ಹೃನ್ಮಂದಿರಗಳಲ್ಲಿ ಪವಡಿಸಿದ ಆತ್ಮದೇವನನ್ನು ಉದಯರಾಗವನ್ನು ಪಾಡಿ ಎಬ್ಬಿಸುತ್ತಲಿಹರು.

ಈ ವಿಶ್ವಧರ್ಮರೂಪವಾದ ಸೂರ್ಯನ ಕಿರಣಗಳೆಲ್ಲ ಅತಿ ಮೃದು ಮಧುರವಾಗಿರುವುವು. ಇವು ಎಂತಹ ನಿಶ್ಚೇಷ್ಟನಾದವನಿಗೂ ಚೇತನೆಯನ್ನು ಕೊಡಬಲ್ಲವು. ಈತನ ಈ ಆನಂದಸಾಂದ್ರಕಿರಣಗಳಿಂದ ವಿಶ್ವಕಮಲವಿದು ವಿಕಸಿತವಾಗಿ ಆನಂದಹಾಸವನ್ನು ಬೀರುತ್ತಲಿಹುದು. ಉದಯಿಸುತ್ತಿರುವ ಈ ಸೂರ್ಯದೇವನು ತನ್ನ ಸೊಬಗಿನಿಂದ ವಿಶ್ವಜನರ ಮನವನ್ನೆಲ್ಲ ಸಹಜವಾಗಿ ತನ್ನ ಆವಿರ್ಭಾವಕ್ಕೆ ಕಾರಣವಾದ ಪರಮಾತ್ಮನ ಸುಖ ಶರಧಿಯ ಕಡೆಗೆ ಸೆಳೆಯುತ್ತಲಿಹನು. ಮನಸ್ಸಿನ ಹರಿದಾಟವನ್ನು ನಿಲ್ಲಿಸುವ ಸುಂದರ ಕೋಮಲ ಕಿರಣಪಾಶಗಳು ಅತಿ ಮನೋಹರವಾಗಿಹವು. ವಿಶ್ವಕ್ಕೆಲ್ಲಾ ಕವಿದಿರುವ ಕತ್ತಲೆಯನ್ನು ಕತ್ತರಿಸುತ್ತಿದ್ದರೂ ಎಷ್ಟು

ಕಮನೀಯ ಮೃದುವಾಗಿ ಕಂಗೊಳಿಸುತ್ತಿಹವು. ಪರಮಾತ್ಮನ ಆ ಆನಂದ ಶರಧಿಯಿಂದ ಮೇಲೆ ಮೇಲೆ. ಏರಿಬಂದ ಹಾಗೆಲ್ಲ ವಿಶ್ವಜನರ ಹೃದಯ ಪ್ರದೇಶದಲ್ಲೆಲ್ಲ ಧರ್ಮದಿನಮಣಿಯ (ಆನಂದದ) ಅಚ್ಚು ಸ್ಪಷ್ಟವಾಗಿ ಕಾಣುತ್ತಿಹುದಲ್ಲ! ವಿಶ್ವಜನರ ಅಂತರಂಗದ ಶಾಂತಿ ಸಮಾಧಾನವು ಉಕ್ಕೇರಿ ಹೊರಸೂಸಿ ಎಲ್ಲವೂ ಒಟ್ಟಾಗಿ ಆ ರಕ್ತ ವಾತಾವರಣದ ಮನೋಹರ ದೃಶ್ಯವನ್ನೆಸಗುತ್ತ ವಿಶ್ವಧರ್ಮದ ಆನಂದರೂಪವಾದ ಈ ಸೂರ್ಯನನ್ನು ಎದುರುಗೊಳ್ಳುವ ಚಂದವು ಬಹು ಅಂದವಾಗಿಹುದು! ಎಂತಹ ಆಹ್ಲಾದಕರವಾದ ದೃಶ್ಯವಿದು! ಎಂತಹ ನಿತಾಂತ ಶಾಂತ ವಾತಾವರಣವನ್ನು ನಿರ್ಮಿಸುತ್ತಿಹುದು!

## ವಿಶ್ವಭಾಗ್ಯೋದಯ

ಈ ವಿಶ್ವಧರ್ಮದಿನಮಣಿಯ ಉದಯವೇ ವಿಶ್ವಸುಖೋದಯವು. ಇದೇ ವಿಶ್ವಭಾಗ್ಯೋದಯವು. ಇಂತಹ ಸುಮುಹೂರ್ತದಲ್ಲಿ ಭವಿತವ್ಯತೆಯ ಮಂಗಳವಾದ್ಯಗಳು ಎಂತಹ ಇಂಪಾದ ಸ್ವರದಿಂದ ಅಂತರಂಗದ ದಿವ್ಯಸುಖದ ತರಂಗಗಳನ್ನು ಮೇಲಿಂದ ಮೇಲೆ ಉಂಟುಮಾಡುತ್ತಿಹವು. ಎಲ್ಲೆಡೆಯಲ್ಲಿಯೂ ಹರಡಿರುವ ಈತನ ಜಯ ಜಯಕಾರದ ಈ ಧ್ವನಿಯು ಯಾವ ದಿವ್ಯ ಆನಂದದಲ್ಲಿ ಮೈಮರೆಸುತ್ತಿರುವುದೋ ಅದು ಅವರ್ಣನೀಯವಾಗಿಹುದು.

## ಧರ್ಮ ಮತ್ತು ಧರ್ಮದ ಪ್ರಭು

"ಧರ್ಮೋ ವಿಶ್ವಸ್ಯ ಜಗತಃ ಪ್ರತಿಷ್ಠಾ" ಮ. ನಾ. ಉ. ಈ ಧರ್ಮವೇ ಎಲ್ಲಾ ಜಗತ್ತಿಗೆ ನೆಲೆನಿಲ್ಲಲು ಭದ್ರವಾದ ತಳಹದಿಯಾಗಿರುವುದೆಂದು ವೇದವು ಸಾರುತ್ತಿದೆ. ಸ್ವರೂಪದ ದಿವ್ಯಬೋಧವಾಗುವ ಇಂತಹ ಮಂಗಲಮಯ ಪ್ರಾತಃಕಾಲದ ಶಾಂತ ಮತ್ತು ಉಲ್ಲಸಿತ ವಾತಾವರಣದಲ್ಲಿ ಈ ಸನಾತನ ಧರ್ಮದ, ವಿಶ್ವಭಾಗ್ಯೋದಯದ ಶುಭಮುಹೂರ್ತದಲ್ಲಿ ತನ್ನ ಕರುಣೆಯಿಂದ ಜೀವಿಗಳನ್ನು ಸಂಸಾರದುಃಖದಿಂದ ಮುಕ್ತರನ್ನಾಗಿ ಮಾಡುವ ಆ ಅನಂತ ಚಿತ್ಸುಖಸ್ವರೂಪನಾದ ಪರಮಾತ್ಮನನ್ನು ಧ್ಯಾನಿಸೋಣ!

"ಧರ್ಮಕೃದ್ಧರ್ಮಗುಬ್ಧರ್ಮೀ" (ವಿಷ್ಣು ಸಹಸ್ರನಾಮ) ಧರ್ಮವನ್ನು ಸೃಜಿಸಿದವನು, ಧರ್ಮದ ರಕ್ಷಣೆ ಮಾಡುವವನು, ಧರ್ಮದ ಆಧಾರವೂ ಸಹ ಈ ಪರಮಾತ್ಮನೇ. "ಧರ್ಮಾವನಾಯೋರು ಕೃತಾವತಾರಃ" (ಭಾಗವತ) ಈ ಧರ್ಮದ ರಕ್ಷಣೆಗಾಗಿ ಆಗಾಗ ಅವತಾರ ಮಾಡಿದವನೂ ಪರಮಾತ್ಮನೇ. 'ಧರ್ಮಮೂಲಂ ಹಿ ಭಗವಾನ್' ಪರಮಾತ್ಮನೇ ಈ ಧರ್ಮದ ಮೂಲರೂಪನು. 'ಧರ್ಮಸ್ಯ ಪ್ರಭುರಚ್ಯುತಃ' (ವಿಷ್ಣು ಸಹಸ್ರನಾಮ) ಈ ವಿಶ್ವಧರ್ಮದ ಪ್ರಭುವು ಕೂಡಾ ಪರಮಾತ್ಮನೇ. 'ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಂ। ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋವಿದ್ಧಿ ಮಾಮಕಂ' (ಗೀತಾ ೧೫–೧೨) ಎನ್ನುವುದಾಗಿ ಉದ್ಘೋಷಿಸಿದ ಪರಮಾತ್ಮನ ಪ್ರಕಾಶವೇ ಈ ವಿಶ್ವಧರ್ಮದ ದಿನಮಣಿಯಲ್ಲಿ ತುಂಬಿ ಹೊರತುಳುಕುತ್ತಿದೆ. ಆದುದರಿಂದಲೇ ಈತನನ್ನು 'ಧರ್ಮೋ ಧರ್ಮವಿದುತ್ತಮಃ' (ವಿಷ್ಣು ಸಹಸ್ರನಾಮ) ಎನ್ನುವರು. ಧರ್ಮರೂಪನೂ ಇವನೇ ಸರಿ. ಈತನೇ ಧರ್ಮಜ್ಞರಲ್ಲಿ ಅಗ್ರೇಸರನು.

## ಆನಂದಘನ ಪರಮಾತ್ಮನು

ಪರಮಾತ್ಮನು ಆನಂದಘನನು. ಆತನ ಈ ದಿವ್ಯರೂಪದಿಂದ ಅವನು ಈ ಪ್ರಪಂಚದ ಒಳಹೊರಗೆಲ್ಲ ಕಿಕ್ಕಿರಿದು ತುಂಬಿಹನು. ಈತನೇ ಈ ವಿಶಾಲ ವಿಶ್ವದ ಮತ್ತು ಇದರಲ್ಲಿ ಬಾಳಿಬದುಕುವ ಅಖಿಲ ಜೀವಿಗಳ ಏಕಮೇವ ಪರಿಶುದ್ಧರೂಪನು. ನಿಖಿಲ ವಿಶ್ವದ ಈ ಸ್ವರಾಜ್ಯ ಸ್ವಾನಂದ ಸಾಮ್ರಾಜ್ಯದಲ್ಲಿ ಸಂಸಾರ ತಾಪತ್ರಯದ ಸೋಂಕಿಲ್ಲ. ದುಃಖಶೋಕಾದಿಗಳ ಸುಳುವಿಲ್ಲ. ಭೇದದ ಸದ್ದಿಲ್ಲ. ಯಾವ ವೈಷಮ್ಯಕ್ಕೂ ತಾವಿಲ್ಲ. ಹಿರಿ–ಕಿರಿ ಎಂಬ ಮಾತಿಲ್ಲ. ಇಲ್ಲಿ ಪ್ರಪಂಚದ ಯಾವ ಎಡರು–ತೊಡರುಗಳಿಲ್ಲ. ಸುಲಿದ ಬಾಳೆಯ ಹಣ್ಣಿನಂತೆ ಈ ಎಲ್ಲವನ್ನೂ ಕಳೆದುಳಿಯುವ ಆನಂದಮಾತ್ರವಾದ ಇರವು-ಅರಿವುಗಳಿಂದ ಏಕರಸನಾಗಿರುವವನೇ ಪರಮಾತ್ಮನು. ಇವನೇ ನಮ್ಮೆಲ್ಲರ ಸಾರಸುಖರೂಪನು. ಮಹದಾನಂದವನ್ನೀಯುವ ಇಂತಹ ಆನಂದಪ್ರಭಾತದ ಸುಸಮಯದಲ್ಲಿಯೂ ಎಚ್ಚೆತ್ತು

ಕೊಳ್ಳದೆ ಯಾರು ಅಜ್ಞಾನನಿದ್ರೆಯ ಭರದಲ್ಲಿ ಅನಾತ್ಮದೃಷ್ಟಿಯ ಸ್ವಪ್ನವನ್ನು ಕಾಣುತ್ತ ಅದರಲ್ಲಿಯೇ ಮೈಮರೆತಿರುವರೋ ಅಂತಹವರನ್ನು ಶ್ರುತಿ ಮಾತೆಯು 'ಉತ್ತಿಷ್ಠತ ಜಾಗ್ರತ' ಎಂದು ತನ್ನ ಇಂಪಾದ ಮೃದು ಮಧುರವಾದ ವಾತ್ಸಲ್ಯಪೂರ್ಣ ಧ್ವನಿಯಿಂದ ಎಚ್ಚರಿಸುತ್ತಿಹಳು.

"ಪ್ರತ್ಯಹಂ ಪ್ರಾತರುತ್ಥಾಯ ಚಿಂತಯೇದಾತ್ಮನೋ ಹಿತಂ" ಈ ಮಂಗಲಮಯ ಪ್ರಾತಃಕಾಲದಲ್ಲಿ ಬುದ್ಧಿಜೀವಿಗಳಾದ ನಾವು—ಅಖಿಲ ಮಾನವರು—ಒಟ್ಟು ಸೇರಿ ನಮ್ಮ ಹಿತವನ್ನು ಕುರಿತು ವಿಚಾರ ಮಾಡ ಬೇಕಾದುದಲ್ಲವೇ?

## ಆತ್ಯಂತಿಕ ಹಿತ

"ಯದ್ಭೂತಹಿತಮತ್ಯಂತಂ ತತ್ಸತ್ಯಂ ಹಿ ಮತಂ ಮಮ" ಜೀವಮಾತ್ರರ ಆತ್ಯಂತಿಕ ಹಿತವು ಯಾವುದರಿಂದ ಆಗುವದೋ ಅದೇ ಸತ್ಯವೆಂದು ಭಾರತದ ವಚನವಿದೆ. ತ್ರಿಕಾಲ ಸತ್ಯವಾದುದನ್ನೇ ನಿಜವಾದ ಹಿತವೆಂದು ಹೇಳಲಾಗುವದು. ತ್ರಿಕಾಲದಲ್ಲಿಯೂ ಅಬಾಧಿತವಾಗಿರು ವಂತಹುದೇ ಸತ್ಯ; ಎಂದೆಂದಿಗೂ ವಿಕೃತವಾಗದೇ ಇರುವ ಶಾಶ್ವತ ವಸ್ತುವೇ ಸತ್ಯವೆಂದಾಗುವದು. ಈ ಶಾಶ್ವತವಾದ ವಸ್ತುವಿನ ಶೋಧ ಮಾಡುವದೇ ನಿಜವಾದ ನಮ್ಮ ಹಿತ.

## ಸನಾತನ ಧರ್ಮ

"ಸನಾ ಆತನೋತೀತಿ ಸನಾತನಃ" ವಿಶ್ವದಲ್ಲೆಲ್ಲಾ ಶಾಶ್ವತ ಸುಖದ ಪ್ರಚಾರಮಾಡುವದೇ ಸನಾತನ ಧರ್ಮವೆಂದು ಇದರ ಹೆಸರಿ ನಿಂದಲೇ ಸ್ಪಷ್ಟವಾಗುವದು. ನಮ್ಮ ಹಿತವನ್ನು ಕೋರಿ ಶಾಶ್ವತವಾದ ವಸ್ತುವನ್ನು ಗುರುತಿಸಬೇಕಾದರೆ ಈ ಸನಾತನ ಧರ್ಮಕ್ಕೆ ಅಭಿಮುಖ ವಾಗಿ ಅದರ ಮುಖಕಮಲದಿಂದ ಹೊರಟ ಅಮೃತ ವಚನವನ್ನು ಆಲಿಸು ವುದೊಂದೇ ಸಾಧನವಲ್ಲವೆ?

## ಮಾನವ ಜೀವನದ ಹೆಗ್ಗುರಿ

ಈ ಎಲ್ಲಾ ವಿಶ್ವವು ಹಗಲೂ–ಇರುಳೂ ಇಷ್ಟೊಂದು ಕಷ್ಟಪಟ್ಟು ಯಾವ ಇಷ್ಟಸಾಧಿಸುವದರಲ್ಲಿ ಅವಿರತವಾಗಿ ತೊಡಗಿರುವವೆಂಬುದನ್ನು

ವಿಚಾರಿಸಿದರೆ, ಸುಖಕ್ಕಾಗಿಯೇ ಎಂದು ಕೊನೆಗೆ ಕಂಡುಬರುವುದು. "ಸುಖಂ ಲಬ್ಧ್ವಾ ಕರೋತಿ ನಾಸುಖಂ ಲಬ್ಧ್ವಾ ಕರೋತಿ" ಈ ಛಾಂದೋಗ್ಯೋಪನಿಷತ್ತಿನ ವಾಕ್ಯದಿಂದಲೂ ಇದು ಸ್ಪಷ್ಟವಾಗುವುದು. ಈ ಸುಖದ ಶೋಧ ಮಾಡಿ ಸಾಧನಗಳಿಂದ ಇದನ್ನು ಪಡೆದು ಈ ನಿಜವಾದ ಸುಖದಿಂದಲೇ ಬದುಕಿ ಬಾಳುವುದೇ ಮಾನವಜೀವನದ ಹೆಗ್ಗುರಿ ಎಂದು ತಿಳಿದುಬರುವುದು.

## ವೈದಿಕ ಧರ್ಮದ ಹೆಚ್ಚುಗಾರಿಕೆ

ತ್ರಿಕಾಲಾಬಾಧಿತ ವಸ್ತುವಿಗೆ ಅಳಿವಿಲ್ಲ. ನಮಗೆ ಬೇಕಾದುದು ಸಹ ಆ ತ್ರಿಕಾಲಾಬಾಧಿತ ಸುಖವೇ. ತ್ರಿಕಾಲಾಬಾಧಿತ ವಸ್ತುವಿನ ಲಾಭವಾಗಬೇಕೆಂದು ಹೇಳಿದರೂ ನಿಜವಾದ ಸುಖವು ಬೇಕೆಂದು ಹೇಳಿದರೂ ಒಂದೇ. ಶಾಶ್ವತ ವಸ್ತುವಿನ ಹಿರಿಮೆಯನ್ನು ವಿಶ್ವವಿದಿತ ಮಾಡುವುದೇ ಸನಾತನ ವೈದಿಕಧರ್ಮದ ಹೆಚ್ಚುಗಾರಿಕೆ ಎಂದಾದಲ್ಲಿ, ಈ ಧರ್ಮವೇ ನಮ್ಮ ಎಲ್ಲಾ ಮಾನವಜಾತಿಯ ಧರ್ಮವಾಗುವುದು. ಶಾಶ್ವತ ಸುಖ ಯಾರಿಗೆ ತಾನೆ ಬೇಡವಾಗುವುದು? ಸುಖವೆಂಬ ಶಬ್ದಕ್ಕೆ ಶಾಶ್ವತ ಸುಖವೆಂದೇ ಅರ್ಥವಾಗುವುದು. ಸುಖಕ್ಕಾಗಿಯೇ ಉಸಿರಾಡುತ್ತಿರುವ ಯಾವ ಮಾನವನು, ನಿಜವಾದ ಸುಖದ ಮಾರ್ಗದರ್ಶನಕ್ಕೆ ಅವತಾರ ತಾಳಿದ ಈ ಸನಾತನ ಧರ್ಮವನ್ನು ಅಲ್ಲಗಳೆಯುವನು? 'ಸನಾತನ' ಎಂಬ ಹಿರಿಮೆಯ ಹೆಸರಿನಿಂದಲೇ ಈ ವೈದಿಕ ಧರ್ಮವು ವಿಶ್ವಧರ್ಮವೆಂದು ಎಂತಹ ದಡ್ಡನಿಗೂ ತಿಳಿದುಬರುವುದು. ಸತ್ಯಕ್ಕೆ ಹುಸಿ ಇಲ್ಲ. ಹುಸಿಯಿಲ್ಲದಿರುವದೇ ನಿತ್ಯವೆಂತಲೂ, ತತ್ತ್ವವೆಂತಲೂ ಕರೆಸಿಕೊಳ್ಳುವದು. ಈ ಸತ್ಯವಸ್ತುವಿನ ಅಥವಾ ಸತ್ಯಸುಖದ ಜ್ಞಾನವೇ ತತ್ತ್ವಜ್ಞಾನ. ಈ ತತ್ತ್ವಜ್ಞಾನವೇ ಹಿರಿದಾದ ವೈದಿಕ ಸನಾತನ ಧರ್ಮದ ಹೆಚ್ಚಿನ ಲಕ್ಷಣವಾಗಿರುವುದು. ಇದು ತ್ರಿಕಾಲಾಬಾಧಿತವಾಗಿರುವ ಸುಖದ ಸಾಕ್ಷಾತ್ಕಾರ ಮಾಡಿಕೊಡಲು ದೀಕ್ಷೆಗೊಂಡಿದೆ. ಮತ್ತು ಅದಕ್ಕೆ ಬೇಕಾಗಿರುವ ಶ್ರುತಿ–ಸ್ಮೃತಿ–ಪುರಾಣ–ಇತಿಹಾಸಾದಿ ಪ್ರಮಾಣ ಗ್ರಂಥೋಪಗ್ರಂಥಗಳಿಂದಲೂ ಸಹ ಅತ್ಯಧಿಕ ಶೋಭೆಗೊಂಡಿದೆ. ತನಗೆ

ಬೇಕಾದ ಎಲ್ಲಾ ಸಲಕರಣೆಗಳಿಂದ ಇದು ತುಂಬಿಕೊಂಡಿದೆ. ಅಂತಹ ಆದರ್ಶವಾದ ತೇಜಸ್ವಿ ವ್ಯಕ್ತಿಗಳಿಂದಲೂ ಇದು ಪೂರ್ತಿಗೊಂಡಿದೆ.

## ತತ್ವಜ್ಞಾನದ ತಾಯಿನಾಡು

ಜಗತ್ತಿನೊಳಗೆ ಭಾರತವರ್ಷದಲ್ಲಿಯೇ ಈ ಧರ್ಮದ ಪ್ರಾದುರ್ಭಾವವಿದ್ದುದರಿಂದಲೇ "India is the Motherland of Philosophy" ಭಾರತವರ್ಷವೇ ತತ್ವಜ್ಞಾನದ ತಾಯಿನಾಡು ಎಂಬುದಾಗಿ ಪಾಶ್ಚಾತ್ಯ ಜನರು ಹೇಳುತ್ತಿರುವರು. ೧೮೫೮ನೇ ಇಸ್ವಿಯಲ್ಲಿ ಪಾಶ್ಚಾತ್ಯದೇಶದ ಗಣ್ಯ ವಿದ್ವಾಂಸನಾದ ಮ್ಯಾಕ್ಸ್‌ಮುಲ್ಲರ್ ಎಂಬ ಪ್ರಾಧ್ಯಾಪಕನು ವಿಕ್ಟೋರಿಯಾ ರಾಣಿಗೆ ಕಳುಹಿಸಿದ ಪತ್ರವು ಇದಕ್ಕೆ ಸಾಕ್ಷಿಯಾಗಿದೆ.

"If I were to look over the whole world to find out the country most richly endowed with all the wealth, power and beauty, that Nature can bestow, I should point to India."

"ಎಲ್ಲಾ ನೈಸರ್ಗಿಕ ಸಂಪತ್ತು, ಶಕ್ತಿ ಮತ್ತು ಸೌಂದರ್ಯಗಳಿಂದ ಯುಕ್ತವಾದ ದೇಶವು ಯಾವುದೆಂಬುದನ್ನು ಎಲ್ಲಾ ಸೃಷ್ಟಿಯ ಸಮಾಲೋಚನೆಮಾಡಿ ತಿಳಿಸುವ ಪ್ರಸಂಗವು ನನಗೆ ಒದಗಿದರೆ ನಾನು ಕೇವಲ ಭಾರತವನ್ನೇ ಬೆರಳಿಟ್ಟು ತೋರಿಸುವೆನು."

"If I were asked under what sky the human mind has most fully developed some of its choicest gifts, has most deeply pondered on the greatest problems of life and has found solutions of some of them, which well deserve the attention of even those who have studied Plato and Kant, I should point to India."

"ದಿವ್ಯ ಸುಖದ ಪ್ರಾಪ್ತಿಗಾಗಿ ಬೇಕಾದ ಎಲ್ಲಾ ಗುಣಗಳಿಂದ ಪರಾಕಾಷ್ಠೆಯ ವಿಕಾಸಗೊಂಡಿರುವ ಮಾನವ ಮನಸ್ಸು ಯಾವ ದೇಶದಲ್ಲಿ ನೆಲೆಮಾಡಿರುವದೋ, ಪ್ಲೇಟೋ ಮತ್ತು ಕ್ಯಾಂಟ ಇವರ ತತ್ವಜ್ಞಾನದ ತಿರುಳಿನ ಸಂಪೂರ್ಣ ಅಭ್ಯಾಸವನ್ನು ಮಾಡಿ ನೆಲೆನಿಂತ ಪಂಡಿತರ ಮನಸ್ಸನ್ನು ಸಹ ತನ್ನ ಬಧಿಗೆ ಸೆಳೆದೊಯ್ಯುವ ತತ್ವಜ್ಞಾನವು ಯಾವ

ದೇಶದಲ್ಲಿ ನೆಲೆಸಿರುವದೋ, ಜೀವನದ ದೊಡ್ಡ ದೊಡ್ಡ ಗೂಢ ಸಮಸ್ಯೆಗಳನ್ನೆಲ್ಲ ಬಿಡಿಸಿ ಯಾವ ದೇಶದಲ್ಲಿ ಅವುಗಳ ಯಥಾರ್ಥ ಸಮಾಧಾನಗಳನ್ನು ಕೂಡ ಜನರು ಮೈಗೂಡಿಸಿಕೊಂಡು ಬದುಕಿ ಬಾಳುವರೋ, ಆ ದೇಶದ ಹೆಸರನ್ನು ನನಗೆ ಕೇಳುವಲ್ಲಿ ನಾನು ಆ ಆರ್ಯಾವರ್ತ ಅಥವಾ ಭಾರತದ ಕಡೆಗೆ ಬೆರಳಿಟ್ಟು ತೋರಿಸುವೆನು.''

''And if I were asked myself, from what Literature we here in Europe, we who are nurtured almost exclusively on the thoughts of the Greeks and Romans and of the Semetic Race, the Jewish, may draw that corrective which is most wanted in order to make our inner life more perfect, more universal, in fact more truly human, a life not for this life only, but a Transfigured and Eternal life, again I should point to India.''

''ಹೆಚ್ಚಾಗಿ ಗ್ರೀಕ್, ರೋಮನ್, ಯುನಾನಿ, ಜ್ಯೂ ಮುಂತಾದವರ ವಿಚಾರಧಾರೆಯಲ್ಲಿದ್ದ ನಾವು— ಯುರೋಪಿಯನ್ನರು, ಯಾವ ವಾಙ್ಮಯದ ಆಶ್ರಯವನ್ನು ಪಡೆದು ನಮ್ಮ ಆಂತರಿಕ ಆಧ್ಯಾತ್ಮಿಕ ಜೀವನವನ್ನು ಸರಿಯಾಗಿ ಸತ್ಯವಾಗಿ ಅಧಿಕಾಧಿಕ ವಿಕಾಸಗೊಳಿಸುತ್ತಾ ಪೂರ್ಣಪಡಿಸಿ ವಿಶ್ವವ್ಯಾಪಿ ಮಾಡಲು ಸಾಧ್ಯವೋ, ನಿಜವಾಗಿಯೂ ಮಾನವ ಜೀವನದ ಗುರಿಯನ್ನು ಸಾಧಿಸಲು ಶಕ್ಯವೋ, ಯಾವದು ನಶ್ವರವಾದ ಐಹಿಕಸುಖದ ಲಾಲಸೆಯನ್ನೇ ಪೂರ್ಣಮಾಡುವಂತಹದ್ದಾಗದೆ ತನ್ನ ದಿವ್ಯವಾದ ಸಾತ್ವಿಕ ಸೌಂದರ್ಯದಿಂದ ಬೆರಗುಮಾಡಿ ನಮ್ಮನ್ನು ಅನಾದಿಸಿದ್ಧವಾದ ಆನಂದರೂಪವನ್ನೇ ಮಾಡಿಬಿಡುವದೋ, ಆ ವಾಙ್ಮಯವು ಯಾವುದೆಂದು ನಾನು ವಿಚಾರಿಸುವಲ್ಲಿ ಮತ್ತೊಮ್ಮೆ ನನ್ನ ಬೆರಳು ಇದ್ದಕ್ಕಿದ್ದಹಾಗೆ ತನ್ನಿಂದ ತಾನೆ ಭಾರತ, ಆರ್ಯಾವರ್ತ ಅಥವಾ ಹಿಂದೂಸ್ಥಾನದ ಕಡೆಗೆ ತಿರುಗುವುದು.''

## ಹಿಂದೂ ಸಂಸ್ಕೃತಿಯು

ಪ್ರಚಲಿತವಾಗಿದ್ದ ಮತ್ತು ನಾಮಶೇಷವಾದ ಎಲ್ಲಾ ಸಂಸ್ಕೃತಿಗಳಿಗಿಂತಲೂ ಹಿಂದೂಸಂಸ್ಕೃತಿಯು ಅತಿ ಪ್ರಾಚೀನವಾದುದು. ಕೇವಲ

ಒಂದು ತನ್ನ ಸತ್ವಬಲದಿಂದಲೇ ಇದು ಇಂದಿಗೂ ತನ್ನ ಅಸ್ತಿತ್ವವನ್ನು ಕಾಪಾಡಿಕೊಂಡಿದೆ. ಕೆಲವು ಕುರುಡರು ಆನೆಯನ್ನು ಸಂದರ್ಶಿಸಲು ಹೋದಾಗ ಕೈಗೆ ತಾಗಿದ ಒಂದೊಂದು ಅವಯುವವನ್ನು ಸಮಗ್ರ ಆನೆಯೆಂದು ಪರಸ್ಪರರಲ್ಲಿ ಜಗಳವಾಡಿದ ಹಾಗೆ, ಈ ಸಂಸ್ಕೃತಿಯ ಒಂದೊಂದು ಸಿದ್ಧಾಂತವನ್ನೂ ಎತ್ತಿ ಹಿಡಿದು ಇದೇ ಒಂದು ಮುಖ್ಯ ವೆಂದು ಪ್ರತಿಪಾದಿಸಿ ಹಲವರು ತಮ್ಮ ತಮ್ಮ ಸಂಪ್ರದಾಯವನ್ನು ಬೇರೆ ಬೇರೆ ಮಾಡುತ್ತಾ ಹೋದರು. ಬರಬರುತ್ತಾ ಇದರಲ್ಲಿ ಬಹುವಾದ ಮತ-ಪಂಗಡಗಳ ಕವಲು ಬಿಟ್ಟಿತು. ಎಲ್ಲಾ ಶಾಖೋಪಶಾಖೆಗಳಿಂದ ನಮ್ಮ ಒಂದೇ ಒಂದು ಹಿಂದೂ ಸಂಸ್ಕೃತಿಯ ವಿಶಾಲವೃಕ್ಷವು ಬೆಳೆದು ಹರಡಿ ಕೊಂಡಿದೆ ಎಂಬ ಯಥಾರ್ಥ ತಿಳುವಳಿಕೆಯು ಈ ಪಕ್ಷ ಪಂಗಡಗಳಿಗೆ ಬರದೇ, ಸುಮ್ಮನೆ ತಮ್ಮ ತಮ್ಮಲ್ಲಿ ದ್ವೇಷ ಬೆಳೆಸಿಕೊಂಡು ಎಲ್ಲರಿಗೂ ಕಷ್ಟವಾಗುವಂತೆ ಮಾಡಿಕೊಂಡಿರುವರು. ಹೀಗೆ ಒಳಜಗಳಗಳಿಂದಲೂ, ಪರರ ಆಘಾತಗಳಿಂದಲೂ ಈ ಸಂಸ್ಕೃತಿಯು ಜಗತ್ತಿನಲ್ಲಿ ಸಾಕಷ್ಟು ಪಸರಿಸಲಿಲ್ಲವಾದರೂ ತನ್ನ ಒಂದು ವಿಭೂತಿಮತ್ವದಿಂದಲೂ, ಮಾಹಾತ್ಮ್ಯ ದಿಂದಲೂ ಇದು ಈಗಲೂ ಭದ್ರವಾಗಿದೆ. ತನ್ನ ವಿಶ್ವಕಲ್ಯಾಣಕರವಾದ ಶಾಂತಕಿರಣಗಳನ್ನು ನಿಧಾನವಾಗಿ ವಿಶ್ವದಲ್ಲೆಲ್ಲಾ ಹರಡುತ್ತಾ ರಾರಾಜಿ ಸುತ್ತಲಿರುವುದು.

## ಹಿಂದು

ಹಿಂದುಧರ್ಮಪ್ರಲೋಪ್ತಾರೋ ಜಾಯಂತೇ ಚಕ್ರವರ್ತಿನಃ ।
ಹೀನಂ ಚ ದೂಷಯಂತ್ಯೇವ ಹಿಂದುರಿತ್ಯುಚ್ಯತೇ ಪ್ರಿಯೇ ॥

(ಮೇರುತಂತ್ರ ಪ್ರ. ೩೩)

ಹಿಂದೂ ಧರ್ಮವನ್ನು ಅಳಿಸಲು ಪ್ರತಿಜ್ಞೆಯನ್ನು ಮಾಡಿ ಅದರ ಪೂರ್ತಿ ಗಾಗಿ ನಿರಲಸತನದಿಂದ ಅಹೋರಾತ್ರಿಯೂ ಉತ್ಕಟ ಪ್ರಯತ್ನವನ್ನು ಕೈಕೊಂಡ ಮಹಾ ಮಹಾ ಚಕ್ರವರ್ತಿಗಳು ಮುಂದೆ ಆಗಲಿರುವರೆಂದು ಮೇರುತಂತ್ರವೆಂಬ ಗ್ರಂಥದಲ್ಲಿ ಮೊದಲೇ ಹೇಳಿರುವುದು ಕಂಡುಬರುತ್ತಿದೆ. ಈ ಶ್ಲೋಕದಲ್ಲಿಯೇ "ದುಷ್ಟರನ್ನು ದೂಷಿಸುವವನೇ ಹಿಂದು" ಎಂಬ ಹಿಂದು ಶಬ್ದದ ವ್ಯಾಖ್ಯೆಯೂ ಇದೆ. ಕಾಲಾಂತರದಲ್ಲಿ ಕಲಿಬಲ ಹೆಚ್ಚಾದ

ಮೇಲೆ ಖೈಬರ ಮತ್ತು ಸಿಂಧು (ಕಣಿವೆ) ಕೊಡಲುಗಳಿಂದ ವಿದೇಶೀಯರ ಧಾಳಿ ಹೆಚ್ಚಾದಮೇಲೆ ಉತ್ತರದಿಕ್ಕಿನಲ್ಲಿದ್ದ ಹಿಂದು ಜನರು ಈಗ ಬಂದಹಾಗೆ, ಆಗಲೂ ವಿಂಧ್ಯದ ತಮ್ಮ ಬಂಧುಗಳಲ್ಲಿ ಸೇರಿಕೊಂಡರೆಂದು ಈ ಕೆಳಗೆ ಉದಹರಿಸಿದ ಕಾಲಿಕಾಪುರಾಣದ ವಾಕ್ಯದಿಂದ ತಿಳಿದುಬರುತ್ತದೆ.

ಕಾಲೇನ ಬಲಿನಾ ನೂನಮಧರ್ಮ ಕಲಿತೇ ಕಲೌ ।
ಯವನೈರ್ಘೋರಮಾಕ್ರಾಂತಾ ಹಿಂದವೋ ವಿಂಧ್ಯಮಾವಿಶನ್ ॥

## ಹಿಂದುಸ್ಥಾನ

ಬೃಹಸ್ಪತಿ ಆಗಮದಲ್ಲಿ ಹಿಂದುಸ್ಥಾನದ ಸೀಮೆಯನ್ನು ನಿಶ್ಚಿತಮಾಡಿ ಹೇಳಿರುವರು.

ಹಿಮಾಲಯಂ ಸಮಾರಭ್ಯ ಯಾವದಿಂದು ಸರೋವರಂ ।
ತಂ ದೇವನಿರ್ಮಿತಂ ದೇಶಂ ಹಿಂದುಸ್ಥಾನಂ ಪ್ರಚಕ್ಷತೇ ॥

ಹಿಮಾಲಯದಿಂದ ಇಂದು ಸರೋವರದವರೆಗಿನ ದಿವ್ಯದೇಶಕ್ಕೆ ಹಿಂದುಸ್ಥಾನವೆನ್ನುವರೆಂದು ಈ ಶ್ಲೋಕದ ಅರ್ಥವಾಗುವದು. "ಹಿಮಾಲಯಂ" ಈ ಪ್ರಥಮ ಶಬ್ದದ ಪ್ರಥಮಾಕ್ಷರಕ್ಕೆ ಸೀಮಾಂತ್ಯವನ್ನು ಸೂಚಿಸುವ 'ಇಂದುಸರೋವರಂ' ಈ ಶಬ್ದದ 'ಇಂದು' ಎಂಬೀ ಎರಡಕ್ಷರಗಳನ್ನು ಸೇರಿಸಿದರೆ (ಹಿ+ಇಂದು) ಹೀಂದು ಶಬ್ದವಾಗುವದು. ಇದು ಮುಂದೆ ಉಚ್ಚಾರದಲ್ಲಿ ಹ್ರಸ್ವವಾಯಿತು. ಹಿ+ನ್ದು ಈ ಆದ್ಯಂತ ಅಕ್ಷರಗಳನ್ನು ಈ ವಿಧವಾಗಿ ಸೇರಿಸಿದರೆ ಸರಳವಾಗಿ ಹಿಂದು ಶಬ್ದವಾಗುವುದು. ಈ ದೇಶದ ಸೀಮೆಯನ್ನು ತೋರಿಸುವ ಶಬ್ದಗಳಿಂದಲೇ ಇದರೊಳಗಿರುವ ಜನರ ಹೆಸರಿನ ಉತ್ಪತ್ತಿ ಸಿದ್ಧಿಸುವುದೆಂಬುದನ್ನು ಸಹ ಈ ಶ್ಲೋಕದಲ್ಲಿ ತೋರಿಸಿದೆ. ಇಂದು ಸರೋವರ ಶಬದಿಂದ ಉಪಲಕ್ಷಿತವಾದ ಕನ್ಯಾಕುಮಾರಿಯವರೆಗೆ ವಿಸ್ತರಿಸಿರುವ ಹಿಂದುಸ್ಥಾನದ ಸೀಮೆಯನ್ನು ಇಲ್ಲಿ ಹೇಳುವಂತೆ ತೋರುತ್ತದೆ. 'ಹಿಂದು' ಶಬ್ದವು ಯವನರಿಂದ ನಿಯುಕ್ತವಾದುದು. ಇದನ್ನು ಹೊಗಳುವುದಕ್ಕಾಗಿ ಉಪಯೋಗಿಸದೆ ತೆಗಳುವುದಕ್ಕಾಗಿಯೇ ಹೀನ ಎಂಬ ಅರ್ಥದಲ್ಲಿ ಅವರು ಉಪಯೋಗಿಸಿದ್ದರು. ಅದನ್ನೇ ನಾವು ಈಗಲೂ ಏಕೆ ಇಟ್ಟುಕೊಳ್ಳಬೇಕು? ಎಂದು ಕೆಲವರು ಹೇಳುವರು.

ಕೆಲ ಆಧುನಿಕರು ಹಿಂದು ಎಂಬ ಶಬ್ದದಲ್ಲಿ ಎಲ್ಲಾ (ವೈದಿಕ ಮತ್ತು ಅವೈದಿಕ) ಸಂಪ್ರದಾಯಗಳ ಅಂತರ್ಭಾವವಿರುವುದರಿಂದ ಇದನ್ನು ಇಟ್ಟುಕೊಳ್ಳತಕ್ಕದ್ದು ಎಂದೂ ಹೇಳುವರು.

ಹಿಮಾಲಯ ಮತ್ತು ಇಂದುಸರೋವರದ ಗಡಿಯನ್ನಾಲೋಚಿಸಿ ಈ ಗಡಿಯ ಆದ್ಯಂತ ಅಕ್ಷರಗಳ ಸೇರುವಿಕೆಯಿಂದ ಆಗುವ 'ಹಿಂದು' ಶಬ್ದ ನೋಡಿದರೆ ಇದು ಪರಧರ್ಮಿಯರಾಗಲಿ, ಪರದೇಶೀಯರಾಗಲಿ ಕೊಟ್ಟ ಒಂದು ವ್ಯಂಗ ಹೆಸರಲ್ಲವೆಂತಲೂ, ಇದು ಪುರಾತನಕಾಲದಿಂದಲೇ ಇತ್ತೆಂತಲೂ ಸ್ಪಷ್ಟವಾಗುವುದು. ಕೆಲವರ ಮತದ ಪ್ರಕಾರ ಸಿಂಧುವಿನಿಂದ ಜೀಲಂ, ರಾವಿ, ಬಿಯಾಸ, ಸತಲಜ್, ಸರಸ್ವತಿ, ಯಮುನಾ, ಗಂಗಾ ನದಿಗಳನ್ನು ಒಳಗೊಂಡಿರುವ ಏಳು ನದಿಗಳ ತೀರಗಳಲ್ಲಿ ಆರ್ಯರು ಇದ್ದರು ಎಂದು ಗ್ರಹಿಸುವುದಕ್ಕಿಂತಲೂ **"ಗಂಗೇಚ ಯಮುನೇಚೈವ ಗೋದಾವರಿ ಸರಸ್ವತಿ ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು"** ಈ ಮಂತ್ರದಲ್ಲಿದ್ದ ಗಂಗಾ, ಯಮುನಾ, ಸರಸ್ವತಿ, ನರ್ಮದ, ಸಿಂಧು, ಗೋದಾವರಿ, ಕಾವೇರಿ ಈ ಸಪ್ತಮಹಾನದಿಗಳ ತೀರದಲ್ಲೇ ಇದ್ದರು ಎಂದು ಗ್ರಹಿಸುವುದು ಹಿಮಾಲಯದಿಂದ ಇಂದು ಸರೋವರದವರೆಗಿನ ಹಿಂದುಸ್ಥಾನದ ಗಡಿಯ ದೃಷ್ಟಿಯಿಂದಲೂ ಅನುಕೂಲ ವಾಗುವುದು. ತಾವು ವಾಸವಾಗಿದ್ದ ಈ ಸಪ್ತನದಿಗಳ ಉಚ್ಚಾರವನ್ನು ಅವರು ನಿತ್ಯದಲ್ಲೂ ಮಾಡುವುದನ್ನು ನೋಡಿದರೆ ಈ ರೂಪದಿಂದ ಅವರು ತಮ್ಮ ದೇಶದ ಗಡಿಯ ಮತ್ತು ತಮ್ಮ ದೇಶದ ಜನರ ಐಕಮತ್ಯದ ಪ್ರೀತಿಯ ನೆನಪನ್ನೇ ಮಾಡುತ್ತಿದ್ದರೆಂದು ಸ್ಪಷ್ಟವಾಗುವುದು. ಈ ಸಪ್ತ ಮಹಾನದಿಗಳಲ್ಲಿಯೇ ಇಡೀ ಭಾರತವರ್ಷವು ಒಳಪಡುವುದು. ಈ ಸಪ್ತ ನದಿಗಳ ಗಡಿಯ ಹೊರಗೊಳಗೆ ಅಕ್ಕಪಕ್ಕದಲ್ಲಿದ್ದ ಜನರಿಗೇ ಮೊದಲು ಸಪ್ತಸಿಂಧು ಎಂಬ ಹೆಸರಿತ್ತೆಂದು ಕಂಡುಬರುತ್ತದೆ. ಸಿಂಧು ಎಂಬ ಹೆಸರು ನದಿಗೂ ಇದೆ.

ಇಮಮ್ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿಸ್ತೋಮಮ್ ಸಚತಾಪರುಷ್ಣ್ಯಾ।
ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ।
(ಋಗ್ವೇದ ಸಂ. ೮–೩–೬)

"ಅತ್ರ ಪ್ರಧಾನಭೂತಾಃ ಸಪ್ತನದ್ಯಃ ಸ್ತೂಯಂತೇ, ತದವಯುವ ಭೂತಾಶ್ಚ ತಿಸ್ರಃ।" ಇತಿ ಸಾಯಣಃ। ಈ ಮಂತ್ರದಲ್ಲಿ ಗಂಗಾದಿ ಹತ್ತು ನದಿಗಳನ್ನು ಸಂಬೋಧಿಸಿ, 'ನಾನು ಮಾಡುವ ಈ ಸ್ತೋತ್ರವನ್ನು ಸ್ವೀಕರಿಸಿರಿ', ಎಂಬುದಾಗಿ ಪ್ರಾರ್ಥನೆಯಿದೆ. ಇಲ್ಲಿ ಮುಖ್ಯವಾದ ಏಳು ನದಿಗಳ ವರ್ಣನೆಯಿದೆ. ಉಳಿದ ಮೂರು ಅಲ್ಲಿಯ ಸಣ್ಣ ಉಪನದಿಗಳಿರುವುವು ಎಂದು ಸಾಯಣಾಚಾರ್ಯರ ಹೇಳಿಕೆ. "ಸಿಂಧುಃ ಸಮುದ್ರೇ ನದ್ಯಾಂ ಚ ನದೇ" (ವಿಶ್ವಃ) ಸಿಂಧು—ಈ ಶಬ್ದವು ಇಷ್ಟಕ್ಕೂ ಅನ್ವಯಿಸುವುದು: ಸಿಂಧು=ದೇಶ, ಸಿಂಧು=ನದ, ಸಿಂಧು=ಸಮುದ್ರ ಅಂತಯೇ ಯಾವ ನದಿಗೂ ಆ ಸಿಂಧು ಎಂಬ ಹೆಸರಿದೆ. "ಸ್ಯಂದೂ ಪ್ರಸ್ರವಣೇ" ಈ ಧಾತುವಿನಿಂದ ಆದ ಶಬ್ದವಿದು. ಸ್ಯಂದತೇ—ಹರಿಯುವುದೆಂಬ ಅರ್ಥದಿಂದ, 'ನದೀ' ಈ ಅರ್ಥವಾಗುವುದು. ಸಪ್ತಸಿಂಧು, ಇದಕ್ಕೆ ಆಮೇಲೆ 'ಹಪ್ತಹಿಂದು' ಈ ಹೆಸರು ಪ್ರಾಪ್ತವಾಯಿತು. ಕಾಲಾಂತರದಿಂದ ಹಪ್ತ ಶಬ್ದ ಹೋಗಿ ಹಿಂದು ಎಂಬ ಒಂದೇ ಶಬ್ದ ಉಳಿಯಿತು.

'ಸ'ಕಾರದ ಸ್ಥಳದಲ್ಲಿ 'ಹ'ಕಾರದ ಉಚ್ಚಾರ ಮಾಡುವರು. ಸ್ವಸುರ ಶಬ್ದವನ್ನು ಸಿಂಧಿಯಲ್ಲಿ 'ಸ್ವಹುರೋ' ಎನ್ನುವುದಾಗಿ ಉಚ್ಚರಿಸುವರು. ಜೋಧಪುರದ ಬದಿಗೆ 'ಸಾರಾ' ಶಬ್ದವನ್ನು 'ಹಾರಾ' ಎಂಬುವುದಾಗಿ ಉಚ್ಚರಿಸುವರು. ಪ್ರಾಚೀನ ಹಿಂದಿಯಲ್ಲಿ 'ಕೇಸರಿ' ಎಂಬ ಶಬ್ದವನ್ನು 'ಕೆಹರಿ' ಎಂಬುದಾಗಿ ಹೇಳುತ್ತಿದ್ದರು. ಹೊಸ ಹಿಂದಿಯಲ್ಲಿಯೂ 'ಮಾಸ'ಕ್ಕೆ 'ಮಾಹ' ಎನ್ನುವರು. ವರ್ಣಮಾಲೆಯ ದೃಷ್ಟಿಯಿಂದಲೂ 'ಸ'ದಿಂದಲೇ 'ಹ'ಬರುವುದು. ಎರಡೂ "ಮಹಾಪ್ರಾಣವೇ" ಆಗಿರುವುವು. ಈ ಕಾರಣಗಳಿಂದಲೂ 'ಸ'ಕಾರ ಕ್ವಚಿತ್ 'ಹ'ಕಾರವಾಗಿ ಉಚ್ಚರಿಸಲ್ಪಡುವುದು. 'ಸೇಹ್ಯರ್ಪಿಚ್ಚ' (ಪಾ. ಸೂ. ೩—೪, ೫೭) ಹೀಗೊಂದು ಸೂತ್ರವೂ ಇದೆ. 'ಸಿ' 'ಹಿ' ಆಗುವುದುಂಟು ಎಂಬುವುದಕ್ಕೆ ಈ ಸೂತ್ರವೂ ಒಂದು ಆಧಾರವಿದೆ. ವೈದಿಕಪ್ರಯೋಗದಲ್ಲಿಯೂ 'ಸ'ಕಾರದ ಸ್ಥಳದಲ್ಲಿ 'ಹ'ಕಾರ ಕ್ವಚಿತ್ ಕಂಡುಬರುವುದು.

"ಶ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ" (ಶುಕ್ಲ ಯಜುರ್ವೇದ)
"ಹ್ರೀಶ್ಚ ತೇ ಲಕ್ಷ್ಮೀಶ್ಚ ಪತ್ನ್ಯೌ" (ತೈ।ಆ।೩।೧೩।) (ಕೃಷ್ಣ ಯಜುರ್ವೇದ)

ಈ ಎಲ್ಲಾ ವಿಚಾರಗಳಿಂದ 'ಸ'ಕಾರವು 'ಹ'ಕಾರವಾಗುವುದೆಂದು ಸಿದ್ಧವಾದುದರಿಂದ 'ಸಿಂಧು' ಶಬ್ದವೇ 'ಹಿಂದು' ಎಂದಾಗಿದೆ. ಇದು ವಿದೇಶಿ ಜನರಿಂದ ಆದದ್ದಲ್ಲವೆಂದು ಈ ಎಲ್ಲಾ ಪ್ರಮಾಣಗಳಿಂದ ಸ್ಪಷ್ಟವಾಗುವುದು. ಈ ಪ್ರಯೋಗ ಮಾತ್ರ ಕ್ವಚಿತ್ ಕಂಡುಬರುವುದು, ಸರ್ವತ್ರವಲ್ಲ. ನಾವು "ಸಿಂಧಿ" ಎನ್ನುತ್ತೇವೆ, "ಹಿಂದಿ" ಅಲ್ಲ. ಸಿಂಧು ನದಿಗೆ "ಸಿಂಧು" ಎಂತಲೇ ಕರೆಯುತ್ತೇವೆ.

## ಭಾರತ

ಉತ್ತರಂ ಯತ್ಸಮುದ್ರಸ್ಯ ಹಿಮಾದ್ರೇಶ್ಚೈವ ದಕ್ಷಿಣಂ ।
ವರ್ಷಂ ತದ್ಭಾರತಂ ನಾಮ ಭಾರತೀ ಯತ್ರ ಸಂತತಿಃ ॥

ದಕ್ಷಿಣ ಸಮುದ್ರದ ಉತ್ತರಕ್ಕೆ ಮತ್ತು ಹಿಮಾಲಯ ಪರ್ವತದ ದಕ್ಷಿಣಕ್ಕೆ ಅಂದರೆ ಕನ್ಯಾಕುಮಾರಿಯಿಂದ ಹಿಮಾಲಯದವರೆಗಿನ ಎಲ್ಲಾ ಪ್ರದೇಶಕ್ಕೆ ಭಾರತವರ್ಷ ಅಥವಾ ಭರತಖಂಡವೆಂದೂ, ಇದರಲ್ಲಿರುವ ಜನರಿಗೆಲ್ಲಾ ಭಾರತೀಯರೆಂದೂ ಕರೆಯುವರು.

## ಭಾರತದ ಶ್ರೇಷ್ಠತ್ವ

ತತ್ರಾಪಿ ಭಾರತಂ ಶ್ರೇಷ್ಠಂ ಜಂಬೂದ್ವೀಪೇ ಮಹಾಮುನೇ ।
ಯತೋಹಿ ಕರ್ಮಭೂರೇಷಾ ತತೋಽನ್ಯಾ ಭೋಗಭೂಮಯಃ ॥ (ವಿ.ಪು.)

ಜಂಬೂದ್ವೀಪದಲ್ಲಿ ಭಾರತವರ್ಷವು ಶ್ರೇಷ್ಠವಾದದ್ದು. ಇದು ಕರ್ಮಭೂಮಿ ಇರುವುದರಿಂದಲೇ ಇದರ ಶ್ರೇಷ್ಠತ್ವ. ಮಿಕ್ಕವು ಭೋಗಭೂಮಿಗಳೆಂದು ಎನಿಸುವುವು.

ಪುಣ್ಯಪಾವನ ಭೂಮಿಯಾಗಿರುವ ಭಾರತವರ್ಷವೆಂಬ ಹಿಂದೂಸ್ಥಾನದಲ್ಲಿ ಜನ್ಮತಾಳಿದ ಪುಣ್ಯವಂತರು ಪರಮ ಭಾಗ್ಯಶಾಲಿಗಳೆಂದೂ, ಭಗವತ್ಸೇವೆಗೆ ಅನುಕೂಲವಾದ ಈ ಭೂಮಿಯು ಸ್ವರ್ಗಾಪವರ್ಗಕ್ಕೆ ಆಸ್ಪದವಾದುದೆಂದೂ, ಅನೇಕ ಪುರಾಣ–ಶ್ಲೋಕಗಳಿಂದ ಮನದಟ್ಟಾಗುವುದು. ಉದಾಹರಣೆಗಾಗಿ ಒಂದೆರಡು ಶ್ಲೋಕಗಳನ್ನು ಪರಿಶೀಲಿಸೋಣ:—

ಗಾಯಂತಿ ದೇವಾಃ ಕಿಲ ಗೀತಕಾನಿ ಧನ್ಯಾಸ್ತು ತೇ ಭಾರತಭೂಮಿ ಭಾಗೇ ।
ಸ್ವರ್ಗಾಪವರ್ಗಾಸ್ಪದಮಾರ್ಗಭೂತೇ ಭವಂತಿ ಭೂಯಃ ಪುರುಷಾಃ ಸುರತ್ವಾತ್ ॥
(ವಿಷ್ಣು ಪುರಾಣ ೨–೩–೨೪)

ಭಾರತವರ್ಷದಲ್ಲಿದ್ದವರು ಸರ್ವಥಾ ಧನ್ಯರು. ಸ್ವರ್ಗ-ಮೋಕ್ಷಗಳಿಗೂ ಮಾರ್ಗದರ್ಶಕವಾದ ಈ ದಿವ್ಯ ಭೂಮಿಯಲ್ಲಿ ಜನಿಸಿದವರು ಖಂಡಿತ ವಾಗಿಯೂ ಧನ್ಯರು ಎಂದು ಹಿಂದೂ ಜನರನ್ನು ದೇವತೆಗಳೆಲ್ಲ ಪಾಡಿ ಪೊಗಳುವರು. ತಮ್ಮ ಜನ್ಮವು ಅಲ್ಲಿ ಆಗಬೇಕೆಂದು ಕೋರುವರು.

ಅಹೋ ಅಮೀಷಾಂ ಕಿಮಕಾರಿ ಶೋಭನಂ ಪ್ರಸನ್ನ ಏಷಾಂ ಸ್ವಿದುತ ಸ್ವಯಂ ಹರಿಃ ।
ಯೈರ್ಜನ್ಮಲಬ್ಧಂ ನೃಷು ಭಾರತಾಜಿರೇ ಮುಕುಂದಸೇವೌಪಯಿಕಂ ಸ್ಪೃಹಾ ಹಿನಃ॥
(ಶ್ರೀಮದ್ಭಾಗವತ ೫–೧೯–೨೧)

ಸ್ವಯಂ ಪರಮಾತ್ಮನೇ ಯಾರ ಮೇಲೆ ಪ್ರಸನ್ನನಾಗಿರುವನೋ ಅಂತಹ ಭಾರತೀಯರನ್ನು ಕುರಿತು ನಾವೇನು ಒಳ್ಳೆಯದನ್ನು ಮಾಡ ಬಲ್ಲೆವು? ಭರತಭೂಮಿಯಾದ ಹಿಂದೂಸ್ಥಾನದಲ್ಲಿ ಜನ್ಮವೆತ್ತಿ ಬರುವುದೇ ಮನುಷ್ಯಶ್ರೇಷ್ಠನಾಗುವಿಕೆಯು. ಪರಮಾತ್ಮನ ಸೇವೆಗೆ ಉಪಯುಕ್ತ ವಾದ ದೇಶ ಮತ್ತು ಜನ್ಮವೇ ಇದು. ಇದರ ಆಶೆ ನಮಗೆ ಹೆಚ್ಚು ಎಂದು ದೇವತೆಗಳೇ ಹೇಳುವರು. ಈ ಭಾಗ್ಯಕ್ಕಾಗಿ ನಾವು ಹಾತೊರೆಯುವೆವು ಎಂದು ದೇವತೆಗಳ ಉಕ್ತಿ ಇದೆ.

ಓರ್ವ ಯೂರೋಪಿಯನ್ನಳು ತನ್ನ ವಯಸ್ಸಿನ ಅರವತ್ತು ವರ್ಷ ಗಳವರೆವಿಗೂ ಇಲ್ಲೇ ಇದ್ದು, ಇಲ್ಲೇ ಮಡಿದು ಪರಮಾರ್ಥವಾಸನೆಯಿಂದ ಭಾರತವರ್ಷದಲ್ಲಿಯೇ ಹಿಂದುವಾಗಿ ಹುಟ್ಟಬೇಕೆಂದು ಕಂಕಣತೊಟ್ಟು ಇಲ್ಲಿಯೇ ನೆಲೆಸಿದ್ದುದು ಅವಳ ಮುಖದಿಂದಲೇ ತಿಳಿಯಿತು. ಇದು ಕೊಂಡಾಡುವಂತಹ ನಿಷ್ಠೆಯೆಂದು ಯಾರುತಾನೆ ಹೇಳಲಿಕ್ಕಿಲ್ಲ?

## ಭಾರತೀಯರು

ಚೀನಾದೇಶದಲ್ಲಿರುವವರನ್ನು ಚೀನಿ, ಜಪಾನ್ ದೇಶದಲ್ಲಿರುವವರನ್ನು ಜಪಾನೀ, ಅರಬ್ಬೀ ದೇಶದಲ್ಲಿರುವವರನ್ನು ಅರಬ್, ಇಂಗ್ಲೆಂಡ್ ದೇಶ ದಲ್ಲಿರುವವರನ್ನು ಇಂಗ್ಲಿಷ್, ಜರ್ಮನಿಯಲ್ಲಿರುವವರನ್ನು ಜರ್ಮನ್,

ಅಮೇರಿಕೆಯಲ್ಲಿರುವವರನ್ನು ಅಮೆರಿಕನ್, ಫ್ರಾನ್ಸಿನಲ್ಲಿರುವವರನ್ನು ಫ್ರೆಂಚ್ ಎನ್ನುವಂತೆ ಹಿಂದೂದೇಶದಲ್ಲಿರುವವರನ್ನು ಹಿಂದು ಎಂದು ಕರೆಯುವರು. ಹಿಂದೂಸ್ಥಾನಕ್ಕೆ ಭಾರತ, ಆರ್ಯಾವರ್ತ ಎಂದು ಹೆಸರುಗಳಿರುವುದರಿಂದ ಇಲ್ಲಿದ್ದ ಜನರಿಗೆ ಭಾರತ, ಭಾರತೀಯ, ಆರ್ಯ ಎಂದೂ ಅನ್ನುವರು. ಜಗತ್ತಿನ ಎಲ್ಲಾ ಭಾಗಗಳ ಜನರಿಗಿಂತಲೂ ಈ ದೇಶದ ಜನರು ಸುಸಂಸ್ಕೃತರಾದವರೆಂದು ಸೂಚಿಸುವ ಈ ಹೆಸರುಗಳಿಂದ ಅವರನ್ನು ಕರೆಯುವುದು ಒಂದು ವೈಶಿಷ್ಟ್ಯ. ಈ ಎಲ್ಲಾ ಹೆಸರುಗಳು ಗೌರವವಾಚಕವಾಗಿರುವುವು.

## ವೇದದಲ್ಲಿ ಭಾರತ

"The Rigvedas are the Hindu Sacred Writings, which are probably the oldest literary compositions in the world."

(*Wall's Sex and Sex Worship*, p. 8)

ಋಗ್ವೇದವು ಅತಿ ಪ್ರಾಚೀನವಾದುದೆಂದು ಎಲ್ಲರ ಮತವಿದೆ. ಇದರಲ್ಲಿ ಸಹ 'ಭಾರತ' ಎಂಬ ಶಬ್ದಪ್ರಯೋಗವು ಕಂಡುಬರುವುದು.

ಯ ಇಮೇ ರೋದಸೀ ಉಭೇ ಅಹಮಿಂದ್ರಮತುಷ್ಟವಂ ।
ವಿಶ್ವಾಮಿತ್ರಸ್ಯ ರಕ್ಷತಿ ಬ್ರಹ್ಮೇದಂ ಭಾರತಂ ಜನಂ ॥

(ಋಗ್ವೇದ ೩-೫೩-೧೨)

## ಭಾರತ ಶಬ್ದದ ವ್ಯುತ್ಪತ್ತಿ

ಆಕಾಶ-ಭೂಮಿಗಳ ಮಧ್ಯೆ ಅಂತರಿಕ್ಷದಲ್ಲಿದ್ದ ಇಂದ್ರನನ್ನು ಸ್ತುತಿಸುತ್ತಿದ್ದೇನೆ. ಅವನ ಪ್ರಾರ್ಥನೆಯನ್ನು ಮಾಡಿದ್ದೇನೆ. ವಿಶ್ವಾಮಿತ್ರನ ಬ್ರಹ್ಮರೂಪವಾದ ಉಪಾಸ್ಯದೈವತವು ಭಾರತದ ಜನರನ್ನು ರಕ್ಷಿಸುವುದೆಂದು ಈ ಮಂತ್ರದ ಭಾವಾರ್ಥವು. ಮಹಾತ್ಮರು ದೇವರ ಪ್ರಾರ್ಥನೆಯನ್ನು ಮಾಡಿ ಜನರ ರಕ್ಷಣೆ ಮಾಡುವುದೂ ಸಹ ಈ ಮಂತ್ರದಿಂದ ಸ್ಪಷ್ಟವಾಗುವುದು.

'ಭಾಸಿ ವಾ ಭಾಯಾಂ ವಾ ರತಃ ಭಾರತಃ' ಸ್ವಪ್ರಕಾಶವಾದ ಆತ್ಮರೂಪದಲ್ಲಿ ರತನಾಗಿರುವವನೇ ಭಾರತ. 'ಭಾರೂಪಂ ಪರಂ ಬ್ರಹ್ಮ

ತಸ್ಯ ಸ್ವಯಂಪ್ರಕಾಶತ್ವಾತ್ ತಸ್ಮಿನ್ ಭಾರೂಪೇ ಬ್ರಹ್ಮಣಿ ರತಃ ಸಕ್ತಃ ಭಾರತಃ' ಬ್ರಹ್ಮವು ಸ್ವಯಂಪ್ರಕಾಶವಾದುದರಿಂದ ಅದು ಭಾರೂಪವೆನ್ನಿಸಿಕೊಳ್ಳುವುದು. ಅದರಲ್ಲಿಯೇ ಯಾವಾಗಲೂ ರತನಾಗಿರುವವನೇ (ಆಸಕ್ತನಾಗಿರುವವನೇ) ಭಾರತನೆಂದು ಹೇಳಲ್ಪಡುವನು. ಭಾರೂಪ ಆತ್ಮಾ ಸರ್ವಗತಃ ತಸ್ಮಿನ್ ಭಾರೂಪೇ ಆತ್ಮನಿ ರತಃ ಭಾರತಃ' ಸರ್ವಗತ (ಸರ್ವವ್ಯಾಪಿ)ವಾಗಿರುವ ಆತ್ಮತತ್ವದಲ್ಲಿ ರತನಾಗಿರತಕ್ಕವನೇ ಭಾರತನೆಂದು ಕರೆಯಲ್ಪಡುವನು. "ಭಾ ಬ್ರಹ್ಮವಿದ್ಯಾ, ತಸ್ಯಾಮೇವ ರಮತ ಇತಿ ಭಾರತಃ" ಭಾ ಎಂದರೆ ಬ್ರಹ್ಮವಿದ್ಯೆಯು. ಆ ಬ್ರಹ್ಮವಿದ್ಯೆಯಲ್ಲಿಯೇ ರಮಿಸತಕ್ಕವನು ಭಾರತನು.

ಆನೋ ಯಜ್ಞಂ ಭಾರತೀ ತೂಯಮೇತ್ವಿಳಾ ಮನುಷ್ವದಿಹ ಚೇತಯಂತೀ ।
ತಿಸ್ರೋ ದೇವೀ ರ್ಬರ್ಹಿರೇದಂ ಸ್ಯೋನಂ ಸರಸ್ವತೀ ಸ್ವಪಸಃ ಸದನ್ತು ॥
(ಋಗ್ವೇದ)

ಏತು ನೋ ಯಜ್ಞಂ ಭಾರತೀ ಕ್ಷಿಪ್ರಂ ಭರತ ಆದಿತ್ಯಸ್ತಸ್ಯ ಭಾ ಇಳಾ ಚ ಮನುಷ್ಯವದಿಹ ಚೇತಯ ಮಾನಾಃ ತಿಸ್ರೋ ದೇವ್ಯೋ ಬರ್ಹಿರಿದಂ ಸುಖಂ ಸರಸ್ವತೀ ಚ ಸುತರ್ಮಾಣಾ ಆಸೀದನ್ತು ॥ (ನಿರು. ೨-೮-೧೩)

ಮನುಷ್ಯರಂತೆ ನಮ್ಮಲ್ಲಿ ಮಹತ್ವವನ್ನಿಟ್ಟು ನೀವು ಮೂವರು ದೇವತೆಗಳು ನಮ್ಮ ಯಜ್ಞಕ್ಕೆ ಬೇಗ ಬನ್ನಿರೆಂದು ಇದರ ಭಾವಾರ್ಥವಿದೆ. ಭಾರತೀ ಪದದ ಅರ್ಥವನ್ನು ವಿವರಿಸಬೇಕಾದರೆ "ಭರತ ಆದಿತ್ಯಃ ತಸ್ಯ ಭಾ—ಸ್ವಭೂತಾದೀಪ್ತಿಃ=ಭಾರತೀ." ಭರತನೆಂದರೆ ಸೂರ್ಯನು, ಆತನ ದೀಪ್ತಿಯೆಂದರೆ ಪ್ರಕಾಶವೇ ಭಾರತೀ (ಗಾಯತ್ರೀ) ಎಂದು ಯಾಸ್ಕರು ಹೇಳಿದ್ದಾರೆ. ಭರತನೆಂದರೆ ಸೂರ್ಯನೆಂದರ್ಥವಾಗುವಲ್ಲಿ ತತ್ಸಂಬಂಧಿ ಭಾರತನೆಂದಾಗುವುದು.

ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ । (ಋ. ೧-೧೧೫-೧)

ಸರ್ವಸ್ಯ ಪ್ರೇರಕಃ ಪರಮಾತ್ಮಾ ಜಗತೋ ಜಂಗಮಸ್ಯ, ತಸ್ಥುಷಃ ಸ್ಥಾವರಸ್ಯ ಚ ಆತ್ಮಾ ಸ್ವರೂಪಭೂತಃ (ಸಾಯಣ) ಈ ಸೂರ್ಯಮಂಡಲಾಂತರವರ್ತಿ ಸರ್ವಪ್ರೇರಕನಾದ ಪರಮಾತ್ಮನೇ ಈ ಸ್ಥಿರ ಚರ ವಿಶ್ವದ ಆತ್ಮರೂಪವೆನ್ನುವುದಾಗಿ ಆರ್ಯರು ಈ ಸೂರ್ಯನ

ಉಪಾಸನೆಯನ್ನು ಮಾಡುತ್ತಿದ್ದರು. ತೈತ್ತಿರೀಯೋಪನಿಷತ್ತಿನ ಭೃಗುವಲ್ಲಿಯಲ್ಲಿ "ಸಯಶ್ಚಾಯಂ ಪುರುಷೇ, ಯಶ್ಚಾಸಾವಾದಿತ್ಯೇ, ಸ ಏಕಃ" (೩-೪) "ಈ ದೇಹದಲ್ಲಿಯೂ ಮತ್ತು ಆ ಸೂರ್ಯಮಂಡಲದಲ್ಲಿಯೂ ಇರುವ ಪರಮಾತ್ಮನು ಒಬ್ಬನೇ" ಎಂಬೀ ಮಂತ್ರವು ಇಲ್ಲಿ ನೆನಪಿಗೆ ಬರುವುದು. ಸ್ವಪ್ರಕಾಶ ಆತ್ಮರೂಪದಲ್ಲಿ ನಿರತರಾಗಿರತಕ್ಕವರನ್ನೇ ಭಾರತರು ಎಂದು ಕರೆಯುವರು. ಈ ತತ್ವಕ್ಕೆ ಈ ಎಲ್ಲಾ ವಚನಗಳು ಪುಷ್ಟಿ ಕೊಡುವುವು.

ಶ್ರೀಮದ್ಭಾಗವತದ ಪಂಚಮಸ್ಕಂಧದ ಚತುರ್ಥಾಧ್ಯಾಯದಲ್ಲಿರುವ ಪ್ರಮಾಣದಿಂದ ಭಗವಾನ್ ಋಷಭದೇವನ ಜ್ಯೇಷ್ಠಪುತ್ರನಾದ ಭರತನ ಕಾಲದಿಂದ ಭಾರತವರ್ಷ ಎಂಬ ಹೆಸರು ಬಂತೆಂದು ತೋರಿಬರುವುದು ಕೂಡ ಮೇಲೆ ಕಂಡ ವಿಧಾನದ ಒಂದು ಪುಷ್ಟಿಯೇ ಸರಿ. ಋಷಭ ಮತ್ತು ಭರತ ಈ ಈರ್ವರೂ ಸಹ ಮಹಾಜ್ಞಾನಿಗಳು, ಯೋಗಿಗಳು ಆಗಿದ್ದರು. ಈ ದೃಷ್ಟಿಯಿಂದಾದರೂ ಈ ಜಂಬೂದ್ವೀಪದ ಮೊದಲಿನ ಮಾಹಾತ್ಮ್ಯವನ್ನೇ ಎತ್ತಿ ಹಿಡಿದಿರುವುದು.

ಶ್ರೀ ಭಗವದ್ಗೀತೆಯಲ್ಲಿ ಅಂತೂ ಭಾರತಶಬ್ದದ ಪ್ರಯೋಗವು ಹೇರಳವಾಗಿದೆ. "ಪಶ್ಯಾಶ್ಚರ್ಯಾಣಿ ಭಾರತ, ಸತ್ವಂ ಭವತಿ ಭಾರತ, ವ್ಯಕ್ತ ಮಧ್ಯಾನಿ ಭಾರತ, ತನ್ನಿಬಧ್ನಾತಿ ಭಾರತ," ಇತ್ಯಾದಿ.

## ಆರ್ಯಶಬ್ದ

ಯವಮಿವ ವೃಕೇಣಾಶ್ವಿನೌ ನಿವಪಂತೌ ವೃಕೋ ಲಾಂಗಲಂ ಭವತಿ ॥
ವಿಕರ್ತನಾತ್ ॥ ಲಾಂಗಲಂ ಲಂಗತೇಃ ॥ ಲಾಂಗೂಲವದ್ವಾ ॥
ಲಾಂಗೂಲಂ ಲಗತೇರ್ಲಂಗತೇರ್ಲಂಬತೇರ್ವಾ ॥ ಅನ್ನಂ ದುಹಂತೌ
ಮನುಷ್ಯಾಯ ದರ್ಶನೀಯಾವಭಿಧಮಂತೌ ದಸ್ಯುಂಬಕುರೇಣ
ಜ್ಯೋತಿಷಾ ವೋದಕೇನ ವಾಽಽರ್ಯ ಈಶ್ವರ ಪುತ್ರಃ ॥

(ನಿರುಕ್ತ. ೬-೫-೨೬)

ಯವಂ ವೃಕೇಣಾಶ್ವಿನಾ ವಪನ್ತೇಷಂ ಮನುಷಾಯ ದಸ್ರಾ ।
ಅಭಿದಸ್ಯುಂ ಬಕುರೇಣಾ ಧಮನ್ತೋರು ಜ್ಯೋತಿಶ್ಚಕ್ರಥುರಾರ್ಯಾಯ ॥

(ಋಗ್ವೇದ ೧-೧೧೭-೨೧)

ಈ ಮಂತ್ರದಲ್ಲಿ ಆರ್ಯ ಎಂಬ ಶಬ್ದವಿದೆ. ಈ ಮಂತ್ರದಲ್ಲಿ ಅಶ್ವಿನೀ ಕುಮಾರರ ಸ್ತುತಿಯು ಬಂದಿರುವುದು. "ನೀವು ದ್ಯುಲೋಕದಲ್ಲಿರುವ ದೇವತೆಗಳು. ಕೃಷಿಕರು ನೇಗಿಲುಗಳಿಂದ ಹೂಡಿ ಧಾನ್ಯವನ್ನು ಬಿತ್ತಿ ಬೆಳೆಯಿಂದ ಹೇಗೆ ಸಮಾಜವನ್ನು ತೃಪ್ತಿಪಡಿಸುವರೋ ಅಂತೆಯೇ ನೀವು ಸೂರ್ಯನಿಂದ ಬಿದ್ದ ಪರ್ಜನ್ಯದ ಉದಕದಿಂದ ಪುತ್ರ ಪೌತ್ರಾದಿಗಳು ಪಿತೃಪಿತಾಮಹರುಗಳೆಲ್ಲಾ ತೃಪ್ತಿಪಡಿಸುವವರು. ಆ ಜಲದಿಂದ ಕೊಟ್ಟ ತರ್ಪಣವು ಪಿತೃಗಳ ಅನ್ನವಾಗುವುದು. ಆ ಮಳೆಯ ನೀರಿನಿಂದಲೇ ಬೆಳೆಯಾಗುವುದು. ಇದು ಮನುಷ್ಯರ ಅನ್ನ. ಹೇ! ಸುಂದರರಾಗಿರುವ ಅಶ್ವಿನೀಕುಮಾರರೇ! ನೀವು ಈ ಮಳೆಬೆಳೆಗಳನ್ನುಂಟುಮಾಡಿ ಮನುಷ್ಯರಿಗಾಗಿ ಅನ್ನದ ಸಮೃದ್ಧಿಯನ್ನು ಮಾಡುತ್ತೀರಿ. ದುರ್ಭಿಕ್ಷವನ್ನು ನಿವಾರಿಸುತ್ತೀರಿ. ಆರ್ಯನಾದ (ಶ್ರೇಷ್ಠನಾದ) ಈಶ್ವರಪುತ್ರನಿಗೆ ವಿಸ್ತೃತದೃಶ್ಯ ಕಾಣುವಂತೆ ಕಣ್ಣುಗಳನ್ನು ದಯಪಾಲಿಸಿದ್ದೀರಿ—ಎಂದಿದರರ್ಥ. ಈಶ್ವರಪುತ್ರಃ ಈಶ್ವರನೆಂಬ ಋಷಿಯ ಪುತ್ರನು. ಎಕ್ಕದ ಹಾಲನ್ನು ಕುಡಿದು ಈತನ ಕಣ್ಣುಗಳು ಹೋಗಿದ್ದವು. ಆಕಳನ್ನು ಹಿಂಬಾಲಿಸಿ ಹೋಗುವಾಗ ದೃಷ್ಟಿಯಿಲ್ಲದೆ ಆತನು ಅಕಸ್ಮಾತ್ತಾಗಿ ಭಾವಿಯಲ್ಲಿ ಬಿದ್ದನು. ಅನಂತರ ಗುರುವಿನಿಂದ ಉಪದಿಷ್ಟವಾದ ಅಶ್ವಿನೀ ಮಂತ್ರದಿಂದ ಈತನಿಗೆ ಕಣ್ಣುಗಳು ಬಂದವು. ಧೌಮ್ಯಋಷಿಗಳೇ ಈತನ ಗುರುಗಳು. ಪುಣೆ, ಸಾತಾರೆಯ ಸಮೀಪ ಧೋಮ ಎಂಬ ಹೆಸರಿನ ಒಂದು ಊರು ಇದೆ. ಇದು ಈ ಧೌಮ್ಯಋಷಿಗಳ ಆಶ್ರಮವೆಂದು ಪ್ರಸಿದ್ಧವಿದೆ. ಧೌಮ್ಯಋಷಿಗಳ ಆಶ್ರಮವಾದುದರಿಂದಲೇ ಇದಕ್ಕೆ ಧೋಮ ಎಂದು ಹೆಸರು ಬಂದಿರುವುದು. ಗುರುಸೇವೆಯಿಂದಲೇ ವಿದ್ಯೆಯು ಪ್ರಾಪ್ತಿಯಾಗುವದು. ಈ ತತ್ವವು ಇವರ ಆಶ್ರಮದಲ್ಲಿ ಸಂಪೂರ್ಣವಾಗಿ ತನ್ನನ್ನು ಕಾಣಿಸಿಕೊಳ್ಳುತ್ತಿತ್ತು. ಆಶೀರ್ವಾದ ಮಾತ್ರದಿಂದ ಶಿಷ್ಯರನ್ನು ವೇದಶಾಸ್ತ್ರಸಂಪನ್ನರಾಗಿ ಮಾಡುವ ಒಂದು ಪ್ರಭಾವಶಾಲಿಯಾದ ತಪಃಶಕ್ತಿ ಇವರಲ್ಲಿ ಇತ್ತು. ಉಪಮನ್ಯು ಎಂಬುದು ಈಶ್ವರಪುತ್ರನ ಎರಡನೇ ಹೆಸರು. ಈ ಕಥೆಯು ಭಾರತದಲ್ಲಿ ಬಂದಿರುವುದು.

ಆದಿಕಾವ್ಯವಾದ ವಾಲ್ಮೀಕಿ ರಾಮಾಯಣದಲ್ಲಿಯೂ ಈ ಆರ್ಯ ಶಬ್ದವು ಬಹಳ ಕಡೆಗಳಲ್ಲಿ ಉಪಯೋಗಿಸಿದ್ದುಂಟು.

ಆರ್ಯಃ ಸರ್ವಸಮಶ್ಚೈವ ಸದೈವ ಪ್ರಿಯದರ್ಶನಃ ।
ಸ ಚ ಸರ್ವಗುಣೋಪೇತಃ ಕೌಸಲ್ಯಾನಂದವರ್ಧನಃ ॥

(ರಾಮಾ. ಬಾಲ. ೧-೧೬, ೧೭)

ಆರ್ಯಪುತ್ರ ಪಿತಾಮಾತಾ । (ರಾಮಾ. ಅಯೋ. ೨೭-೩)

ಸುಖಿನೀ ಕಚ್ಚಿದಾರ್ಯಾ ಚ ದೇವೀ ನಂದತಿ ಕೈಕಯೀ ।

(ರಾಮಾ. ಅಯೋ. ೧೦೦-೧೦)

ವೃತಾ ಮಾರ್ಯೈಃ ಸಹಸ್ರಶಃ ॥ ಇತ್ಯಾದಿ.

ಕಾವ್ಯನಾಟಕಗಳಲ್ಲಂತೂ 'ಆರ್ಯ' ಎಂಬ ಸಂಬೋಧನೆ ಹೇರಳವಾಗಿ ಕಂಡುಬರುವದು. 'ಹಿಂದು' ಈ ಶಬ್ದವು ಈಗಂತೂ ಬಳಕೆಯಲ್ಲೇ ಇದೆ.

ಶಾಂತಸ್ತಿತಿಕ್ಷುರ್ದಾಂತಶ್ಚ ಸತ್ಯವಾದೀ ಜಿತೇಂದ್ರಿಯಃ ।
ದಾತಾ ದಯಾಲುರ್ನಮ್ರಶ್ಚ ಆರ್ಯಃ ಸ್ಯಾದಷ್ಟಭಿರ್ಗುಣೈಃ ॥

ಶಾಂತನೂ, ಸಹನಶೀಲನೂ, ಮನೋನಿಗ್ರಹ ಮಾಡತಕ್ಕವನೂ, ಸತ್ಯವನ್ನು ನುಡಿಯತಕ್ಕವನೂ, ಜಿತೇಂದ್ರಿಯನೂ, ದಾನಶೀಲನೂ, ದಯಾಶೀಲನೂ, ನಮ್ರನೂ ಆದವನೇ ಆರ್ಯನು. ಈ ಎಂಟು ಗುಣಗಳಿಂದ ಆರ್ಯನಾಗುವನು. ಈ ಎಂಟು ಗುಣಗಳಿಂದಲೇ ಆರ್ಯರು ಗುರುತಿಸಲ್ಪಡುವರು. ಇಹ-ಪರದ ದಿವ್ಯ ಜೀವನಕ್ಕಾಗಿ ಅಖಿಲ ಮಾನವರಿಗೆ ಈ ಎಂಟು ಗುಣಗಳ ಅವಶ್ಯಕತೆ ಇದ್ದೇ ತೀರುವುದಲ್ಲವೆ? ಈ ದೃಷ್ಟಿಯಿಂದ ಪ್ರತಿ ಮಾನವನು ಆರ್ಯನಾಗಬೇಕಲ್ಲವೇ?

## ಎಲ್ಲರ ಕರ್ಮಭೂಮಿ ಭಾರತವರ್ಷ

ವೇದಕಾಲದ ಕಥೆಗಳ ಗುರುತನ್ನು ಸೂಚಿಸುವ ಎಲ್ಲಾ ಸ್ಥಳಗಳು ಈ ಹಿಂದೂಸ್ಥಾನದ ಗಡಿಯಲ್ಲಿಯೇ ಇದ್ದುದರಿಂದ ಮೊದಲಿನಿಂದಲೂ ಇದು ಎಲ್ಲರಿಗೂ ಕರ್ಮಭೂಮಿಯಾಗಿತ್ತು. ದೇವತೆಗಳೂ ಸಹ ಇಲ್ಲಿ ಬಂದು ಯಜ್ಞಾದಿಗಳನ್ನು ನಡೆಸಿದ ಬಹಳ ಉದಾಹರಣೆಗಳಿವೆ. ಹಿಂದುಸ್ಥಾನ, ಭಾರತ, ಆರ್ಯಾವರ್ತ, ಹಿಂದು, ಆರ್ಯ ಇವೆಲ್ಲಾ ಪರ್ಯಾಯನಾಮಗಳೆಂತಲೇ ಭಾವಿಸಬೇಕು. ಸೃಷ್ಟಿಯ ಆದಿಯಿಂದಲೇ ಇದು ಕರ್ಮಭೂಮಿಯಾಗಿ ಪರಮಾತ್ಮನಿಂದ ನಿರ್ಮಿತವಾದುದು. ಮಾನವ ಕುಲಕ್ಕೇ

ಆದಿಯಾದ ಮನುವು ಪ್ರಥಮ ಇಲ್ಲಿಯ ರಾಜನಾಗಿದ್ದನು. ನವಪ್ರಜಾಪತಿಗಳ ಅನುಷ್ಠಾನದ ಸ್ಥಳಗಳು ಇಲ್ಲಿ ಕಂಡುಬರುವವು. ಬ್ರಹ್ಮಾದಿ ದೇವತೆಗಳು ಸಹ ಈ ಕರ್ಮಭೂಮಿಗೇ ಬಂದು ಯಜ್ಞಾದಿ ಕರ್ಮಗಳನ್ನು ನಡೆಯಿಸಿದರೆಂದು ಆಯಾ ಕ್ಷೇತ್ರದ ಇತಿಹಾಸಗಳಿಂದ ಕಂಡುಬರುತ್ತದೆ.

## ಆರ್ಯ ಮತ್ತು ಆರ್ಯಭೂಮಿ

ಸುಮ್ಮನೆ ವಾದಮಾಡದೆ ನಾವೆಲ್ಲರೂ ಆರ್ಯರೆಂಬ ಗೌರವದಿಂದ ನಮ್ಮ ಅಸಾಧಾರಣ ರೀತಿ ನೀತಿಗಳಿಂದ ಉಚ್ಚ ನಾಗರಿಕತೆಯ ಆದರ್ಶರಾಗಿ ಮೋಕ್ಷಸಾಧನೆಯನ್ನು ಮಾಡುತ್ತ ಧನ್ಯರಾಗಿ ಬಾಳುವುದು ಈ ಭಾರತದಲ್ಲಿ ಜನ್ಮತಾಳಿ ಬಂದುದಕ್ಕೆ ಅನುಗುಣವಾದ ಜೀವನವೆಂದು ಹೇಳಬಹುದು. ಮೊದಲಾಳಿದ ರಾಜರೆಲ್ಲ ಅನೇಕ ಪರಸ್ಪರ ವಿರೋಧೀ ಕಲ್ಪನೆಗಳನ್ನು ಉಂಟುಮಾಡಿ ಪರಸ್ಪರರಲ್ಲಿ ದ್ವೇಷ ಹುಟ್ಟಿಸಿ (Divide and Rule) 'ಅಗಲಿಸಿ ಆಳಿರಿ' ಎಂಬ ತತ್ವದ ಪಾಲನೆಮಾಡಿ ಆಳಿದ್ದಾರೆ. ಈಗ ಸ್ವರಾಜ್ಯ ಸಿಕ್ಕಿರುವಾಗ ಇವೆಲ್ಲವನ್ನೂ ಇಟ್ಟುಕೊಳ್ಳದೆ ದೇಶಬಾಂಧವ್ಯ ಮತ್ತು ಧರ್ಮಬಾಂಧವ್ಯದಿಂದ ಇರುವದು ಸುಖಾವಹ ಮತ್ತು ಭೂಷಣಾವಹವಾಗಿದೆ. ಉತ್ತರದಲ್ಲಿ ಹಿಮಾಲಯ, ದಕ್ಷಿಣದಲ್ಲಿ ಹಿಂದೂಸಾಗರ, ಪೂರ್ವದಲ್ಲಿ ಬಂಗಾಳಾ ಕೊಲ್ಲಿ, ಪಶ್ಚಿಮದಲ್ಲಿ ಅರಬ್ಬೀಸಮುದ್ರ ಹೀಗೆ ಹಿಂದುಸ್ಥಾನವು ಚತುಸ್ಸೀಮಾಂತವಾದ ಆರ್ಯರ ಭೂಮಿಯಾಗಿದೆ.

ಬ್ರಹ್ಮದೇವನಿಂದ ನಿವೃತ್ತಿ-ಪ್ರವೃತ್ತಿ ಎಂಬ ಎರಡು ಮಾರ್ಗಗಳನ್ನು ಗುರುತಿಸುವ ಎರಡು ಸಂಸ್ಕಾರಗಳ ಸೃಷ್ಟಿಯಾಯಿತು. ಸನಕ-ಸನಂದನಾದಿಗಳದು ಪ್ರಥಮಸೃಷ್ಟಿ ಮತ್ತು ನವಪ್ರಜಾಪತಿಗಳದು ಎರಡನೆಯ ಸೃಷ್ಟಿ. ಈ ನವಪ್ರಜಾಪತಿಗಳಿಂದ ಪ್ರಜೋತ್ಪತ್ತಿಯಾಯಿತು. ಇವರ ಪ್ರಜೆಗೆ ಆರ್ಯರೆಂಬ ಅಭಿದಾನವಿದೆ. ಅವರ ಕುಲದವರೆಲ್ಲರೂ ಆರ್ಯರು. ಈ ಆರ್ಯರ ಕರ್ಮಭೂಮಿಯೆಂದರೆ ಈ ಭಾರತವರ್ಷ. ಅದು ಆರ್ಯರ ವೇದೋಕ್ತಕರ್ಮಗಳಿಗಾಗಿ ಪರಮಾತ್ಮನಿಂದಲೇ ನಿರ್ಮಿತವಾದುದು. ಈ ವಿಧಾನದ ಸತ್ಯತ್ವವನ್ನು ಕಾಣಿಸುವ ಪ್ರಮಾಣಗಳು ಈ ದೇಶದಲ್ಲಿರುವ ಕ್ಷೇತ್ರಗಳ ಮೂಲಕವಾಗಿ ತುಂಬಾ ಕಂಡುಬರುವುವು. ದಕ್ಷಿಣ ದೇಶದಲ್ಲಿ

ಅಲ್ಲಲ್ಲಿ ವೇದಕಾಲೀನ ಋಷಿಗಳ ಆಶ್ರಮಗಳು ಕಂಡುಬರುವುವು. ದೇವ ಸ್ಥಾನಗಳೂ ಕಂಡುಬರುವುವು. ಈ ಎಲ್ಲಾ ಸ್ಥಳಗಳೂ ಐತಿಹಾಸಿಕ ಸ್ಥಳಗಳೇ. ಅಂದಿನಿಂದ ಇಂದಿನವರೆಗೂ ಆ ಸ್ಥಳಕ್ಕೆ ಇದ್ದ ದೇವ ಮತ್ತು ಋಷಿಗಳ ಹೆಸರು ಆಯಾ ಸ್ಥಳದ ಇತಿಹಾಸವನ್ನು ಹೊರಗೆಡಹಿ ಇಡೀ ಈ ದೇಶವು ಆರ್ಯರ ಭಾರತವರ್ಷವೆಂದು ಸಾಕ್ಷಿ ಕೊಡುತ್ತಿದೆ. ಕೆಲ ದಿನಗಳ ಹಿಂದೆ ಸಾಗರ, ಶಿರಸಿ ಕಡೆಗಿದ್ದ 'ಯಾಣ' ಕ್ಷೇತ್ರಕ್ಕೆ ಹೋಗಿದ್ದೆ. ಅಲ್ಲಿಯ ಜನರು ದೇವಸ್ಥಾನದಿಂದ ಸ್ವಲ್ಪ ದೂರದಲ್ಲಿದ್ದ ಒಂದು ಸ್ಥಳವನ್ನು ತೋರಿಸಿ, ಇದು ಶಿವನು ಭಸ್ಮಾಸುರನನ್ನು ಸುಟ್ಟುಹಾಕಿದ ಸ್ಥಳವೆಂದು ಅದರ ಗುರುತಾಗಿ ಅಲ್ಲಿಯ ಎಲ್ಲಾ ಮಣ್ಣು ಸುಟ್ಟ ಮಣ್ಣಿನಂತಿದೆ ಎಂದು ತೋರಿಸಿ, ಪುರಾಣದ ಕಥೆಗೂ ಅಲ್ಲಿರುವ ವಿದ್ಯಮಾನಕ್ಕೂ ಹೇಗೆ ತಾಳೆ ಬೀಳುವ ದೆಂಬುದನ್ನೂ ಸಪ್ರಮಾಣವಾಗಿ ತಿಳಿಯಪಡಿಸಿದರು. ಬ್ರಹ್ಮನೇ ಆದಿ ಯಾದ ದೇವತೆಗಳು, ಯಜ್ಞಮಾಡಿದ ಸ್ಥಳದಲ್ಲಿ ಅಗೆದರೆ ಭಸ್ಮ ಸಿಗುವದು. ಗಾಣಗಾಪುರ ಮುಂತಾದ ಸ್ಥಳಗಳಿಂದ ಭಸ್ಮವನ್ನು ಭಾವುಕರು ತರುವರು. ಅಷ್ಟು ಜಾಗದಲ್ಲಿ ಎಲ್ಲಿ ಅಗೆದರೂ ಭಸ್ಮ ಸಿಕ್ಕುತ್ತದೆ. ಯಜ್ಞಮಾಡಿ ಎಷ್ಟೋ ವರ್ಷಗಳು ಸಂದುಹೋದರೂ ಪೌರಾಣಿಕ ದಿವ್ಯ ಕಥೆಗಳ ಸತ್ಯತೆ ಯನ್ನು ಪ್ರಕಟಿಸುತ್ತ ಈ ಸ್ಥಳಗಳು ಅವುಗಳ ಗುರುತಾಗಿರುವವು. "ಇತಿಹಾಸ ಪುರಾಣಾಭ್ಯಾಂ ವೇದಂ ಸಮುಪಬೃಹ್ಮಯೇತ್" ಇತಿಹಾಸ ಪುರಾಣಗಳಿಂದ ವೇದದ ಸ್ಪಷ್ಟಾರ್ಥವನ್ನು ತಿಳಿಯಬೇಕು. ಇತಿಹಾಸ ಪುರಾಣಗಳಲ್ಲಿ ಕಂಡುಬಂದ ಕಥಾನಕಕ್ಕೆ ಅನುಸಾರವಾಗಿ ಅಲ್ಲಲ್ಲಿ ಕಂಡುಬಂದ ಆಯಾ ವೈಶಿಷ್ಟ್ಯದಿಂದಲೇ ವೇದದ ಅರ್ಥವು ಮನದಟ್ಟಾಗುವದು. ಪುರಾಣಗಳು ಕಾದಂಬರಿಯ ಕಟ್ಟುಕಥೆಗಳಲ್ಲ ಎಂಬುದು ಆಯಾ ಸ್ಥಳಗಳ ದೃಶ್ಯದಿಂದ ಮನದಟ್ಟಾಗುವದು. ಹಿಮಾ ಲಯದಿಂದ ಕನ್ಯಾಕುಮಾರಿಯವರೆಗೂ ಇಂತಹ ಚಮತ್ಕಾರವನ್ನುಂಟು ಮಾಡುವ ಪ್ರತ್ಯಂತರಗಳಿರುವುದರಿಂದ ಇದು ದೇವಭೂಮಿಯೆಂಬುದು ಖಂಡಿತವಾಗದಿರದು. ಪರಮಾತ್ಮ ಪ್ರಣೀತವಾದ ವೈದಿಕ ಧರ್ಮಗಳನ್ನು ಅನುಷ್ಠಿಸುವುದಕ್ಕಾಗಿ ಇದನ್ನು ನಿರ್ಮಿಸಿ ಮನುಮಹರ್ಷಿ ಮುಂತಾದವ ರನ್ನು ಮೊದಲಿಂದಲೇ ಪರಮಾತ್ಮನು ಇಲ್ಲಿ ಇಟ್ಟಿದ್ದನೆಂದು ಆಯಾ

ಕ್ಷೇತ್ರಗಳು ಘಂಟಾಘೋಷನಾಗಿ ಸಾರುತ್ತಿವೆ. ಈ ಭಾರತ ಭೂಮಿಯ ದೈವೀ ವೈಶಿಷ್ಟ್ಯವನ್ನು ಮರೆಯದೆ ಇಟ್ಟುಕೊಳ್ಳುವ ಸೂಚನೆಯೆಂದು ಪ್ರತಿ ಕರ್ಮದ ಪೂರ್ವದ ಸಂಕಲ್ಪದಲ್ಲಿ ಈ ಕೆಳಗಿನಂತೆ ಹೇಳಲು ವಿಧಿಸಿದ್ದುಂಟು. "ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಅದ್ಯಬ್ರಹ್ಮಣಃ ದ್ವಿತೀಯಪರಾರ್ಧೇ ಶ್ರೀ ಹರೇಃ ಶ್ವೇತವಾರಾಹಕಲ್ಪೇ ವೈವಸ್ವತ-ಮನ್ವಂತರೇ ಕಲಿಯುಗೇ ಪ್ರಥಮಪಾದೇ ಜಂಬೂದ್ವೀಪೇ ಭರತಖಂಡೇ, ಭಾರತವರ್ಷೇ ಮಹಾಮೇರೋರ್ದಕ್ಷಿಣಪಾರ್ಶ್ವೇ" ಇತ್ಯಾದಿ. ಇದರಿಂದ ಹಿಂದೂಸಂಸ್ಕೃತಿಯು ಪರಮಾತ್ಮ ಪ್ರಣೀತವು, — ಅಖಂಡ ಭಾರತವು ಆರ್ಯಭೂಮಿಯು, ಮತ್ತು ಇಲ್ಲಿ ಅನಾದಿಯಿಂದ ಇರುವವರೆಲ್ಲರೂ ಆರ್ಯರು ಎಂದು ಸ್ಪಷ್ಟವಾಗುವದು.

## ಆರ್ಯ ಮತ್ತು ಆರ್ಯಾವರ್ತದ ಲಕ್ಷಣ

ಆರ್ಯಾವರ್ತವು ಯಾವ ಲಕ್ಷಣದ ಮೂಲಕ ಮಿಕ್ಕ ರಾಷ್ಟ್ರಗಳಿಂದ ವಿಂಗಡಿಸಲ್ಪಡುವುದೆಂಬುದು ಈ ಕೆಳಗಿನ ಶ್ಲೋಕಗಳಿಂದ ವಿಶದವಾಗುವದು.

ವರ್ಣಾಶ್ರಮವಿಭಾಗೋಽಯಂ ಯಸ್ಮಿನ್ದೇಶೇ ನ ವಿದ್ಯತೇ ।
ಸ ಮ್ಲೇಚ್ಛದೇಶೋ ವಿಜ್ಞೇಯ ಆರ್ಯಾವರ್ತಸ್ತತೋಽಂತರಃ ॥

(ವಿಷ್ಣುಸ್ಮೃತಿ)

ಯಾವ ದೇಶದಲ್ಲಿ ವರ್ಣಾಶ್ರಮ ವಿಭಾಗವಿಲ್ಲವೋ ಆ ದೇಶವು ಮ್ಲೇಚ್ಛ ದೇಶವೆಂದು ತಿಳಿಯಬೇಕು. ವರ್ಣಾಶ್ರಮ ವಿಭಾಗವನ್ನು ಒಳಗೊಂಡಿರುವಂತಹುದೇ ಆರ್ಯಾವರ್ತವು. ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ವಿಸ್ತರಿಸಿರುವ ದೇಶದಲ್ಲಿ ಎಲ್ಲಾ ವರ್ಣಾಶ್ರಮ ಪದ್ಧತಿಯೂ ಮೊದಲಿಂದಲೂ ಇರುವುದಾದ್ದರಿಂದ ಇದೆಲ್ಲವೂ ವಿಶಾಲವಾದ ಆರ್ಯಾವರ್ತವೇ ಸರಿ. ವರ್ಣಾಶ್ರಮಗಳ ಕಟ್ಟುಗಳಿಗೆ ಒಳಗಾಗಿರುವ ಇಲ್ಲಿಯ ಜನಾಂಗವೆಲ್ಲ ಆರ್ಯರೇ.

## ವಿದೇಶೀಯರ ಅಭಿಪ್ರಾಯ

ಇಲ್ಲಿಯ ಪದ್ಧತಿಯ ವಿಚಾರವಾಗಿ ಪಾಶ್ಚಾತ್ಯಪಂಡಿತರು ಏನು ಬರೆದಿಟ್ಟಿರುವರೆಂದು ಆಲೋಚಿಸೋಣ.

"The custom of the country prohibits intermarriage between the castes: for instance the husbandman cannot take a wife from the artisan caste. Custom also prohibits any one from exercising two trades or from changing from one caste to another. One cannot, for instance, become a husbandman if he is a herdsman or become a herdsman if he is an artisan."

(*Mebindle:* Megasthenes, p. 218)

"ಈ ದೇಶದ ಪದ್ಧತಿಯ ಪ್ರಕಾರ ಮಿಶ್ರವಿವಾಹವು ನಿಷೇಧಿಸಲ್ಪಟ್ಟದೆ. ಉದಾಹರಣಾರ್ಥವಾಗಿ ಓರ್ವ ಒಕ್ಕಲಿಗನು ಶಿಲ್ಪಿಯ ಮಗಳನ್ನು ಲಗ್ನ ವಾಗುವುದಿಲ್ಲ. ಅದರಂತೆ ಶಿಲ್ಪಿಯೂ ಸಹ ಒಕ್ಕಲಿಗನ ಮಗಳನ್ನು ಲಗ್ನ ವಾಗುವುದಿಲ್ಲ. ಇತ್ಯಾದಿ. ಭಾರತದಲ್ಲಿ ಆಯಾ ಜಾತಿಗೆ ಹೇಳಿದ ವ್ಯವ ಸಾಯವನ್ನೇ ಅವರವರು ಮಾಡುವರು. ಒಬ್ಬನು ಎರಡು ಜಾತಿಯ ಕಸುಬು ಮಾಡುವುದಾಗಲೀ, ಒಂದು ಜಾತಿಯಿಂದ ಇನ್ನೊಂದು ಜಾತಿ ಯನ್ನು ಸೇರುವುದಾಗಲೀ ನಿಷಿದ್ಧವಿದೆ. ಉದಾಹರಣಾರ್ಥವಾಗಿ: ಗೊಲ್ಲರವನು ಒಕ್ಕಲಿಗನಾಗಲಾರನು."

ಈ ಜಾತಿಭೇದವು ವೇದಕಾಲದಲ್ಲಿರಲಿಲ್ಲ ಎಂಬ ಆಕ್ಷೇಪವನ್ನು ಕುರಿತು, ಡಾಕ್ಟರ ಕ್ವಿಥನು ಭಾರತದ ಕೇಂಬ್ರಿಜ ಇತಿಹಾಸದಲ್ಲಿ ಹೇಳಿರುವ ದನ್ನು ಪರ್ಯಾಲೋಚಿಸೋಣ.

"The Rigveda certainly knows of a ruling class, Kshatriya and the Vedic Kingship was normally hereditary...... There are traces, moreover, of the division of the tribe into the holy (Brahman), the Kingly (Kshatriya) and the Commonalty."

(Keith, *Cambridge History*, pp. 93–94)

"ಶಾಸಕ ಕ್ಷತ್ರಿಯಜಾತಿಯ ಪರಿಚಯವು ಋಗ್ವೇದಕ್ಕೆ ನಿಶ್ಚಯ ವಾಗಿಯೂ ಇದೆ. ವೈದಿಕ-ಕಾಲದಲ್ಲಿಯೂ ಸಹ ರಾಜಪದವು ವಂಶ ಪರಂಪರಾಗತವಾಗಿತ್ತು. ಇದಲ್ಲದೆ ಆವಾಗಲೂ ಸಹ ಬ್ರಾಹ್ಮಣ, ಕ್ಷತ್ರಿಯ ಮತ್ತು ಈ ಕೆಳಗಿನ ವೈಶ್ಯಾದಿ ಜನ್ಮಗತ ಜಾತಿಗಳಲ್ಲಿ ಇಡೀ ಸಮಾಜವು ಹಂಚಲ್ಪಟ್ಟಿತ್ತು" ಎಂಬುದರ ಉಲ್ಲೇಖನವು ಸಿಗುವುದು.

"There is a good reason to believe that in period of the Rigveda the priesthood and the Nobility were hereditary."
(*Cambridge History*, p. 126)

"ಋಗ್ವೇದದಲ್ಲಿ ಬ್ರಾಹ್ಮಣ ಮತ್ತು ಕ್ಷತ್ರಿಯರು ಅವರವರ ವಂಶ ಪರಂಪರಾಗತರಾಗಿದ್ದರು" ಎಂಬುದನ್ನು ನಂಬಲು ಬಲಿಷ್ಠ ಪ್ರಮಾಣ ಸಿಗುವದು. . ಜಾತಿಯ ಅದಲು-ಬದಲಿನ ವಿಷಯದಲ್ಲಿ ಅವನು ಏನು ಬರೆದಿರುವನು ಎಂಬುದನ್ನು ನೋಡೋಣ.

"There is no instance recorded in Vedic texts of a Vaishya rising to the state of a priest or prince."
(*Cambridge History*, p. 127)

"ವೈಶ್ಯನು ತನ್ನ ಉನ್ನತಿಯನ್ನು ಮಾಡಿಕೊಂಡು ಬ್ರಾಹ್ಮಣತ್ವ ಅಥವಾ ಕ್ಷತ್ರಿಯತ್ವವನ್ನು ಪಡೆದ ಒಂದು ಉದಾಹರಣವೂ ವೈದಿಕ ವಾಙ್ಮಯದಲ್ಲಿ ಕಂಡುಬರುವುದಿಲ್ಲ."

"The caste system existed substantially in the time of Yajurveda."
(*Cambridge History*, p. 55)

ಯಜುರ್ವೇದಕಾಲದಲ್ಲಿ ಜಾತಿಭೇದ ವರ್ಣವ್ಯವಸ್ಥೆಯು ಚೆನ್ನಾಗಿ ಬೇರೂರಿತ್ತು.

"It is probable enough that among the Sudras themselves there were rules of endogamy...... The Vedic Aryans and the aborigines alike married within the tribe." (*Ibid.*, p. 129)

ಸಹಜವಾಗಿಯೇ ಶೂದ್ರರಲ್ಲಿಯೂ ಸಹ ತಮ್ಮ ಜಾತಿಯ ವರನನ್ನು ವಿವಾಹವಾಗುವ ಪದ್ಧತಿಯು ಆ ಕಾಲದಲ್ಲಿತ್ತು. ವೈದಿಕ, ಆರ್ಯ ಮತ್ತು ಅನಾರ್ಯರು ತಮ್ಮ ತಮ್ಮ ಜಾತಿಯ ವಧುವನ್ನೇ ಲಗ್ನವಾಗುತ್ತಿದ್ದರು.

"The first is called the Brahmanas, men of pure conduct. They guard themselves in religion, live purely and observe the most correct principles. The second is called the Kshatriyas, the royal caste. For ages they have been the governing

class. They apply themselves to virtue (humanity) and kindness. The third is called Vaishyas, the merchant class: they engage in commercial exchange, and they follow profit at home and abroad. The fourth is called Sudras, the agricultural class: they labour in ploughing and tillage. In the four classes purity or impurity of caste assigns everyone to his place. ...... They do not allow marriages between relatives. A woman once married can never take another husband."

(*Beal:* Hiuentsang, pp. 79–80)

ಹ್ಯು-ಎನ್-ತ್ಸಂಗ ಎಂಬುವವನು ಈ ಜಾತಿಯ ವಿಷಯವಾಗಿ ಬರೆದಿರುವದನ್ನು ಪರಿಶೀಲಿಸೋಣ. "ವರ್ಣಗಳಲ್ಲಿ ಮೊದಲನೆಯ ವರ್ಣದವರಿಗೆ ಬ್ರಾಹ್ಮಣರೆಂದು ಕರೆಯುವರು. ಇವರು ಪವಿತ್ರ ಆಚರಣದವರು. ಧರ್ಮದ ಸತ್ವದಿಂದಲೇ ತಮ್ಮ ರಕ್ಷಣೆಯನ್ನು ಮಾಡಿಕೊಳ್ಳತಕ್ಕವರು. ಯಾವಾಗಲೂ ಶುದ್ಧವಾಗಿರತಕ್ಕವರು. ಮತ್ತು ನಿಜವಾದ ತತ್ವವನ್ನು ಅರಿಸಿ ಆಚರಣೆಯಲ್ಲಿ ಇಟ್ಟುಕೊಳ್ಳತಕ್ಕವರು. ತತ್ವಗ್ರಾಹಿ ದೃಷ್ಟಿಯುಳ್ಳವರು. ಎರಡನೆಯ ಜಾತಿಯವರಿಗೆ ಕ್ಷತ್ರಿಯ ಎಂಬ ಹೆಸರಿದೆ. ಇವರೇ ರಾಜರು. ಅನಾದಿ ಕಾಲದಿಂದ ಆಳುತ್ತ ಬಂದಿರುವ ಜಾತಿ ಇದು. ಇವರು ಮನುಷ್ಯತ್ವಕ್ಕೆ ಬೇಕಾದ ಎಲ್ಲಾ ಸದ್ಗುಣಗಳನ್ನೂ ವೈಗೂಡಿಸಿಕೊಂಡು ಇರುತ್ತಿದ್ದರು. ದಾನಧರ್ಮ ಇವರಲ್ಲಿಯೇ ನೆಲೆಯಾಗಿದ್ದಿತು. ಮೂರನೇ ಜಾತಿಯವರು ವೈಶ್ಯರು. ಇದು ವ್ಯಾಪಾರೀ ವರ್ಗವು. ಇವರು ವ್ಯಾಪಾರ-ಉದ್ಯಮದಲ್ಲಿ ವ್ಯಾಪೃತರಾಗಿರತಕ್ಕವರು. ಕ್ರಯ-ವಿಕ್ರಯಮಾಡಿ ದೇಶ-ವಿದೇಶಗಳಲ್ಲಿ ಲಾಭ ಪಡೆಯುವುದೇ ಇವರ ವ್ಯವಸಾಯವು. ನಾಲ್ಕನೆಯ ಜಾತಿಯವರೇ ಶೂದ್ರರು. ಕೃಷಿಯೇ ಇವರ ಜೀವನ. ಭೂಮಿ ಹೂಡುವುದು, ಧಾನ್ಯಗಳನ್ನು ಬಿತ್ತುವುದು ಇವೇ ಇವರ ಪರಿಶ್ರಮದ ವ್ಯವಸಾಯಗಳು. ಈ ನಾಲ್ಕು ಜಾತಿಗಳಲ್ಲಿರುವ ಶುದ್ಧಾಚಾರದ ತಾರತಮ್ಯವು ಇವರಿವರ ಸ್ಥಾನನಿರ್ದೇಶ ಮಾಡುವುದು. ಇವರಲ್ಲಿ ಸಗೋತ್ರವಿವಾಹ ನಿಷಿದ್ಧವಿದೆ. ಯಾವ ವಿವಾಹಿತ ಸ್ತ್ರೀಯೂ ಎಂದಿಗೂ ಪುನರ್ವಿವಾಹವನ್ನು ಮಾಡಿಕೊಳ್ಳುವುದಿಲ್ಲ.

"The Brahmanas study the four Vedashastras. The teachers must themselves have closely studied the deep and secret principles they contain and penetrated to their remotest meaning."

"ಬ್ರಾಹ್ಮಣರು ವೇದ-ಶಾಸ್ತ್ರಗಳನ್ನು ಪಠಿಸುವರು. ಈ ಆಚಾರ್ಯ-ಅಧ್ಯಾಪಕರಿಗೆ ವೇದಗಳ ಗಂಭೀರ ಮತ್ತು ಗೂಢ ಪ್ರಮೇಯಗಳನ್ನು ಆಳವಾಗಿ ಅಭ್ಯಸಿಸಿ ಭೇದಕ ದೃಷ್ಟಿಯಿಂದ ಅವುಗಳ ಸೂಕ್ಷ್ಮ ಅರ್ಥದ ಯಥಾರ್ಥ ಬೋಧವನ್ನು ಅಳವಡಿಸಿಕೊಳ್ಳಬೇಕಾಗುವುದು."

"When they have finished their education, and have attained 30 years of age, then their character is formed and their knowledge is ripe. When they have secured an occupation, they first of all thank their master for his attention. There are some, deeply versed in antiquity, who devote themselves to elegant studies, and live apart from the world, and retain the simplicity of their character. These rise above mundane pursuits and are as insensible to renown as to the contempt of the world. Their name having spread a far, the Rulers appreciate them highly, but are unable to draw them to court. The chief of the country honours them on account of their (mental) gifts, and the people exalt their fame and render them universal homage. This is the reason of their devoting themselves to the studies with ardour and resolution, without any sense of fatigue." (*Beal:* Hiuentsang, p. 83)

"ಯಾವ ಕಾಲಕ್ಕೆ ಬ್ರಹ್ಮಚಾರಿಗಳು ತಮ್ಮ ಅಧ್ಯಯನವನ್ನು ಪೂರ್ಣಗೊಳಿಸಿ ಅವರಿಗೆ ೩೦ ವರ್ಷ ಪ್ರಾಯವಾಗುವುದೋ ಆಗ ಅವರ ಲೌಕಿಕ, ಪಾರಮಾರ್ಥಿಕ ಆಚರಣೆ ಅಚ್ಚುಕಟ್ಟಾಗಿ ರೂಪುಗೊಳ್ಳುವುದು ಮತ್ತು ಅವರ ಜ್ಞಾನವೂ ಸಹ ಪಕ್ವವಾಗುವುದು. ಅವರು ತಮಗೆ ಪ್ರಾಪ್ತವಾದ ಯಶಸ್ಸು, ವಿದ್ಯಾ-ನೈಪುಣ್ಯ ಮತ್ತು ವೈಭವದ ಶ್ರೇಯಸ್ಸನ್ನು ಮೊಟ್ಟ ಮೊದಲು ಗುರುಗಳಿಗೆ ಕೊಡುವರು. ಅಧ್ಯಯನವು ಪೂರ್ಣವಾದನಂತರ ತಮ್ಮ ಬಗೆ ಗುರುಗಳು ವಹಿಸಿದ ಪರಿಶ್ರಮಕ್ಕೆ ಕೃತಜ್ಞತೆಯಿಂದ ಶ್ರಮ

ಪಟ್ಟು ಯೋಗ್ಯ ಗುರುದಕ್ಷಿಣೆ ಕೊಡುವರು. ಅವರಲ್ಲಿ ಕೆಲವರು ಆಳವಾದ ಗಂಭೀರ ಜ್ಞಾನವನ್ನು ಸಂಪಾದಿಸುವರು. ಉಚ್ಚ ತರಗತಿಯ ವೇದಾಂತ ಶಾಸ್ತ್ರವನ್ನು ಚೆನ್ನಾಗಿ ಅಭ್ಯಸಿಸುವರು. ದಾಂಪತ್ಯಜೀವನಕ್ಕೆ ಸಿಲುಕದೆ ಸಂಸಾರ ವ್ಯಾಮೋಹವನ್ನು ಕಡೆಗಣಿಸುವರು. ಜಗತ್ತಿನ ವ್ಯಾಪಾರದಿಂದ ದೂರವಾಗಿ ವಿಷಯದ ವಿರಕ್ತಿಯನ್ನು ಹೆಚ್ಚಿಸುವರು. ಐಹಿಕ ಭೋಗಗಳ ವಾಸನೆಯಿಂದ ಮೇಲಕ್ಕೆದ್ದು ಜಗತ್ತಿನ ತಿರಸ್ಕಾರವನ್ನು ಲೆಕ್ಕಿಸದೆ ನಿಂದೆ-ಸ್ತುತಿಗಳಲ್ಲಿ ಸಮಗೊಂಡಿರುವರು. ಎಲ್ಲೆಡೆಯೂ ವ್ಯಾಪಿಸಿದ ಅವರ ಕೀರ್ತಿಯನ್ನು ಕೇಳಿ ರಾಜರು ಅವರ ಆದರ-ಸತ್ಕಾರವನ್ನು ಮಾಡುವರು. ಅವರನ್ನು ತಮ್ಮ ಸಭೆಗೆ ಒಯ್ಯಲು ಎಷ್ಟು ಪ್ರಯತ್ನಪಟ್ಟರೂ ಅದು ರಾಜರಿಗೆ ಸಾಧ್ಯವಾಗುವುದು ಕಷ್ಟ. ಆಯಾ ರಾಷ್ಟ್ರದ ಮುಖ್ಯಸ್ಥರೆಲ್ಲ ಅವರ ಮನೋಜಯಾದಿ ಅಸಾಮಾನ್ಯ ಗುಣಗಳ ಬಗ್ಗೆ ಅವರನ್ನು ಚೆನ್ನಾಗಿ ಆದರಿಸುವರು. ಸ್ತುತಿ-ಸ್ತವನಗಳಿಂದ ಅವರ ಪ್ರಚಾರ ಮಾಡುವರಲ್ಲದೆ ತಾವೂ ಸಹ ಅವರ ಭಕ್ತರಾಗುವರು. ಎಲ್ಲಾ ತೊಡಕು-ತೊಂದರೆಗಳನ್ನು ಮೀರಿ ಯಾವಾಗಲೂ ಉತ್ಸಾಹಗೊಂಡು ಆತ್ಮಜ್ಞಾನಾಭ್ಯಾಸದಲ್ಲಿ ಮತ್ತು ಅದರ ಅಚಲವಾದ ನಿಷ್ಠೆಯಲ್ಲಿ ಯಾವ ದಣಿವೂ ಇಲ್ಲದೆ ಇರುವ ಸ್ಥಿತಿಯೇ ಅವರಲ್ಲಿ ಭಕ್ತಿಯುಂಟಾಗಲು ಕಾರಣವಾಗುವುದು.''

"Plain living and high thinking," ತತ್ವದ ನೆಲೆಬೀಡನ್ನು ಪರಿಶೋಧಿಸಲು ಹೊರಟ ಪಾಶ್ಚಾತ್ಯರಿಗೆ ಇಲ್ಲಿಯ ಬ್ರಾಹ್ಮಣರನ್ನು ಕಂಡು ಕೃತಕೃತ್ಯತೆಯೆನಿಸಿತು. ಕಂದ-ಮೂಲಾದಿಗಳ ಆಹಾರ, ವಲ್ಕಲಾದಿ ಬಟ್ಟೆ, ಅಜಾತಶತ್ರುತ್ವ, ಸರ್ವಭೂತ ಹಿತದೃಷ್ಟಿ, ನಿರ್ವಿಷಯ ಆತ್ಮತೃಪ್ತಿ, ಸಮಾಧಾನದ ಶಾಂತವೃತ್ತಿ, ನಿರುಪದ್ರವಿಯಾದ ಸರಳ ಮತ್ತು ಸುಲಭ ಜೀವನ, ಪರಾಕಾಷ್ಠೆಯ ಉನ್ನತ ಸದ್ವಿಚಾರಗಳು ಇವೇ ಅಂದಿನ ಬ್ರಾಹ್ಮಣರ ನೈಸರ್ಗಿಕ ಲಕ್ಷಣಗಳಾಗಿದ್ದುವು. "ಮನಸಿ ಚ ಪರಿತುಷ್ಟೇ ಕೋಽರ್ಥವಾನ್ ಕೋ ದರಿದ್ರಃ'' ಬ್ರಾಹ್ಮಣರನ್ನು ನೋಡಿದೊಡನೆ ಈ ವಾಕ್ಯದ ನಿಜತ್ವವು ಮನಸ್ಸಿನಲ್ಲಿ ಬಿಂಬಿಸುತ್ತಿತ್ತು. ಇವರ ಸಂದರ್ಶನವನ್ನು ಮಾಡಿದ ಕ್ಷಣದಲ್ಲಿಯೇ "ಸ ತು ಭವತಿ ದರಿದ್ರೋ ಯಸ್ಯ ತೃಷ್ಣಾ ವಿಶಾಲಾ'' ಎಂಬುದಾಗಿ ತನ್ನಷ್ಟಕ್ಕೆ ಮನಸ್ಸು ಹೇಳತೊಡಗು

ತ್ತಿತ್ತು. ಮನಸ್ಸೊಂದು ಯಾವಾಗಲೂ ಸಂತುಷ್ಟವಿದ್ದರೆ ಯಾರು ದರಿದ್ರರು ಮತ್ತು ಯಾರು ಶ್ರೀಮಂತರು? ಯಾವಾತನ ಆಶೆ ಹೆಚ್ಚೋ ಆತನೇ ದರಿದ್ರನು ಎಂಬುದಾಗಿ ಮೇಲೆ ಉದಾಹರಿಸಿದ ಸಂಸ್ಕೃತ ವಾಕ್ಯಗಳ ಅರ್ಥ.

ಯೋ ಮೇ ಗರ್ಭಗತಸ್ಯಾಪಿ ವೃತ್ತಿಂ ಕಲ್ಪಿತವಾನ್ ಪ್ರಭುಃ ।
ಶೇಷವೃತ್ತಿವಿಧಾನಾಯ ಸ ಕಿಂ ಸುಪ್ತೋಽಥವಾ ಮೃತಃ ॥

ಯಾವ ಪರಮಾತ್ಮನು, ನಾನು ಗರ್ಭದಲ್ಲಿರುವಾಗಲೂ ನನ್ನ ಜೀವನದ ಚಿಂತೆಯನ್ನು ವಹಿಸಿದ್ದನೋ ಅವನೀಗಲೂ ಇದ್ದೇ ಇರುವನು. ಆತನು ನಿದ್ರಿಸುವವನೂ ಅಲ್ಲ ಮತ್ತು ಮೃತಪಡುವವನೂ ಅಲ್ಲವೆಂದಾದ ಮೇಲೆ ಜೀವನದ ಚಿಂತೆ ನನಗೇಕೆ? 'ಆಯುರನ್ನಂ ಪ್ರಯಚ್ಛತಿ' ಎಂಬ ದೃಢವಾದ ನಂಬಿಕೆಯಿಂದ ಬ್ರಾಹ್ಮಣರ ಜೀವನ ಬಲು ಶಾಂತವಾಗಿತ್ತು.

ಭೋಜನಾಚ್ಛಾದನೇ ಚಿಂತಾಂ ವೃಥಾ ಕುರ್ವಂತಿ ಮಾನವಾಃ ।
ಯೋಽಯಂ ವಿಶ್ವಂಭರೋ ದೇವಃ ಸ ಭಕ್ತಾನ್ ಕಿಮುಪೇಕ್ಷತೇ ॥

ಎಂಬೀ ಮಾತು ಇವರ ವಿಷಯದಲ್ಲಿ ಸತ್ಯವಾಗಿತ್ತು. ಬಾಹ್ಯಭಂಡ ಜೀವನವನ್ನು ನಂಬಿ ವಿಷಯಗಳಿಂದ ನೊಂದು ತ್ರಿವಿಧತಾಪಗಳಿಂದ ಬೆಂದು ಬೆಂಡಾಗಿ ನಿಜವಾದ ಸುಖವನ್ನು ಉಂಡು ತೇಗುವ ಜನರನ್ನು ಕಂಡು 'He, whose wants are few, is happy' ಎಂಬುದನ್ನು ಸೋದಾಹರಣವಾಗಿ ಮಂಡಿಸೋಣವೆಂದು ಹೊರಟ ಪಾಶ್ಚಾತ್ಯ ಪಂಡಿತರಿಗೆ ಈ ಬ್ರಾಹ್ಮಣರ ಜೀವನ ತುಂಬ ತೃಪ್ತಿಕರವೆನಿಸಿತು. ಇಂತಹವರಲ್ಲೊಬ್ಬನಾದ ಆಲ್ಿವರ ಗೋಲ್ಡ್‌ಸ್ಮಿತ್ ಎಂಬುವನು ತನ್ನ ದೇಶಕ್ಕೆ ತೆರಳಿ "ಸಿಟಿಜನ್ ಆಫ್ ದಿ ವರ್ಲ್ಡ್" ಎಂಬ ಲೇಖನವನ್ನು ಬರೆದು ಪ್ರಸಿದ್ಧಿಸಿದ್ದುದರ ಕೆಲಕೆಲ ಭಾಗವನ್ನು ಕಣ್ಣುತುಂಬ ನೋಡಿ ಮನದಣೀ ಹರ್ಷಪಡೋಣ. ಹಿಂದಿನವರ ವಿಷಯವಂತೂ ಹೇಳತೀರದಷ್ಟು ಮಹತ್ವದ್ದಾಗಿದೆ. ಕೇವಲ ಒಂದುನೂರು ಐವತ್ತು ವರ್ಷದ ಹಿಂದಿದ್ದ ನಮ್ಮ ಪೂರ್ವಜರ ಈ ಮೇಲ್ಮೆಯನ್ನು ಕಂಡು ನಾವೂ ಅವರನ್ನು ಗೌರವಿಸೋಣ.

"Hail O! ye simple, honest Brahmanas of the East, ye noffensive friends of all that were born to happiness as well

as you, you never sought a short-lived pleasure from the miseries of other creatures. You never studied the tormenting arts of ingenious refinement. You never looked upon a guilty meal. How much more purified and refined are all your sensations than ours? You distinguish every element with the utmost precision, a stream untasted before is a new luxury a change of air is a new banquet too refined for Western imaginations to conceive."

ಸಾಧುಜೀವನದ ಸರಳ ಮತ್ತು ಪರಿಶುದ್ಧವಾದ ಜೀವನವುಳ್ಳ ಪೌರಸ್ತ್ಯ ಬ್ರಾಹ್ಮಣರಿರಾ! ನಿಮಗೆ ಯಾವಾಗಲೂ ಜಯವಾಗಲಿ. ಧನ್ಯರು, ನೀವೇ ಧನ್ಯರು. ನಿಮ್ಮಂತೆ ಸತ್ಯಸುಖವನ್ನು ಪಡೆದು ಕೃತಕೃತ್ಯರಾಗುವುದಕ್ಕಾಗಿ ಹುಟ್ಟಿರುವ ಎಲ್ಲರ ಸಂಗಡ ನಿಮ್ಮ ಹಾರ್ದಿಕ ಪ್ರೇಮವಿರುವುದು. ನೀವು ವಿಶ್ವಬಂಧುಗಳು. ಯಾರಿಗೂ ತೊಂದರೆ ಕೊಡುವ ನಿರುಪದ್ರವವಾದ ಜೀವನ ನಿಮ್ಮದು. ಸ್ವಾರ್ಥಕ್ಕಾಗಿ ಪರರನ್ನು ಹಿಂಸಿಸಿ ಅವರ ಸುಖವನ್ನು ಅಪಹರಿಸುವ ದುಃಶ್ಚಟ ನಿಮ್ಮಲ್ಲಿಲ್ಲ. ಎಲ್ಲಾ ಕ್ಷಣಭಂಗುರ ಸುಖವನ್ನೂ ನೀವು ಕಡೆಗಾಣಿಸಿರುವಿರಿ. ಮೋಸಮಾಡಿ ಆಧ್ಯಾತ್ಮಿಕ ಪ್ರಗತಿಗೆ ವಿಘ್ನವಾಗುವ ಕೃತಕಸಭ್ಯತೆಯ ಚಾತುರ್ಯದಿಂದ ಪೀಡಿಸುವ ಭೌತಿಕ ವಿದ್ಯೆಗಳನ್ನು ಕಲಿಯಲು ನೀವು ಇಚ್ಛಿಸುವುದೇ ಇಲ್ಲ. ಅಂತಹ ಪ್ರವೃತ್ತಿಯೇ ನಿಮ್ಮಲ್ಲಿಲ್ಲ. ಸಾಮಾನ್ಯ ಜನರ ಬಾಯಿ ನೀರು ಕರಿಸುವ ಹಿಂಸಾತ್ಮಕವಾದ ಉತ್ತೇಜಕ ಆಹಾರಗಳನ್ನು ನಿಮಗೆ ಭಾವಿಸಿಯೇ ಗೊತ್ತಿಲ್ಲ. ನಮ್ಮ ಈ ಆಚಾರ-ವಿಚಾರಗಳಿಗಿಂತಲೂ ನಿಮ್ಮ ಆಚಾರ-ವಿಚಾರಗಳು ಪರಾಕಾಷ್ಠೆಯ ಪರಿಶುದ್ಧವಾಗಿರುವುವು. ಉನ್ನತ ಅಂತಸ್ತಿನ ಉಚ್ಚನೀತಿ ನಿಮ್ಮದು; ವಿಶ್ವಕ್ಕೆ ಆದರ್ಶವಾದ ಒಂದು ಪವಿತ್ರ ನಿಮ್ಮ ಜೀವನ. ಆಧ್ಯಾತ್ಮಿಕ ವಿಕಾಸ ಮತ್ತು ಪರಿಶುದ್ಧತೆ ನಿಮ್ಮಲ್ಲಿದೆ.

ನಿಮ್ಮ ಸದಸದ್ವಿವೇಕಶಕ್ತಿಯು ಅಗಾಧವಾದುದು. ಪಂಚಭೂತಗಳನ್ನೂ, ಅವುಗಳ ಸೂಕ್ಷ್ಮ ಕಾರ್ಯಗಳನ್ನೂ ತಪ್ಪದೆ ನೀವು ವಿಂಗಡಿಸುವಿರಿ. ಪ್ರತಿಭೂತದ ಯಥಾರ್ಥಪರಿಚಯು ನಿಮಗಿದೆ. ನಿಸರ್ಗರಮಣೀಯವಾದ ಸ್ಥಳಗಳಲ್ಲಿ ಧ್ಯಾನಾಸಕ್ತರಾಗಿ ಕುಳಿತುಕೊಳ್ಳುವದೇ ನಿಮ್ಮ ಸುಖಾತಿ

ಶಯವು. ಮೊದಲು ಯಾರೂ ಸವಿಯದಿದ್ದ ಜುಳುಜುಳು ಹರಿಯುವ ನಿರ್ಮಲವಾದ ನೀರಿನ, ಹೊಸ ಹೊಸ ಹಳ್ಳಗಳನ್ನೂ, ರಮಣೀಯತೆಯಿಂದ ಹರಿಯುವ ನದಿಗಳನ್ನೂ, ದಿವ್ಯಭಾವವನ್ನುಂಟುಮಾಡುವ ಸರೋವರಗಳನ್ನೂ ಕಂಡು, ಅಲ್ಲಿ ವಿಲಂಬವಾಗಿ ಸ್ನಾನಸಂಧ್ಯಾದಿಗಳನ್ನು ನಡೆಸುವದೇ ನಿಮ್ಮ ನೂತನ ಭೋಗಸುಖ. ಸಂಸಾರದ ಕಲುಷಿತ ವಾತಾವರಣವನ್ನು ಬಿಟ್ಟು, ನಿಸರ್ಗರಮಣೀಯವಾದ ಪವಿತ್ರ ಏಕಾಂತವನ್ನು ಸೇವಿಸುವದೇ ನಿಮ್ಮ ಪಂಚಭಕ್ಷ್ಯಪರಮಾನ್ನ ಭೋಜನ; ಹೊಸ ಹಬ್ಬ. ಪಾಶ್ಚಾತ್ಯ ಜನರಿಗೆ ನಿಲುಕದ ಪರಮಪವಿತ್ರವಾದ ಒಂದು ದಿವ್ಯ ಜೀವನವಿದು! ವಿದೇಶ ಮತ್ತು ವಿಧರ್ಮದವರು ಎಂದೆನಿಸಿರುವ ಗುಣಗ್ರಾಹಿ ಜನರು. ನಿಷ್ಪಕ್ಷಭಾವದಿಂದ ತಮ್ಮ ದೇಶಧರ್ಮದ ಅಭಿಮಾನವನ್ನು ತೊರೆದು, ಮಾಡಿದ ವರ್ಣನೆ ಇದು. ಇದರಲ್ಲಿಯೇ ಆರ್ಯಸಂಸ್ಕೃತಿಯ ಮಹತ್ವ ಅಡಗಿದೆ. ಕಂಡು ಕೇಳಿ, ಬ್ರಾಹ್ಮಣರನ್ನು ಮತ್ತು ಭಾರತೀಯ ಸಂಸ್ಕೃತಿಯನ್ನು ಎಷ್ಟು ಮಹತ್ವಪೂರ್ಣ ದೃಷ್ಟಿಯಿಂದ ಪಾಶ್ಚಾತ್ಯರೂ ಸಹ ನೋಡುವರೆಂಬುದು ಇದರಿಂದ ತಿಳಿದುಬರುವುದಲ್ಲವೇ?

ನಮ್ಮ ಸಂಸ್ಕೃತಿಯ ವಿಷಯದಲ್ಲಿ ನಿಮ್ಮ ಮೆಚ್ಚಿಗೆಯಿರುವುದಾದರೆ, ನಾವು ಅದನ್ನು ನಂಬಲಡ್ಡಿಯಿಲ್ಲವೆಂದು, ಪಾಶ್ಚಾತ್ಯ ಪಂಡಿತರನ್ನು ಕೇಳುವ ಪ್ರಸಂಗವು ಭಾರತೀಯರಿಗೆ ಒದಗುವಲ್ಲಿ, ಅವರು ತಮ್ಮ ಹೃದಯವನ್ನು ಬಿಚ್ಚಿ, ಅಲ್ಲಿ ನೆಲೆಸಿದ ಆರ್ಯಧರ್ಮದ ಪೂಜ್ಯತ್ವ ಮತ್ತು ಪ್ರೇಮವನ್ನು ವ್ಯಕ್ತಪಡಿಸುವರೆಂಬುವುದಕ್ಕೆ ಈ ಮೇಲ್ಕಂಡ ವಾಕ್ಯಗಳೇ ಪ್ರಮಾಣಗಳು.

## ವರ್ಣಧರ್ಮ ಕರ್ಮಗಳು

ಅಧ್ಯಾಪನಮಧ್ಯಯನಂ ಯಜನಂ ಯಾಜನಂ ತಥಾ ।
ದಾನಂ ಪ್ರತಿಗ್ರಹಂ ಚೈವ ಬ್ರಾಹ್ಮಣಾನಾಮಕಲ್ಪಯತ್ ॥

(ಮನು ೧–೮೮)

ಶಮೋ ದಮಸ್ತಪಶ್ಶೌಚಂ ಕ್ಷಾಂತಿರಾರ್ಜವಮೇವ ಚ ।
ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಂ ॥

(ಗೀತಾ ೧೮–೪೨)

ವೇದಾಧ್ಯಯನವನ್ನು ಮಾಡಿ ಬೇರೆಯವರಿಗೆ ಹೇಳಿಕೊಡುವುದು, ಯಜ್ಞವನ್ನು ಮಾಡಿ ಪರರಿಂದ ಮಾಡಿಸುವುದು, ಅಂತೆಯೇ ದಾನವನ್ನು ಮಾಡಿ ಪರರಿಂದ ದಾನವನ್ನು ಸ್ವೀಕರಿಸುವುದು, ಈ ಆರು ಕರ್ಮಗಳಲ್ಲದೆ ಮನೋನಿಗ್ರಹ, ಇಂದ್ರಿಯ ನಿಗ್ರಹ, ತಪಸ್ಸು, ಪವಿತ್ರತೆ, ಶಾಂತಿ, ಸರಳತೆ, ವೇದಶಾಸ್ತ್ರಗಳ ಪ್ರಾವೀಣ್ಯತೆ, ಪರಮಾತ್ಮಸಾಕ್ಷಾತ್ಕಾರ, ಕರ್ಮೋಪಾಸನೆಗಳಲ್ಲಿ ಆಸ್ತಿಕತೆ, ಭಕ್ತಿ, ವಿಶ್ವಾಸ ಮುಂತಾದವು ಬ್ರಾಹ್ಮಣರಿಗೆ ಹೇಳಿದ ಧರ್ಮಕರ್ಮಗಳು.

ಪ್ರಜಾನಾಂ ರಕ್ಷಣಂ ದಾನಮಿಜ್ಯಾಽಧ್ಯಯನಮೇವ ಚ ।
ವಿಷಯೇಷ್ವಪ್ರಸಕ್ತಿಶ್ಚ ಕ್ಷತ್ರಿಯಸ್ಯ ಸಮಾಸತಃ ॥ (ಮನು. ೧–೮೯)

ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇಚಾಪ್ಯಪಲಾಯನಮ್ ।
ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ॥

ಪ್ರಜೆಗಳ ರಕ್ಷಣೆ, ದಾನ ಕೊಡುವುದು, ಯಜ್ಞ ಮಾಡುವುದು, ಅಧ್ಯಯನಮಾಡುವುದು, ವಿಷಯಗಳಲ್ಲಿ ಅನಾಸಕ್ತಿಯು, ಇವಲ್ಲದೆ ಶೌರ್ಯ, ತೇಜ, ಧೈರ್ಯ, ದಕ್ಷತೆ, ರಣಭೂಮಿಯಿಂದ ಪಲಾಯನವನ್ನು ಮಾಡದಿರುವುದು, ಪ್ರಭುತ್ವ ಮೊದಲಾದವು ಕ್ಷತ್ರಿಯರ ಸ್ವಾಭಾವಿಕ ಧರ್ಮ ಕರ್ಮಗಳು.

ಪಶೂನಾಂ ರಕ್ಷಣಂ ದಾನಮಿಜ್ಯಾಧ್ಯಯನಮೇವ ಚ ।
ವಣಿಕ್ಪಥಂ ಕುಸೀದಂ ಚ ವೈಶ್ಯಸ್ಯ ಕೃಷಿಮೇವ ಚ ॥ (ಮನು ೧–೯೦)

ಕೃಷಿ ಗೋರಕ್ಷ ವಾಣಿಜ್ಯಂ ವೈಶ್ಯ ಕರ್ಮ ಸ್ವಭಾವಜಂ ॥ (ಗೀ. ೧೮–೪೪)

ಗೋರಕ್ಷಣ, ದಾನ, ಯಜನ, ಅಧ್ಯಯನ, ವ್ಯಾಪಾರ, ಬಡ್ಡಿ ವ್ಯವಹಾರ, ಕೃಷಿ ಮುಂತಾದವು ವೈಶ್ಯರಿಗೆ ಸಲ್ಲುವ ಸ್ವಾಭಾವಿಕ ಧರ್ಮ ಕರ್ಮಗಳು.

ಏಕಮೇವ ತು ಶೂದ್ರಸ್ಯ ಪ್ರಭುಃ ಕರ್ಮ ಸಮಾದಿಶತ್ ।
ಏತೇಷಾಮೇವ ವರ್ಣಾನಾಮ್ ಶುಶ್ರೂಷಾಮನಸೂಯಯಾ ॥
(ಮನು ೧–೯೧)

ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಂ ॥ (ಗೀ. ೧೮–೪೪)

"ವಿಶ್ವಸ್ಯ ರಾಜಾ" ಎಂಬುದಾಗಿ ಋಗ್ವೇದವು ಯಾವಾತನನ್ನು ಗುರಿ ಇಟ್ಟು ಹೇಳಿರುವುದೋ, ಅಂತಹ ಪರಮಾತ್ಮನು ಮೂರು ವರ್ಣದವರಿಗೆ ಕ್ರಮವಾಗಿ ಪೃಥಕ್ ಪೃಥಕ್ ಧರ್ಮಕರ್ಮಗಳನ್ನು ವಿಧಿಸಿ, ಈ ಮೂರು ಜಾತಿಯ ಸೇವೆಯನ್ನು ಅಸೂಯೆಯಿಲ್ಲದೆ ಮಾಡುವ ಒಂದೇ ಒಂದು ಧರ್ಮಕರ್ಮವನ್ನು ಕೊನೆಯಲ್ಲಿ ಶೂದ್ರರಿಗಾಗಿ ವಿಧಿಸಿದನು.

ವಾಯುಪುರಾಣದ ಶ್ಲೋಕಗಳು ವರ್ಣಾಶ್ರಮದ ಉಪಯುಕ್ತತೆಯ ವಿಷಯದಲ್ಲಿ ವಿವರಿಸಿದುದನ್ನು ಗಮನಕ್ಕೆ ತರೋಣ.

## ವರ್ಣಗಳ ಉಪಯುಕ್ತತೆ

ಯದಿ ತೇ ಬ್ರಾಹ್ಮಣಾ ನ ಸ್ಯುಃ ಜ್ಞಾನಯೋಗವಹಾಃ ಸದಾ ।
ಉಭಯೋರ್ಲೋಕಯೋರ್ದೇವಿ ಸ್ಥಿತಿರ್ನಸ್ಯಾತ್ಸಮಾಸತಃ ॥
ಯದಿ ನಃಕ್ಷತ್ರಿಯೋ ಲೋಕೋ ಜಗತ್ಸ್ಯಾದಧರೋತ್ತರಮ್ ।
ರಕ್ಷಣಾತ್ ಕ್ಷತ್ರಿಯೈರೇವ ಜಗದ್ಭವತಿ ಶಾಶ್ವತಮ್ ॥
ತಥೈವ ದೇವಿ ವೈಶ್ಯಾಶ್ಚ ಲೋಕಯಾತ್ರಾಹಿತಾಃ ಸ್ಮೃತಾಃ ।
ಅನ್ಯತಾನುಪಜೀವನ್ತಿ ಪ್ರತ್ಯಕ್ಷಫಲದಾ ಹಿ ತೇ ॥
ಶೂದ್ರಾಶ್ಚ ಯದಿ ತೇ ನ ಸ್ಯುಃ ಕರ್ಮಕರ್ತಾ ನ ವಿದ್ಯತೇ ।
ತ್ರಯಃ ಪೂರ್ವೇ ಶೂದ್ರಮೂಲಾಃ ಸರ್ವೇ ಕರ್ಮಕರಾಃ ಸ್ಮೃತಾಃ ॥
(ವಾ. ಪು.)

ಬ್ರಾಹ್ಮಣರ ಜ್ಞಾನಸಾಮರ್ಥ್ಯದಿಂದ ಸಮಾಜಕ್ಕೆ ಮೋಕ್ಷಮಾರ್ಗ ಲಭಿಸುವುದು. ಮತ್ತು ಅವರ ಯೋಗಸಾಮರ್ಥ್ಯದಿಂದ ಸಮಾಜದ ರಕ್ಷಣೆ ಯಾಗುವುದು. ಈ ಕಾರಣದಿಂದ ಬ್ರಾಹ್ಮಣರು ಇರದಿದ್ದರೆ ಸಮಾಜದ ಇಹಪರದ ಎಲ್ಲಾ ಸ್ಥಿತಿಗತಿಯು ಕೆಟ್ಟುಹೋಗುವುದು. ಕ್ಷತ್ರಿಯರಿರದಿದ್ದರೆ ಜಗತ್ತು ಅಧರೋತ್ತರವಾಗಿಹೋಗುವುದು, ಎಂದರೆ ಕೆಳಗಿನವರು ಮೇಲೆ ಬರುವರು. ಧರ್ಮಶಾಸನ ನಷ್ಟವಾಗುವುದು. ವರ್ಣಾಶ್ರಮಗಳು ಮಲಿನವಾಗುವುವು. ಸತ್ವಶೀಲ ಕ್ಷತ್ರಿಯರಿಂದ ರಕ್ಷಿಸಲ್ಪಟ್ಟ ಜಗತ್ತಿನಲ್ಲಿ ಶಾಶ್ವತ ಸ್ವಾಸ್ಥ್ಯವು ನೆಲೆಗೊಳ್ಳುವುದು. ವ್ಯಾಪಾರದಲ್ಲಿ ಬುದ್ಧಿವಂತರಾದ ದಾನ ಧರ್ಮಶೀಲವುಳ್ಳ ವೈಶ್ಯರಿರದಿದ್ದರೆ, ರಾಷ್ಟ್ರದ ಜೀವನಯಾತ್ರೆ ಕಷ್ಟವಾಗಿ ಪರಿಣಮಿಸುವುದು. ಕೌಟುಂಬಿಕ, ಸಾಮಾಜಿಕ, ರಾಷ್ಟ್ರೀಯ ಜೀವನವು ಸುಖವಾಗಿ ಸಾಗಬೇಕಾದರೆ ಸಂಪತ್ತು ಬೇಕು. ಕೃಷಿ,

ಗೋರಕ್ಷಣ, ವಾಣಿಜ್ಯ (ವ್ಯಾಪಾರ) ಇವು ಮೂರೂ ವೈಶ್ಯರ ಕಡೆಗೇ ಇರುವದರಿಂದಲೂ, ಅವರ ಸಂಪತ್ತಿಯು ಸಹಾಯವು ರಾಷ್ಟ್ರಕ್ಕೇ ಆಗ ಬೇಕಾದುದರಿಂದಲೂ ರಾಷ್ಟ್ರದ ಸುಖಜೀವನಕ್ಕೆ ಇವರು ಸಹಾಯಕ ರಾಗುವರು. ಶ್ರೀಮಂತ ಮತ್ತು ಧಾರ್ಮಿಕರಾದವರನ್ನು ಮಿಕ್ಕ ಜನರು ಆಶ್ರಯಿಸುವರು. ಇವರು ಬಹುಜನರ ಜೀವನದ ಮಾರ್ಗಗಳಾಗುವರು, ಹೀಗೆ ಈ ವ್ಯಾಪಾರೀ ಧನಿಕವರ್ಗವು ಆಶ್ರಯಿಸಿದ ಜನರಿಗೆ ಪ್ರತ್ಯಕ್ಷ ಫಲರೂಪವಾಗುವುದು. ಶೂದ್ರರು ಇರದಿದ್ದರೆ ಬೆಳೆ—ಬೇಸಾಯ ಮಾಡು ವವರೇ ಇರದಂತಾಗುವುದು. ಜೀವನಕ್ಕೆ ಬೇಕಾದ ಧಾನ್ಯವು ಇವರ ಶ್ರಮದಿಂದಲೇ ರಾಷ್ಟ್ರಕ್ಕೆ ಸಿಗುವುದು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಮೂರು ವರ್ಗದವರಿಗೂ ಇವರು ಬೇಕಾದವರು. ಇವರಿಂದ ಪ್ರಾಪ್ತವಾದ ಅನ್ನದಿಂದಲೇ ಈ ಮೂರು ವರ್ಗದವರ ಸಂಗೋಪನ ವಾಗುವುದರಿಂದ ಜೀವನಕ್ಕೆ ಇವರು ಮೂಲಕಾರಣರು. ಈ ವರ್ಗವು ಶ್ರಮಜೀವಿಯಾಗಿರುವುದು.

## ವರ್ಣವೈಶಿಷ್ಟ್ಯ

ವರ್ಣವ್ಯವಸ್ಥೆಯು ಹಿಂದೂಧರ್ಮದ ಒಂದು ಪ್ರಾಮುಖ್ಯದ ಅಂಗ ವಿದ್ದು, ಹಿಂದೂ ಸಂಸ್ಕೃತಿಯ ಮಹತ್ವಪೂರ್ಣವಾದ ಒಂದು ಆದರ್ಶವನ್ನು ಅಥವಾ ವೈಶಿಷ್ಟ್ಯವನ್ನು ಪಡೆದಿದೆ. ಇದರಲ್ಲಿ ಸಮಾಜದ ಸುಸಂಘಟನೆ ಮತ್ತು ಸಾಮಾಜಿಕಜೀವನದ ಶ್ರಮವಿಭಾಗವಿದೆ. ಈ ನಾಲ್ಕು ವರ್ಣ ಗಳು ಸಮಾಜದ ಘಟಕಾವಯವಗಳಾಗಿರುವುವು. ಸುಸಂಘಟಿತ ಸಾಮು ದಾಯಿಕರೂಪವಿದು ಪರಮಾತ್ಮನ ಸ್ಥೂಲದೇಹವು. ಇದೇ ವಿರಾಡ್ರೂಪ ವೆನಿಸುವುದು. ಪುರುಷ ಸೂಕ್ತದಲ್ಲಿ

ಬ್ರಾಹ್ಮಣೋಽಸ್ಯ ಮುಖಮಾಸೀತ್ । ಬಾಹೂರಾಜನ್ಯಃ ಕೃತಃ ।
ಊರೂ ತದಸ್ಯ ಯದ್ವೈಶ್ಯಃ । ಪದ್ಭ್ಯಾಂ ಶೂದ್ರೋ ಅಜಾಯತ ॥

ಎಂಬುದಾಗಿ ಹೇಳಿರುವುದು. ಸಮಷ್ಟಿರೂಪವಾದ ಪರಮಾತ್ಮನ ವಿರಾಡ್ರೂಪದ ಮುಖದಿಂದ ಆದ ಬ್ರಾಹ್ಮಣರು, ಬಾಹುಗಳಿಂದ ಆದ ಕ್ಷತ್ರಿಯರು, ತೊಡೆಗಳಿಂದಾದ ವೈಶ್ಯರು, ಪಾದಗಳಿಂದಾದ ಶೂದ್ರರು

ಕ್ರಮವಾಗಿ ಆತನ ಮುಖ, ಭುಜಗಳು, ತೊಡೆಗಳು ಮತ್ತು ಪಾದಗಳೆಂದು ಶ್ರುತಿಯು ತಿಳಿಸುತ್ತದೆ. ಇದರಲ್ಲಿ ಒಂದು ದೇಹದ ಅವಯವಗಳಂತೆ ಈ ವರ್ಣಗಳು ಏಕವಾಕ್ಯತೆಯಿಂದಿದ್ದು, ತಮ್ಮ ತಮ್ಮ ಕಾರ್ಯಗಳನ್ನು ಏಕೀಭಾವದಿಂದ ನಡೆಸುತ್ತ ಸುಖಸಮಾಧಾನದಿಂದಿರಬೇಕೆಂದು ಶ್ರುತಿಯ ಆದೇಶವಿದೆ.

ಆಯಾ ವರ್ಣಗಳ ಭಿನ್ನ ಭಿನ್ನ ಧರ್ಮಕರ್ಮಗಳನ್ನು ಹೇಳಿದ್ದಾಯಿತು. ನಾಲ್ಕು ವರ್ಣದವರಿಗೂ, ಎಲ್ಲಾ ಮಾನವರಿಗೂ, ಹೇಳಿದ ಎಲ್ಲರಿಗೂ ಅನ್ವಯಿಸುವ ಸರ್ವಸಾಮಾನ್ಯ ಧರ್ಮಕರ್ಮಗಳನ್ನೂ ಈಗ ಲಕ್ಷಿಸೋಣ.

## ನಿಖಿಲ ಮಾನವ ಧರ್ಮ

ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯ ನಿಗ್ರಹಃ ।
ದಾನಂ ದಯಾ ದಮಃ ಶಾನ್ತಿಃ ಸರ್ವೇಷಾಂ ಧರ್ಮಸಾಧನಂ ॥
(ಯಾಜ್ಞವಲ್ಕ್ಯ ಅ. ೧. ೨)

ಯಾರನ್ನೂ ಪೀಡಿಸದಿರುವಿಕೆ, ಸತ್ಯ ಭಾಷಣ, ಪರರ ಸ್ವತ್ತನ್ನು ಅಪಹರಿಸದಿರುವಿಕೆ, ಶರೀರ ಮತ್ತು ಮನಸ್ಸಿನ ಪಾವಿತ್ರ್ಯ, ಇಂದ್ರಿಯ ದಮನ, ಯಥಾಶಕ್ತಿ ದಾನ, ಆಪತ್ತಿನಲ್ಲಿ ಸ್ವಪರರನ್ನು ರಕ್ಷಿಸುವುದು, ಮನೋಜಯ, ಅಪಕಾರಿಗಳಲ್ಲಿಯೂ ಉಪಕಾರದ ಬುದ್ಧಿ—ಈ ಧರ್ಮಗಳು ಎಲ್ಲ ವರ್ಣದವರಿಗೂ, ಎಲ್ಲಾ ಮಾನವಜಾತಿಗೂ ಅನ್ವಯಿಸುವವು ಎಂಬುದಾಗಿ ಯಾಜ್ಞವಲ್ಕ್ಯರು ಹೇಳಿರುವರು.

ಅಹಿಂಸಾ ಸತ್ಯಮಸ್ತೇಯಂ ಶೌಚಮಿಂದ್ರಿಯ ನಿಗ್ರಹಃ ।
ಏತಂ ಸಾಮಾಸಿಕಂ ಧರ್ಮಂ ಚಾತುರ್ವರ್ಣ್ಯೇಽಬ್ರವೀನ್ಮನುಃ ॥
(ಮ. ಸ್ಮೃ. ಅ. ೧೦, ಶ್ಲೋ. ೬೩)

ಅನ್ಯಾನ್ಯ ಸ್ಮೃತಿಗಳಲ್ಲಿ ಸಹ ಸಾರ್ವವರ್ಣಿಕ ಧರ್ಮವು ಹೇಳಿದ್ದುಂಟು.

ಅಹಿಂಸಾ ಸತ್ಯಮಸ್ತೇಯಮಕಾಮಕ್ರೋಧ ಲೋಭತಾ ।
ಭೂತಪ್ರಿಯ ಹಿತೇಹಾಚ ಧರ್ಮೋಽಯಂ ಸಾರ್ವವರ್ಣಿಕಃ ॥

ಈ ಶ್ಲೋಕದಲ್ಲಿ ಕಾಮಕ್ರೋಧ ರಹಿತನಾಗುವಿಕೆ ಮತ್ತು ಸರ್ವ ಪ್ರಾಣಿಗಳ ಪ್ರಿಯಹಿತವನ್ನಿಚ್ಛಿಸುವಿಕೆ ಈ ಎರಡು ಲಕ್ಷಣಗಳು ಹೆಚ್ಚಿರುವುವು.

ಸತ್ಯಮಸ್ತೇಯಮಕ್ರೋಧೋ ಹ್ರೀಃ ಶೌಚಂ ಧೀರ್ಧೃತಿರ್ದಮಃ ।
ಸಂಯತೇಂದ್ರಿಯತಾ ವಿದ್ಯಾ ಧರ್ಮಃ ಸರ್ವ ಉದಾಹೃತಃ ॥

ಸದಸದ್ವಿವೇಕ ಬುದ್ಧಿ, ಕಷ್ಟಕಾಲದಲ್ಲಿ ಧೈರ್ಯ, ವಿಧರ್ಮಾಯ ಅಥವಾ ಅಧರ್ಮಾಯ ಆಚರಣ ಮಾಡುವ ವಿಷಯದಲ್ಲಿ ಲಜ್ಜೆಯುಂಟಾಗುವುದು, ಆಧ್ಯಾತ್ಮವಿದ್ಯೆ ಆದಿ ಲಕ್ಷಣಗಳು ಈ ಶ್ಲೋಕಗಳಲ್ಲಿ ಹೇಳ್ಪಾಗಿವೆ.

ವಿಷ್ಣು ಪುರಾಣದಲ್ಲಿಯ ಮೂರನೆಯ ಅಂಶದ ಎಂಟನೆಯ ಅಧ್ಯಾಯದಲ್ಲಿಯೂ ಸರ್ವವರ್ಣಗಳ ಧರ್ಮಗಳು ಉಕ್ತವಾಗಿವೆ.

ಭೃತ್ಯಾದಿ ಭರಣಾರ್ಥಾಯ ಸರ್ವೇಷಾಂ ಚ ಪರಿಗ್ರಹಃ ।
ಋತುಕಾಲಾಭಿಗಮನಂ ಸ್ವದಾರೇಷು ಮಹೀಪತೇ ॥

ದಯಾ ಸಮಸ್ತಭೂತೇಷು ತಿತಿಕ್ಷಾ ನಾಭಿಮಾನಿತಾ ।
ಸತ್ಯಂ ಶೌಚಮನಾಯಾಸೋ ಮಂಗಲಂ ಪ್ರಿಯವಾದಿತಾ ॥

ಮೈತ್ರ್ಯಸ್ಪೃಹಾ ತಥಾ ತದ್ವದ ಕಾರ್ಪಣ್ಯಂ ನರೇಶ್ವರ ।
ಅನಸೂಯಾ ಚ ಸಾಮಾನ್ಯಾ ವರ್ಣಾನಾಂ ಕಥಿತಾ ಗುಣಾಃ ॥

ತಮ್ಮ ಕುಟುಂಬದ ಜನರ ಮತ್ತು ಸೇವಕಾದಿ ಜನರ ಸಂಗೋಪನಾರ್ಥವಾಗಿ ನೀತಿ ನ್ಯಾಯದಿಂದ ದ್ರವ್ಯೋಪಾರ್ಜನೆಯನ್ನು ಮಾಡುವುದೂ, ತಮ್ಮ ತಮ್ಮ ಸಹಧರ್ಮಚಾರಿಣಿಯರಲ್ಲಿಯೇ ಋತುಕಾಲದಲ್ಲಿ ಮಾತ್ರ ಮೊದಲನೆಯ ನಾಲ್ಕು ದಿನಗಳನ್ನೂ, ಹನ್ನೊಂದನೆಯ ಮತ್ತು ಹದಿಮೂರನೆಯ ರಾತ್ರಿಯನ್ನೂ, ಪರ್ವ ತಿಥಿಗಳನ್ನೂ, ದುರ್ದಿನಗಳನ್ನೂ ಬಿಟ್ಟು ಶುಭಘಳಿಗೆ ಮುಹೂರ್ತಗಳಲ್ಲಿ ಸತ್ಪುತ್ರ ಪ್ರಾಪ್ತಿಗಾಗಿ ರತಿಯನ್ನಿಚ್ಛಿಸುವುದೂ, ಭೂತದಯೆಯೂ, ಸಹನಶೀಲತೆಯೂ, ನಿರಭಿಮಾನತೆಯೂ, ಸತ್ಯಸಂಧತೆಯೂ, ಬಾಹ್ಯಾಂತರ ಪವಿತ್ರತೆಯೂ, ವ್ಯರ್ಥವಾಗಿ ಆಯಾಸ ಕಷ್ಟಗಳನ್ನು ಪಡದಿರುವಿಕೆಯೂ, ಸ್ವಪರಮಂಗಲಕರವಾದ ನಡೆನುಡಿಗಳನ್ನು ಇಟ್ಟುಕೊಳ್ಳುವುದೂ, ಯಾವಾಗಲೂ ಹಿತ ಮಿತ ಮೃದು ಮಧುರವಾಗಿ ಸತ್ಯವನ್ನು ನುಡಿಯುವುದೂ, ಸರ್ವರ ಕೂಡ ಸ್ನೇಹದಿಂದಿರುವುದೂ, ವಿಷಯಲಾಲಸೆಯನ್ನಿಟ್ಟುಕೊಳ್ಳದಿರುವುದೂ, ಕಂಡಕಂಡುದನ್ನು ಬಯಿಸದಿರುವುದೂ, ಕೃಪಣತನವಿಲ್ಲದಿರುವುದೂ, ಯಾರೊಡನೆಯೂ ಅಸೂಯೆಯಿಲ್ಲದಿರುವುದೂ ಇವು ಎಲ್ಲ ವರ್ಣಗಳಿಗೂ ಎಂದರೆ ಅಖಿಲ ಮಾನವ

ಜಾತಿಗೂ ಇರುವ ಪ್ರವೃತ್ತಿ ಸಾಮಾನ್ಯ ಧರ್ಮಗಳು. ವಿಶ್ವದ ಮಾನವರಿಗೆಲ್ಲ ಇವು ಬೇಕಾದ ಧರ್ಮಕರ್ಮಗಳು. ಇವನ್ನು ಜೀವನದ ನಿತ್ಯವ್ಯವಹಾರದಲ್ಲಿ ಅಳವಡಿಸಿಯೇ ಮಾನವನು ಸುಖ ಸಮಾಧಾನದ ದಿವ್ಯ ಜೀವನವನ್ನು ಸಾಗಿಸುವನು. ಶ್ರೀಮದ್ಭಾಗವತದಲ್ಲಿಯೂ ಪರಮಾತ್ಮನ ಕೃಪೆಗೆ ಮಾನವನು ಅರ್ಹನಾಗುವುದಕ್ಕೆ ಕಾರಣವಾದ ಸರ್ವ ಸಾಮಾನ್ಯ ಧರ್ಮಗಳನ್ನು ಬೋಧಿಸಿರುವುದು.

ಸತ್ಯಂ ದಯಾ ತಪಃ ಶೌಚಂ ತಿತಿಕ್ಷೇಕ್ಷಾ ಶಮೋ ದಮಃ ।
ಅಹಿಂಸಾ ಬ್ರಹ್ಮಚರ್ಯಂ ಚ ತ್ಯಾಗಃ ಸ್ವಾಧ್ಯಾಯ ಆರ್ಜವಂ ।
ಸಂತೋಷಃ ಸಮದೃಕ್ಸೇವಾ ಗ್ರಾಮ್ಯೇಹೋಪರಮಃ ಶನೈಃ ।
ನೃಣಾಂ ವಿಪರ್ಯಯೇಹೇಕ್ಷಾ ಮೌನಮಾತ್ಮವಿಮರ್ಶನಂ ।
ಅನ್ನಾದ್ಯಾದೇಃ ಸಂವಿಭಾಗೋ ಭೂತೇಭ್ಯಶ್ಚ ಯಥಾರ್ಹತಃ ।
ತೇಷ್ವಾತ್ಮದೇವತಾಬುದ್ಧಿಃ ಸುತರಾಂ ನೃಷು ಪಾಂಡವ ।
ಶ್ರವಣಂ ಕೀರ್ತನಂ ಚಾಸ್ಯ ಸ್ಮರಣಂ ಮಹತಾಂಗತೇಃ ।
ಸೇವೇಜ್ಯಾವನತಿರ್ದಾಸ್ಯಂ ಸಖ್ಯಮಾತ್ಮಸಮರ್ಪಣಂ ।
ನೃಣಾಮಯಂ ಪರೋಧರ್ಮಃ ಸರ್ವೇಷಾಂ ಸಮುದಾಹೃತಃ ।
ತ್ರಿಂಶಲ್ಲಕ್ಷಣವಾನ್ ರಾಜನ್ ಸರ್ವಾತ್ಮಾ ಯೇನ ತುಷ್ಯತಿ ॥

(ಶ್ರೀಮದ್ಭಾಗವತ ೭-೧೧-೮-೧೨)

ಸತ್ಯ, ದಯೆ, ತಪಸ್ಸು, ಪಾವಿತ್ರ್ಯ, ಸೈರಣೆ, ಸದಸದ್ವಿಚಾರ, ಮನೋನಿಗ್ರಹ, ಇಂದ್ರಿಯನಿಗ್ರಹ, ಅಹಿಂಸೆ, ಬ್ರಹ್ಮಚರ್ಯ, ತ್ಯಾಗ, ಸ್ತೋತ್ರಪಾಠ, ಸರಳಸ್ವಭಾವ, ಸಂತೋಷ, ಸಮದೃಷ್ಟಿ, ತನಗಿಂತಲೂ ಶ್ರೇಷ್ಠರ ಸೇವೆ, ಆದಷ್ಟು ಇಂದ್ರಿಯಸುಖದ ನಿವೃತ್ತಿ, ಮನುಷ್ಯರ ವಿಷಯಸುಖದ ಪ್ರಯತ್ನವು ದುಃಖಸಾಧಕವಾಗುವುದೆಂಬ ವಿಚಾರ, ವಾಕ್ಸಂಯಮನ, ಆತ್ಮಾನಾತ್ಮ ವಿವೇಕ, ಅನ್ನಾದಿಪದಾರ್ಥಗಳ ಯಥಾಧಿಕಾರ ವಿತರಣೆ, ಎಲ್ಲ ಜೀವಕೋಟಿಯನ್ನು ತನ್ನ ಆತ್ಮರೂಪವೆಂತಲೂ, ಇಷ್ಟದೇವತಾರೂಪವೆಂತಲೂ ನೋಡುವಿಕೆ, ಮಹಾತ್ಮರ ಪರಮಗತಿರೂಪನಾಗಿಯೂ, ಎಲ್ಲಾ ಜೀವಿಗಳ ಆನಂದರೂಪನಾಗಿಯೂ, ಮೋಕ್ಷರೂಪನಾಗಿಯೂ ಇರುವ ಪರಮಾತ್ಮನ ಚರಿತಾಮೃತದ ಸೇವನೆ ಮಾಡುವುದು, ಕರ್ಣರಸಾಯನವಾದ ಅವನ ಗುಣಮಾಹಾತ್ಮ್ಯಗಳ ಶ್ರವಣಮಾಡುವುದು,

ಆತನ ದಿವ್ಯಲೀಲೆಗಳನ್ನು ಪಾಡಿ ಪೊಗಳುವುದು, ಕೀರ್ತನಾರಂಗದಲ್ಲಿ ಮೈ ಮರೆಯುವುದು, ಪರಮಾತ್ಮನ ಆ ಲೀಲಾನುಗ್ರಹವನ್ನು ನೆನೆ-ನೆನೆದು ಆತನ ಮಂಗಲ ನಾಮಂಗಳನ್ನು ಅಖಂಡವಾಗಿ ಸ್ಮರಿಸುತ್ತ ಆ ಆನಂದ ದಲ್ಲಿಯೇ ಕರಗಿಹೋಗುವುದು, ಪರಮಾತ್ಮನ ವಿವಿಧ ವಿಗ್ರಹಗಳ ಸೇವೆ, ಪೂಜೆ, ಹೋಮ, ಹವನ, ನಮಸ್ಕಾರ, ಅನನ್ಯ ಶರಣಾಗತಿ, ಪರಮಾತ್ಮನ ದಾಸನೆಂದು ಭಾವಿಸುವಿಕೆ, ಪರಮಾತ್ಮನಲ್ಲಿ ಸಕಲಾಧಿಕ ಪ್ರೇಮವನ್ನಿಟ್ಟು ಆತನನ್ನೇ ಆಪದ್ಬಂಧುವೆಂದು ನಿಶ್ಚಯಿಸುವುದು, ಆತನಿಗೆ ಸರ್ವಸಮರ್ಪಣೆ ಮಾಡುವುದು ಇವೇ ಮೊದಲಾದ ಮೂವತ್ತು ಲಕ್ಷಣಗಳಿಂದ ಕೂಡಿದ ಧರ್ಮವೇ ಅಖಿಲ ಮಾನವ ಧರ್ಮವು. ಎಲ್ಲರ ಶುದ್ಧಾತ್ಮನಾದ ಪರಮಾತ್ಮನು ಯಾವುದರಿಂದ ಸಂತುಷ್ಟನಾಗಿ ಎಲ್ಲಾ ಅನನ್ಯಭಕ್ತರಿಗೆ ಮುಕ್ತಿಯನ್ನು ದಯಪಾಲಿಸುವನೋ ಆತನ ಪ್ರೀತಿಯ ಮಾನವಧರ್ಮ ವಿದು. ಮಂಗಲಮಯ ಪರಮಾತ್ಮನು ಈ ಧರ್ಮದ ಆಚರಣೆಯಿಂದ ಬಹು ಸಂತುಷ್ಟನಾಗುವನು. ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿ ಎಂಬ ನಾಲ್ಕು ಆಶ್ರಮದವರಿಗೆ ನಾಲ್ಕು ಪ್ರಕಾರದ ಬ್ರಹ್ಮಚರ್ಯವು ಶಾಸ್ತ್ರದಿಂದ ವಿಧಿಸಲ್ಪಟ್ಟಿರುವುದು. ಅಖಿಲ ಸ್ತ್ರೀಯರಲ್ಲಿ ಮಾತೃಭಾವ ವನ್ನಿಡುವುದು ಬ್ರಹ್ಮಚರ್ಯಾಶ್ರಮದ ಬ್ರಹ್ಮಚರ್ಯ. ತನ್ನ ಅರ್ಧಾಂಗಿ ಯಾದ ವಿವಾಹಿತ ಸ್ತ್ರೀಯಳ ಹೊರತಾಗಿ ಅನ್ಯಸ್ತ್ರೀಯರಲ್ಲಿ ಮಾತೃದೃಷ್ಟಿ ಯನ್ನಿಟ್ಟು ಧರ್ಮಪತ್ನಿಯಲ್ಲಿ ಸತ್ಸಂತತಿಯ ಪ್ರಾಪ್ತಿಗಾಗಿ ವಿಹಿತ ದಿನಗಳಲ್ಲಿ ರತನಾಗುವುದು ಗೃಹಸ್ಥಾಶ್ರಮದ ಬ್ರಹ್ಮಚರ್ಯ. ಕಾಯವಾಙ್ಮನಸ್ಸಿ ನಿಂದ ಸರ್ವತ್ರ ನಿಷ್ಕಾಮನಾಗುವುದು ವಾನಪ್ರಸ್ಥಾಶ್ರಮದ ಬ್ರಹ್ಮಚರ್ಯ ಮತ್ತು ಎಲ್ಲೆಡೆಯಲ್ಲಿರುವ ನಾಮರೂಪರಹಿತವಾದ ನಿಷ್ಪ್ರಪಂಚ. ಆನಂದ ಘನಸ್ವರೂಪವನ್ನು ಉಂಡು ಕಂಡು ಅದ್ವಿತೀಯ ಸ್ಥಿತಿಯಲ್ಲಿರುವುದೇ ಸನ್ಯಾಸಾಶ್ರಮದ ಬ್ರಹ್ಮಚರ್ಯ.

## ಹಿಂದು ಶಬ್ದದ ವ್ಯಾಖ್ಯೆಗಳು

ಅನೇಕರು 'ಹಿಂದು' ಶಬ್ದದ ವ್ಯಾಖ್ಯೆಯನ್ನು ಮಾಡಿರುವರು. ಸಿಕ್ಕಿದಷ್ಟನ್ನು ಶೇಖರಿಸಿ ಮನನಮಾಡೋಣ.

ಓಂಕಾರಮೂಲಮಂತ್ರಾಢ್ಯಃ ಪುನರ್ಜನ್ಮದೃಢಾಶಯಃ ।
ಗೋಭಕ್ತೋ ಭಾರತಗುರುರ್ಹಿಂದುರ್ಹಿಂಸನದೂಷಕಃ ॥
(ಮಾಧವ ದಿಗ್ವಿಜಯ)

ಎಲ್ಲದಕ್ಕೂ ಎಲ್ಲ ಮಂತ್ರಗಳಿಗೂ ಪ್ರಣವವೇ ಮೂಲವೆಂದು ನಂಬುವವನು, ಸಂಸಾರವಾಸನೆಯಿರುವವರೆಗೆ ಪುನರ್ಜನ್ಮವನ್ನು ಒಪ್ಪುವವನು, ಗೋಭಕ್ತನು, ಭಾರತಧರ್ಮದ ಸಿದ್ಧಾಂತಗಳನ್ನು ಗುರುಸ್ಥಾನದಲ್ಲಿಟ್ಟು ನಡೆದುಕೊಳ್ಳತಕ್ಕವನು, ಹಿಂಸೆಯನ್ನು ನಿಂದ್ಯವಾಗಿ ಕಾಣುವವನು "ಹಿಂದು" ವೆನ್ನಿಸಿಕೊಳ್ಳುವನು.

ಹಿನಸ್ತಿ ತಪಸಾ ಪಾಪಾನ್ ದೈಹಿಕಾನ್ ದುಷ್ಟಮಾನಸಾನ್ ।
ಹೇತಿಭಿಃ ಶತ್ರುವರ್ಗಂ ಚ ಸ ಹಿಂದುರಭಿಧೀಯತೇ ॥
(ಪಾರಿಜಾತ ಹರಣ ನಾಟಕಂ)

ಯಾವಾತನು ತಪಸ್ಸಿನಿಂದ ತನು-ಮನಗಳ ದೋಷಗಳನ್ನು ನಷ್ಟಮಾಡುವನೋ ಮತ್ತು ತೀಕ್ಷ್ಣ ಶಸ್ತ್ರಗಳಿಂದ ದುಷ್ಟ ಶತ್ರುಗಳನ್ನು ನಾಶಿಸುವನೋ ಆತನು ಹಿಂದುವೆಂದು ಕರೆಯಿಸಿಕೊಳ್ಳುವನು. "ಶ್ರುತಿಸ್ಮೃತ್ಯಾದಿ ಶಾಸ್ತ್ರೇಷು ಪ್ರಾಮಾಣ್ಯ ಬುದ್ಧಿಮವಲಂಬ್ಯ ಶ್ರುತ್ಯಾದಿ ಪ್ರೋಕ್ತೇ ಧರ್ಮೇ ವಿಶ್ವಾಸಂ ನಿಷ್ಠಾಂಚಯಃ ಕರೋತಿ ಸ ಏವ ವಾಸ್ತವ ಹಿಂದುಪದವಾಚ್ಯಃ ॥" ಶ್ರುತಿಸ್ಮೃತ್ಯಾದಿ ಶಾಸ್ತ್ರಗಳಲ್ಲಿ ಪ್ರಾಮಾಣ್ಯ ಬುದ್ಧಿಯನ್ನು ವಹಿಸಿ ಇವುಗಳಿಂದ ಸಾರಲ್ಪಟ್ಟ ಧರ್ಮದಲ್ಲಿ ತುಂಬಾ ವಿಶ್ವಾಸವನ್ನಿಟ್ಟು ಯಾವಾತನು ಅಚಲನಿಷ್ಠೆಯಿಂದ ವರ್ತಿಸುವನೋ ಅವನೇ ನಿಜವಾಗಿ ಹಿಂದುವೆಂದು ಹೇಳಿಸಿಕೊಳ್ಳಲು ಯೋಗ್ಯನು ಎಂದು ಕೆಲ ಪಂಡಿತರ ಅಭಿಪ್ರಾಯವು.

"ಶ್ರುತ್ಯಾದಿ ಪ್ರೋಕ್ತಾನಿ ಸರ್ವಾಣಿ ದೂಷಣಾನಿ ಹಿನಸ್ತೀತಿ ಹಿಂದುಃ ॥" ಶ್ರುತ್ಯಾದಿಗಳಿಂದ ದೂಷಿಸಲ್ಪಟ್ಟ ದೋಷಗಳನ್ನು ಯಾವಾತನು ನಾಶಗೊಳಿಸುವನೋ ಆತನು ಹಿಂದುವೆನ್ನಿಸಿಕೊಳ್ಳುವನು.

ಪ್ರಾಮಾಣ್ಯ ಬುದ್ಧಿರ್ವೇದೇಷು ನಿಯಮಾನಾಮನೇಕತಾ ।
ಉಪಾಸ್ಯಾನಾಮನಿಯಮೋ ಹಿಂದುಧರ್ಮಸ್ಯ ಲಕ್ಷಣಂ ॥
(ಲೋ। ಮಾ। ತಿಲಕ)

ವೇದಗಳಲ್ಲಿ ಪ್ರಾಮಾಣ್ಯ ಬುದ್ಧಿಯೂ, ಅನೇಕ ನಿಯಮಗಳ ಪ
ಪಾಲನೆಯೂ, ಅನೇಕ ಉಪಾಸ್ಯದೇವತೆಗಳ ಆರಾಧನೆಯೂ ಹಿಂದ
ಧರ್ಮದ ಲಕ್ಷಣ.

ಆಸಿಂಧೋಃ ಸಿಂಧುಪರ್ಯಂತಾ ಯಸ್ಯ ಭಾರತಭೂಮಿಕಾ ।
ಪಿತೃಭೂಃ ಪುಣ್ಯಭೂಶ್ಚೈವ ಸ ವೈ ಹಿಂದುರಿತಿ ಸ್ಮೃತಃ ॥ (ಸಾವರ್ಕ

ಸಿಂಧು ನದಿಯಿಂದ ಹಿಡಿದು ಕನ್ಯಾಕುಮಾರೀ ಪರ್ಯಂತವಾಗಿ ವಿಸ್ತಾ
ವಾಗಿದ್ದ ಈ ಭಾರತಭೂಮಿಯು ಯಾವಾತನ ಪಿತೃಭೂಮಿ ಮತ್ತು ತೀರ್ಥ
ಕ್ಷೇತ್ರಗಳ ಪುಣ್ಯಭೂಮಿಯಾಗಿರುವುದೋ ಆತನು ಹಿಂದುವು.

ಯೋ ವರ್ಣಾಶ್ರಮನಿಷ್ಠಾವಾನ್ ಗೋಭಕ್ತಃ ಶ್ರುತಿಮಾತೃಕಃ ।
ಮೂರ್ತಿಂ ಚ ನಾವಜಾನಾತಿ ಸರ್ವಧರ್ಮಸಮಾದರಃ ॥
ಉತ್ಪ್ರೇಕ್ಷತೇ ಪುನರ್ಜನ್ಮ ತಸ್ಮಾನ್ಮೋಕ್ಷಣಮೀಹತೇ ।
ಭೂತಾನುಕೂಲ್ಯಂ ಭಜತೇ ಸ ವೈ ಹಿಂದುರಿತಿ ಸ್ಮೃತಃ ॥
(ವಿನೋಬಾಭಾ

ಯಾವಾತನು ವರ್ಣಾಶ್ರಮಗಳಲ್ಲಿ ನಿಷ್ಠೆಯನ್ನು ವಹಿಸುವನೋ,
ಯಾವಾತನು ಗೋಭಕ್ತನಾಗಿರುವನೋ, ಶ್ರುತಿಗಳನ್ನು ತಾಯಿಯಂ
ಪರಮಪೂಜ್ಯವಾಗಿ ಭಾವಿಸುವನೋ, ಯಾವಾತನು ದೇವರ ಮೂರ್ತಿಗಳ
ಆದರವಿಡುವನೋ (ಶ್ರುತಿ ವಿಚಾರಗಳನ್ನು ಅಲ್ಲಗಳೆಯನೋ), ಯಾವಾತ
ಎಲ್ಲ ಧರ್ಮಗಳಲ್ಲಿ ಗೌರವವನ್ನಿಡುವನೋ, ಯಾವಾತನಿಗೆ ಪುನರ್ಜನ್ಮದ
ವಿಶ್ವಾಸವಿದ್ದು ಅದರಿಂದ ಬಿಡುಗಡೆ ಹೊಂದಬೇಕೆಂದು ಇಚ್ಛೆಯಿರುವುದೋ,
ಯಾವಾತನು ಶಾಸ್ತ್ರೀಯವಾಗಿ ಎಲ್ಲರಿಗೂ ಅನುಕೂಲವಾಗುವಂ
ವರ್ತಿಸುವನೋ ಅವನೇ ಹಿಂದುವು.

ಹಿಂಸಯಾ ದೂಯತೇ ಯಶ್ಚ ಸದಾಚರಣತತ್ಪರಃ ।
ವೇದಗೋ ಪ್ರತಿಮಾಸೇವೀ ಸ ಹಿಂದು ಮುಖಶಬ್ದಭಾಕ್ ॥
(ವೃದ್ಧಸ್ಮೃತಿ

ಯಾವಾತನು ಹಿಂಸೆಯನ್ನು ಕಂಡು ಮರುಗುವನೋ, ಯಾವಾತನು
ಸದಾಚಾರಸಂಪನ್ನನಾಗಿರುವನೋ, ಇದಲ್ಲದೆ ವೇದ, ಗೋವು ಮತ್ತು
ಮೂರ್ತಿಗಳ ಆರಾಧಕನಾಗಿ ಯಾವಾತನು ಇರುವನೋ ಅವನೇ ಹಿಂದು

ಗೋಷು ಭಕ್ತಿರ್ಭವೇದ್ಯಸ್ಯ ಪ್ರಣವೇ ಚ ದೃಢಾಮತಿಃ ।
ಪುನರ್ಜನ್ಮನಿ ವಿಶ್ವಾಸಃ ಸ ವೈ ಹಿಂದುರಿತಿ ಸ್ಮೃತಃ ॥

ಜಗದುತ್ಪತ್ತಿ ಸ್ಥಿತಿಲಯಗಳಿಗೂ, ಎಲ್ಲ ಮಂತ್ರಗಳಿಗೂ ಅಂತೆಯೇ ಎಲ್ಲ ದೇವತೆಗಳಿಗೂ ಒಂದು ಪ್ರಣವವೇ ಆಧಾರವೆಂಬ ವಿಶ್ವಾಸವು ಯಾವಾತನಿಗೆ ಇರುವುದೋ, ಗೋವಿನಲ್ಲಿಯೂ ಯಾವಾತನಿಗೆ ಶ್ರದ್ಧಾಭಕ್ತಿಯಿರುವುದೋ ಪುನರ್ಜನ್ಮವನ್ನು ಯಾವಾತನು ನಂಬಿ ಅದರಿಂದ ಮುಕ್ತನಾಗಿ ಪರಮಾತ್ಮಸಾಯುಜ್ಯ ಹೊಂದಲು ಕೋರುವನೋ ಆತನೇ ಹಿಂದುವು. **"ಹೀನಂ ದೂಷಯತೀತಿ ಹಿಂದುಃ।"** (ಶಬ್ದಕಲ್ಪದ್ರುಮಕೋಶ) ಹೀನವಾದುದನ್ನು ದೂಷಿಸುವವನೇ ಹಿಂದುವು. **"ಹಿಂದುರ್ಹಿಂದೂಶ್ಚ ಪುಂಸಿದ್ವೌ ದುಷ್ಟಾನಾಂ ಚ ವಿಧರ್ಷಣೇ। ರೂಪಶಾಲಿನಿ ದೈತ್ಯಾರೌ"** (ಅದ್ಭುತಕೋಶ).

ಹಿಂದು ಮತ್ತು ಹಿಂದೂ ಈ ಎರಡು ಶಬ್ದಗಳೂ ಸಹ ದುಷ್ಟರ ನಾಶ ಮಾಡುವ ಅರ್ಥದಲ್ಲಿ ಪ್ರಸಿದ್ಧವಾಗಿವೆ. ಸುಂದರ ಮತ್ತು ದೈತ್ಯರ ಶತ್ರು ಈ ಎರಡು ಅರ್ಥಗಳಲ್ಲಿಯೂ ಇವುಗಳನ್ನು ಪ್ರಯೋಗಿಸುವುದುಂಟು. **'ಹಿಂದುರ್ಹಿ ನಾರಾಯಣಾದಿ ದೇವತಾಭಕ್ತಃ।'** (ಹೇಮಂತಕೋಶ) ಹಿಂದು ಎಂದರೆ ನಾರಾಯಣಾದಿ ದೇವತೆಗಳ ಉಪಾಸನೆಯನ್ನು ಮಾಡುವವನು.

## ಹಿಂದುವಿನ ಸ್ವಾಭಾವಿಕ ಗುಣಗಳು

ನಿಷ್ಕಪಟತನ ಮತ್ತು ಪ್ರಾಮಾಣಿಕತೆ ಹಿಂದು ಜನರನ್ನು ಗುರುತಿಸುವ ಹೆಗ್ಗುರುತುಗಳಾಗಿವೆ. ಹಿಂದು ಎಂದೆಂದಿಗೂ ಅನೀತಿಯ ನಡೆ–ನುಡಿಗಳನ್ನು ಇಟ್ಟುಕೊಳ್ಳಕೂಡದು. ಹಿಂದು ಜನರ ಜೀವನವು ಅಕೃತ್ರಿಮವಿರುವುದು. ಹಿಂದುವು ಧಾರ್ಮಿಕ, ಪ್ರಸನ್ನ, ನ್ಯಾಯಪ್ರಿಯ, ಸತ್ಯಸಂಧ, ಕೃತಜ್ಞ ದೇವರ ಭಕ್ತ ಮತ್ತು ಗುರುಭಕ್ತನಾಗಿರುವನು. ಪಾತಿವ್ರತ್ಯ ಮತ್ತು ಏಕಪತ್ನೀ ವ್ರತಗಳು ಹಿಂದುವಿನ ಶೀಲವನ್ನು ಬೆಳಗುವುವು. ವರ್ಣಾಶ್ರಮಗಳು ಹಿಂದೂ ಸಂಸ್ಕೃತಿಯನ್ನು ಗುರುತಿಸುವುವು. ಜನ್ಮಪ್ರಾಪ್ತ ಜಾತಿಯ ಶುದ್ಧಾಚಾರಗಳನ್ನು ಮನಮುಟ್ಟಿ ಸಂತೋಷದಿಂದ ತನ್ನ ಅನುಷ್ಠಾನದಲ್ಲಿ ಇಟ್ಟುಕೊಳ್ಳುವವನು

ಹಿಂದುವು. ವಿಶ್ವಕ್ಕೆ ಹಿಂದುಸ್ಥಾನದ ಮೇಲಿರುವ ಪ್ರೇಮವು ... ಅಲೌಕಿಕ ಗುಣಗಳ ಬಗ್ಗೆ ಮತ್ತು ಅಸಾಮಾನ್ಯ ನೀತಿ-ನ್ಯಾಯದ ... ಇವೆ. ಹಿಂದುಸ್ಥಾನವನ್ನು ವಿಶ್ವವೆಲ್ಲ ಆದರಿಸುವುದು ಅದರ ಬೌದ್ಧಿ... ನೈತಿಕ ಮತ್ತು ಆಧ್ಯಾತ್ಮಿಕ ಸಂಪತ್ತಿಯ ಮೂಲಕವೇ ಸರಿ. ಅಮೃ... ಪಾನದಿಂದ ಆರೋಗ್ಯದ ಎಲ್ಲ ಲಕ್ಷಣಗಳೂ ಒಮ್ಮೆಲೆ ಅನಾಯಾಸ... ಮೈಗೂಡುವಂತೆ ಆಧ್ಯಾತ್ಮ ಜ್ಞಾನದಿಂದ ಎಲ್ಲಾ ಆದರ್ಶ ಸದ್ಗುಣ... ಮೈಗೊಳ್ಳುವುವು. ಈ ಆತ್ಮನಿಷ್ಠೆಯು ಹಿಂದು ಸಂಸ್ಕೃತಿಯ ತಾಯಿಬೇ... ಗಿರುವುದು. ಯಾವ ಹಿಂದುವೂ ಇದನ್ನು ಮರೆಯಲಾರನು. ವೇದೋ... ನಿಷತ್ತಿನ ಮೇಲೆಯೇ ಈ ಹಿಂದು ಸಂಸ್ಕೃತಿಯು ನೆಲೆನಿಂತಿರುವುದೆಂಬುದ... ಹಿಂದುವು ಮನಗಂಡಿರುವನು. ಸದ್ಬುದ್ಧಿ, ಸದಾಚರಣ, ವಿಶ್ವಬಾಂಧವ... ಆಧ್ಯಾತ್ಮನಿಷ್ಠೆ, ಸಮತ್ವ, ವಿಶ್ವಪ್ರೇಮ, ಹಿತ ಮತ್ತು ಸತ್ಯವಾದ ಪ್ರೇಮ... ನುಡಿ, ವಿಚಾರಶೀಲತೆ ಇವುಗಳಲ್ಲಿ ಹಿಂದೂ ಜನರು ಮಾನವಜಾ... ಯಲ್ಲಿಯೇ ಪ್ರಥಮಸ್ಥಾನವನ್ನು ಸಂಪಾದಿಸಿರುವರು ಎಂಬುದನ್ನು ಯಾ... ಹಿಂದುವೂ ಸಹ ಮರೆಯಲಾರನು. ತನ್ನ ಸತ್ಕೀರ್ತಿಗೆ ಕಲಂಕ ತಾಗು... ಆಚರಣವನ್ನು ಪ್ರಾಣಾಂತಿಕ ಸಮಯದಲ್ಲಿಯೂ ಹಿಂದುವು ಮಾಡನು... ಸತ್ಕೀರ್ತಿಯ ಮೇಲೆ ಪ್ರಾಣಕ್ಕಿಂತಲೂ ಅಧಿಕ ಪ್ರೇಮವಿಡುವುದೂ ಸ... ಹಿಂದುವಿನ ಒಂದು ಲಕ್ಷಣವಾಗಿರುವುದು.

> ಹಿಂದುರ್ದುಷ್ಟೋ ನ ಭವತಿ ನಾನಾರ್ಯೋ ನ ವಿದೂಷಕಃ ।
> ಸದ್ಧರ್ಮಪಾಲಕೋ ವಿದ್ವಾನ್ ಶ್ರೌತಧರ್ಮಪರಾಯಣಃ ॥ (ರಾಮಕೋ...

ಹಿಂದುವು ಎಂದೆಂದಿಗೂ ದುಷ್ಟದುರ್ಜನನಾಗನು. ಹೀನನಾಗನು... ಸಜ್ಜನರನ್ನು ನಿಂದಿಸನು. ಅವನು ಸದೈವ ಸದ್ಧರ್ಮಪಾಲಕನು. ಅವ... ಸಂಪಾದಿಸಿದ ಸದ್ವಿವೇಕವುಳ್ಳ ವಿದ್ವಾಂಸನು. ಅವನು ವೇದ ವಿಧಿ... ತನ್ನ ಧರ್ಮಕರ್ಮಗಳಲ್ಲಿ ನಿತ್ಯನಿರತನು. ಹಿಂದು ಜನರು ಪರಮ... ಸಹಿಷ್ಣುಗಳು, ಆಶ್ರಿತಪಾಲಕರು, ಧರ್ಮವಿರುದ್ಧ ಧಾಳಿ ಮಾಡಿದ... ಧರ್ಮವನ್ನು ರಕ್ಷಿಸುವುದರಲ್ಲಿ ಪ್ರಾಣಪಣದಿಂದ ಕಾದಾಡುವರು. ಕಷ್ಟ... ದಲ್ಲಿ ಬಿದ್ದ ಅಸಹಾಯಕನಿಗೆ ಆದಷ್ಟು ಸಹಾಯ ಮಾಡುವುದರಲ್ಲಿ ಒಳ್ಳೆ... ಪ್ರೀತಿಯುಳ್ಳವರು.

"ಹಿನಸ್ತಿ ದುರ್ವೃತ್ತೀಃ ಇತಿ ಹಿಂದುಃ ।" ತನ್ನ ಅಥವಾ ಪರರ ದುರ್ವೃತ್ತಿಗಳನ್ನು ಸಮೂಲ ನಷ್ಟಪಡಿಸುವವನು ಹಿಂದುವು. ಸದ್ವೃತ್ತಿಯ ಬೆಳೆಯನ್ನು ಬೆಳೆಯಿಸಿ ದುರ್ವೃತ್ತಿಯ ಕೊಳೆಯನ್ನೆಲ್ಲ ಕಳೆದುಹಾಕು ವವನೇ ಹಿಂದು ಎಂಬ ಈ ಬಿರುದುವಾಕ್ಯವನ್ನು ಯಾವ ಹಿಂದುವೂ ಮರೆಯಲಾರನು. ಹಿಂದು ಜನರು ಅಖಿಲ ಮಾನವ ಜಾತಿಯ ಅಂತಿಮ ಹಿತವನ್ನು ಕೋರಿ ತದನುಕೂಲ ಆಚರಣವನ್ನು ಇಟ್ಟುಕೊಂಡು ನಡೆಯ ತಕ್ಕವರು. ಎಲ್ಲರ ಬಗ್ಗೆಯೂ ದಯಾಳುಗಳಾದ ವಿಶ್ವಬಂಧುಗಳು. ವಿಶ್ವದಲ್ಲಿ ಯಾರ ಸಂಗಡವೂ ವೈರವೆಂಬುದು ಅವರಿಗಿಲ್ಲ. ಪರಸ್ಪರ ವೈರವೂ ಇಲ್ಲ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂಬುವವರು ಪರಮಾತ್ಮನ ವಿರಾಟ್ ತನುವಿನ ಕ್ರಮವಾಗಿ ಮುಖ, ಬಾಹು, ತೊಡೆ ಮತ್ತು ಪಾದಗಳೆಂಬುದನ್ನು ನಂಬಿ ನಡೆಯುವವರು. ಶೀಲವೆಂಬುದು ಹಿಂದು ರಕ್ತಗತ ಸಂಸ್ಕಾರವೇ ಸರಿ. ಹಿಂದು ಸಭ್ಯತೆ ವಿಶ್ವದಲ್ಲಿಯೇ ಹೆಸರುಗೊಂಡಿದೆ. ಅದನ್ನು ಪ್ರತಿ ಹಿಂದುವು ಅಳಿಯಗೊಡದೆ ಉಳಿಸಿ ಕೊಳ್ಳಬೇಕಾದದ್ದು.



# ಆದರ್ಶ ರಾಜ್ಯಪದ್ಧತಿಯ ರಾಮರಾಜ್ಯ

## ಭಾರತದ ರಾಮರಾಜ್ಯವಾಗುವ ಕೋರಿಕೆ

ಈವರೆವಿಗೂ ಹಿಂದುಸ್ಥಾನವು ಪರರ ಆಳಿಕೆಯಲ್ಲಿ ಇದ್ದುದರಿಂದ ಈ ದಬ್ಬಾಳಿಕೆಗೆ ಈಡಾಗಿ ಪಾರತಂತ್ರ್ಯದ ಅಸಹ್ಯಜೀವನದಲ್ಲಿ ಅಂ "ಜೀವನ್ ಭದ್ರಾಣಿ ಪಶ್ಯತಿ" ಈ ತತ್ವವನ್ನು ಅನುಸರಿಸಿ ಭವಿಷ್ಯತ್ಕಾ ಸುಖಸ್ವಪ್ನವನ್ನು ಹೇಗೆ ಹೇಗೋ ಉಳಿಸಿಕೊಂಡಿತು. ಪರಮಾತ್ಮನ ಕೃ ಯಿಂದ ಅದರ ಸುಖಸ್ವಪ್ನವೇ ಜಾಗ್ರತ್ತಾಯಿತು. ಇಂದಿಗೆ ಅದು ಸ್ವತಂತ್ರ ಯಿಂದ ಮೆರೆಯುತ್ತಿದೆ. ರಾಮರಾಜ್ಯದ ದಿವ್ಯಮಂಗಲಮಯ ಆದ ವನ್ನೇ ಮುಂದಿಟ್ಟು ಅದಕ್ಕೆ ಅನುರೂಪವಾದ ಸ್ವರಾಜ್ಯವನ್ನು ರೂಪುಗೊ ಸಲು ಎಲ್ಲ ಜನತೆಯೂ ಹುರುಪಿನಿಂದ ಹವಣಿಸುತ್ತಿದೆ.

ಪ್ರಹೃಷ್ಟ ಮುದಿತೋ ಲೋಕಸ್ತುಷ್ಟಃ ಪುಷ್ಟಃ ಸುಧಾರ್ಮಿಕಃ ।
ನಿರಾಮಯೋಹ್ಯರೋಗಶ್ಚ ದುರ್ಭಿಕ್ಷ ಭಯವರ್ಜಿತಃ ।
ನ ಪುತ್ರ ಮರಣಂ ಕೇಚಿದ್ದ್ರಕ್ಷ್ಯಂತಿ ಪುರುಷಾಃ ಕ್ವಚಿತ್ ।
ನಾರ್ಯಶ್ಚಾ ವಿಧವಾ ನಿತ್ಯಂ ಭವಿಷ್ಯಂತಿ ಪತಿವ್ರತಾಃ ।
ನ ಚಾಗ್ನಿಜಂ ಭಯಂ ಕಿಂಚಿನ್ನಾಪ್ಸು ಮಜ್ಜಂತಿ ಜಂತವಃ ।
ನ ವಾತಜಂ ಭಯಂ ಕಿಂಚಿನ್ನಾಪಿ ಜ್ವರಕೃತಂ ತಥಾ ।
ನಗರಾಣಿ ಚ ರಾಷ್ಟ್ರಾಣಿ ಧನಧಾನ್ಯ ಯುತಾನಿ ಚ ॥

(ವಾಲ್ಮೀಕಿ ರಾಮಾಯಣ

ಈ ಶ್ಲೋಕಗಳನ್ನು ಧ್ಯಾನಿಸುತ್ತ ಅದರಂತೆ ಈಗಲೂ ಆಗಬೇಕೆಂ ಕೋರುತ್ತಿದೆ. ಈ ಶ್ಲೋಕಗಳ ಭಾವವು ನಮ್ಮ ಹೃದಯದಲ್ಲಿ ಒಡನೂ ನೆಲೆನಿಲ್ಲುವುದಕ್ಕಾಗಿ ಅದರ ಅರ್ಥದ ಮನನ ಮಾಡೋಣ. ಆಗೆ ರಾ ರಾಜ್ಯದಲ್ಲಿ ಯಾವ ಕಷ್ಟವೂ ಇರಲಿಲ್ಲ. ಎಲ್ಲ ಪ್ರಜಾಜನರೂ ಸುಖಸಂತೋ ಗಳಿಂದ ಹೃಷ್ಟರಾಗಿದ್ದರು. ಸಂತುಷ್ಟರಾಗಿದ್ದರು. ಒಳ್ಳೇ ಪುಷ್ಟರಾಗಿದ್ದ ಧರ್ಮಿಷ್ಠರಾಗಿದ್ದರು. ಎಲ್ಲರೂ ನೀರೋಗಿಗಳೇ. ರೋಗವೆಂಬು ಆ ಕಾಲದಲ್ಲಿರಲಿಲ್ಲ. ದುರ್ಭಿಕ್ಷ ಕೇಳಬಾರದು. ಅದು ಬಂದೀತೆ ಭೀತಿಯೂ ಸಹ ಆಗಿನ ಜನರಲ್ಲಿರಲಿಲ್ಲ. ಪುತ್ರಶೋಕದಿಂದ ಬೆ

ಒಂದಾನೊಂದು ಹೃದಯವೂ ಉದಾಹರಣೆಗಾಗಿಯೂ ಆಗ ಕಂಡುಬರು ತ್ತಿರಲಿಲ್ಲ. ಸುಮಂಗಲಿಯರ ಸೌಭಾಗ್ಯವಳಿದು ಅವರು ಅಮಂಗಲೆ ಯರಾದದ್ದೇ ಇಲ್ಲ. ಆಗ್ಯೆ ಎಲ್ಲ ಸತಿಯರು ಪತಿಯನ್ನು ಛಾಯೆಯಂತೆ ಅನುಸರಿಸಿ ಪತಿವ್ರತೆ ಎಂಬ ಜನಸ್ತುತಿಗೂ, ಪರಮಾತ್ಮನ ಮೆಚ್ಚಿಗೆಗೂ ಪಾತ್ರರಾಗುತ್ತಿದ್ದರು. "ಬೆಂಕಿ ಬಿದ್ದು ಮನೆ ಸುಟ್ಟುಹೋಯಿತು" ಎಂಬ ಒಂದಾನೊಂದು ವಾರ್ತೆಯನ್ನೂ ಆಗ ಯಾರೂ ಕೇಳಿದ್ದಿಲ್ಲ. ನೀರಿನಲ್ಲಿ ಮುಳುಗಿ ಸತ್ತುಹೋದ ಉದಾಹರಣೆಯೇ ಇರಲಿಲ್ಲ. ಎಂತಹ ಮಳೆಗಾಲ ದಲ್ಲಿಯೂ ನೆರೆನೀರಿನಿಂದ ಅಪಾಯವಾಯಿತೆಂಬ ವಾರ್ತೆ ಗೊತ್ತೇ ಇಲ್ಲ. ಇಡೀ ರಾಜ್ಯವಲ್ಲಿ ಎಲ್ಲಿಯೂ ಒಂದು ಸಾರಿಯೂ ಸುಳಿಗಾಳಿ ಎಂಬುದು ಇದ್ದಿರಲಿಲ್ಲ. ಜ್ವರದಿಂದ ಮಲಗಿ ದುಃಖದಿಂದ ನರಳುವ ದೃಶ್ಯವನ್ನು ಕಂಡವರು ಯಾರೂ ಇರಲಿಲ್ಲ. ಅಪರಿಚಿತ ಸ್ಥಳಕ್ಕೆ ಹೋಗಿ ಅಲ್ಲಿ ಹಸಿವೆ ಆದರೆ ಏನು ಮಾಡೋಣ ಎಂಬ ಚಿಂತೆ ಆಗ್ಗೆ ಯಾರಿಗೂ ಆಗುತ್ತಿರಲಿಲ್ಲ. ಎಲ್ಲ ಕಡೆಗೂ ಬಂದವರ ಆತಿಥ್ಯವು ಚೆನ್ನಾಗಿ ಆಗುತ್ತಿತ್ತು. ದ್ರವ್ಯದ ಚೀಲವನ್ನು ತಲೆಯಡಿಯಿಟ್ಟು ಸುಖವಾಗಿ ಯಾವ ಭಯವೂ ಇಲ್ಲದೆ ಎಲ್ಲೆಲ್ಲಿಯೂ ಮಲಗಿಕೊಳ್ಳುತ್ತಿದ್ದರು. ಕಳ್ಳ ಮತ್ತು ಕಳವು ಎಂಬ ಶಬ್ದಗಳನ್ನು ಆಗ್ಗೆ ಕೇಳಿಯೇ ಗೊತ್ತಿದ್ದಿಲ್ಲ. ಎಲ್ಲ ಮನೆ–ಮಾರುಗಳೂ, ಪುರ–ಪಟ್ಟಣಗಳೂ, ಧನ–ಧಾನ್ಯಾದಿ ಸಮೃದಿಯಿಂದ ಒಳ್ಳೇ ಶೋಭಾಯ ಮಾನವಾಗಿದ್ದವು.

## ಧರ್ಮಮೂರ್ತಿ ಶ್ರೀರಾಮನು

ಆರ್ಯ ಅಥವಾ ಹಿಂದೂ ಸಂಸ್ಕೃತಿಯ ಆದರ್ಶ ವ್ಯಕ್ತಿಯು ಶ್ರೀರಾಮನು. "ರಾಮೋ ವಿಗ್ರಹವಾನ್ ಧರ್ಮಃ" ಧರ್ಮದ ಮೂರ್ತಿಯೇ ಶ್ರೀರಾಮನು. "ಶ್ರೀರಾಮವದ್ವರ್ತಿತವ್ಯಂ ಸ ಧರ್ಮಃ" "ರಾವಣವದ್ವರ್ತಿತವ್ಯಂ ಸೋಽಧರ್ಮಃ" ಶ್ರೀರಾಮ ನಂತೆ ವರ್ತಿಸುವುದು ಧರ್ಮವೆಂತಲೂ, ರಾವಣನಂತೆ ವರ್ತಿಸುವುದು ಅಧರ್ಮವೆಂತಲೂ ಬಲ್ಲವರೆಲ್ಲಾ ಧರ್ಮ ಮತ್ತು ಅಧರ್ಮಗಳ ವ್ಯಾಖ್ಯೆಯನ್ನು ವಿಶ್ವದ ಮಾರ್ಗದರ್ಶನಕ್ಕಾಗಿಯೇ ಮಾಡಿರುವರು.

"ರಾಮವದ್ವರ್ತಿತವ್ಯಂ" "ರಾವಣವನ್ನ ವರ್ತಿತವ್ಯಂ" ಶ್ರೀರಾಮನಂತೆ ನಿರ್ದೋಷವಾಗಿ ವರ್ತಿಸಬೇಕು. ರಾವಣನಂತೆ ಸದೋಷ ವಾಗಿ ವರ್ತಿಸಕೂಡದು. ಶ್ರೀರಾಮಚಂದ್ರನು ಮರ್ಯಾದಾ ಪುರುಷೋತ್ತಮನು. ಧರ್ಮವನ್ನು ಬಿಟ್ಟು ಒಂದು ಅಣುಪ್ರಮಾಣವಾದರೂ ಅಡ್ಡದಾರಿಗೆ ಹೋದವನಲ್ಲವೆಂದು ಅವನ ವಿಶ್ವವಿಖ್ಯಾತ ಕೀರ್ತಿಯಿಂ ಪರಮಾತ್ಮನಾದರೂ ಶ್ರೀರಾಮನು ಧರ್ಮಪಾಲನೆಗೆ ಬದ್ಧಕಂಕಣನಾ ನಡೆದುಕೊಳ್ಳುವುದನ್ನು ನೋಡಿದರೆ ಇದು ವಿಶ್ವಬೋಧನೆಗಾಗಿಯೇ ಎಂ ಗ್ರಹಿಸಬೇಕಾಗಿ ಬರುವುದು. ಅವನ ಚರಿತ್ರದಲ್ಲಿ ಅಡಗಿರುವ ಈ ಹೇ ವನ್ನು ನಾವು ತಿಳಿದು ವರ್ತಿಸಿದರೆ ಅವನ ಅನುಗ್ರಹವಾಗಿ ಹಿಂದುಸ್ಥಾನ ರಾಜ್ಯವು ರಾಮರಾಜ್ಯವಾಗುವುದು ನಿಃಸಂದೇಹ. ಅವನ ಧರ್ಮಾಚರಣ ಆದರ್ಶವನ್ನು ಮುಂದಿಟ್ಟು ವರ್ತಿಸಬೇಕೆಂದು ನಿಶ್ಚಯಿಸಿದಾಗ ಅಂತಹ ಪ್ರಸಂಗಗಳನ್ನು ನೋಡಿ ಅವುಗಳ ಮನನಮಾಡುವುದು ಮತ್ತು ಅವುಗಳನ್ನು ಮೈಗೂಡಿಸಿಕೊಳ್ಳುವುದು ನಮ್ಮ ಕರ್ತವ್ಯವಾಗುವುದು. ರಾಮ ಮತ್ತು ರಾಮರಾಜ್ಯದಲ್ಲಿ ಇರುವ ಉನ್ನತ ಗುಣಗಳಿಂದ ಗಾಂಧೀಜಿಯವರು ಆಕರ್ಷಿತರಾದರು. ಮನಸ್ಸಿನಲ್ಲಿ ನೆನಸಿದ ಆದರ್ಶರಾಜ್ಯಕ್ಕೆ ರಾಮರಾಜ್ಯ ವೆಂಬ ಸತ್ಕೀರ್ತಿಯ ಮಂಗಲಮಯವಾದ ಹೆಸರನ್ನಿಟ್ಟರು. ತಾವು ಶ್ರೀರಾಮನ ದಿವ್ಯನಾಮವನ್ನು ಮುಖದಿಂದ ಅವಿಶ್ರಾಂತವಾಗಿ ಹೇ ತೊಡಗಿದರು. ಕೊನೆಯಲ್ಲಿ ಅವರು ಈ ರಾಮರಾಜ್ಯದ ಸುಸಂಘಟನೆ ಗಾಗಿಯೇ ಆತ್ಮಸಮರ್ಪಣಗೈದರು. 'ಹೇ ರಾಮ! ಹೇ ರಾಮ!' ಇವೇ ಅವರ ಅಂತಿಮಶಬ್ದಗಳಾಗಿದ್ದವು. "ಅಂತಕಾಲೇ ಚ ಮಾಮೇವ"

ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇಬರಂ ।
ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥

(ಭಗವದ್ಗೀತಾ ೮-೫)

ಭಗವಂತನ ವಾಕ್ಯವಲ್ಲವೇ ಇದು?

## ಗಾಂಧೀಜಿಯವರ ಅನುಭವ

೧೯೩೦ ನೆಯ ಇಸ್ವಿಯ ಸೆಪ್ಟೆಂಬರ್ ತಿಂಗಳಿನ ೨೯ ನೆಯ ತಾರೀಖಿನ 'ಯಂಗ್ ಇಂಡಿಯಾ' ಎಂಬ ತಮ್ಮ ಪತ್ರಿಕೆಯಲ್ಲಿ ಗಾಂಧೀಜಿಯವರೇ

ತಮ್ಮ ವಿಷಯದಲ್ಲಿ ಹೀಗೆ ಬರೆದಿರುತ್ತಾರೆ: "೧. ನಾನು ವೇದ, ಉಪನಿಷತ್ತು, ಪುರಾಣ ಮುಂತಾದ ಎಲ್ಲ ಹಿಂದು ಧರ್ಮಗ್ರಂಥಗಳನ್ನು ಮನ್ನಿಸುತ್ತೇನೆ. ೨. ನಾನು ವರ್ಣಾಶ್ರಮ ಧರ್ಮವನ್ನು ಸಹ ಮನ್ನಿಸುತ್ತೇನೆ. ೩. ಗೋರಕ್ಷಣೆಯ ಧರ್ಮದ ಮೇಲೂ ನನಗೆ ವಿಶ್ವಾಸವಿದೆ. ೪. ಮೂರ್ತಿಪೂಜೆಯ ಮೇಲೂ ನನಗೆ ಅವಿಶ್ವಾಸವಿಲ್ಲ. ಈ ಎಲ್ಲ ಕಾರಣಗಳಿಂದ ನಾನು ನಿಜವಾಗಿಯೂ ಸನಾತನ ಹಿಂದು ಎಂತಲೇ ಹೇಳುವೆನು." ಈ ಗಾಂಧೀಜಿಯವರನ್ನೇ ಆದರ್ಶವಾಗಿ ಇಟ್ಟುಕೊಂಡು ಅವರ ಮತಾನುಸಾರ ರಾಜ್ಯಪದ್ಧತಿಯನ್ನು ನಡೆಸಲು ಪರಿಪರಿಯಿಂದ ಪ್ರಯತ್ನಿಸುವ ಮುಖಂಡರೆಲ್ಲಾ ಈ ಎಲ್ಲ ವಚನಗಳನ್ನೂ ಹಂಬಲಿಸ ಬೇಕಲ್ಲವೆ? ರಾಮನಾಮದ ಮಹತ್ವ ಎಂಬ ವಿಷಯದ ಮೇಲೆ ನವಜೀವನ ದಲ್ಲಿ ಬರೆಯುವಾಗ ತಮ್ಮ ಅನುಭವವನ್ನು ಸೇರಿಸಿ ಈ ಕೆಳಗಿನ ಪ್ರಕಾರ ವಾಗಿ ಬರೆದಿರುವರು: "ರಾಮನಾಮ ಬಲದಿಂದ ಪಾಷಾಣಗಳೂ ಸಹ ತೇಲಿದುವು. ರಾಮನಾಮ ಬಲದಿಂದ ವಾನರ ಸೇನೆಯು ರಾವಣನ ಸೊಕ್ಕನ್ನು ಮುರಿಯಿತು. ರಾಮನಾಮದ ಆಧಾರದಿಂದ ಹನುಮಂತನು ಪರ್ವತವನ್ನೆತ್ತಿದನು. ಅಲ್ಲದೆ ಸೀತೆಯೂ ಸಹ ಅನೇಕ ವರ್ಷಗಳವರೆಗೆ ರಾಕ್ಷಸರ ಮನೆಯಲ್ಲಿ ತನ್ನ ಸತೀತ್ವವನ್ನು ನಿಷ್ಕಳಂಕವಾಗಿ ಕಾಪಾಡಲು ಸಮರ್ಥಳಾದಳು. ಭರತನು ೧೪ ವರ್ಷಗಳವರೆಗೆ ಪ್ರಾಣ ಉಳಿಸಿಕೊಂಡಿ ದ್ದನು. ರಾಮನಾಮದ ಹೊರತು ಅನ್ಯಶಬ್ದವೇ ಅವರ ಕಂಠನಾಳದಿಂದ ಹೊರಡುತ್ತಿದ್ದಿಲ್ಲ. ಈ ಎಲ್ಲ ಪ್ರಮಾಣಗಳಿಂದಲೇ ಕಲಿಕಾಲದ ಮಲವನ್ನು ತೊಳೆದುಹಾಕಲು ರಾಮನಾಮವನ್ನು ಜಪಿಸಿರೆಂದು ತುಲಸೀದಾಸರು ಹೇಳಿ ದ್ದಾರೆ. 'ನನ್ನ ಅನುಭವವನ್ನೇ ನಾನು ನಿಮ್ಮ ಕಿವಿಗೆ ಹಾಕುತ್ತೇನೆ. ನಾನು ವ್ಯಭಿಚಾರಿಯಾಗುವದು ನಿಂತಿದ್ದು ಕೇವಲ ಒಂದು ರಾಮನಾಮ ದಿಂದಲೇ ಸರಿ. ಯಾವ ಯಾವ ಕಾಲದಲ್ಲಿ ನನ್ನ ಮೇಲೆ ಕಠಿಣ ಪ್ರಸಂಗ ಗಳು ಒದಗಿದವೋ ಆಯಾಕಾಲಕ್ಕೆ ನಾನು ರಾಮನಾಮವನ್ನು ಉಚ್ಚರಿಸಿದೆ —ಸುರಕ್ಷಿತವಾಗಿ ಉಳಿದುಕೊಂಡೆ. ಅನೇಕ ಸಂಕಟಗಳಲ್ಲಿ ರಾಮನಾಮವೇ ನನ್ನ ರಕ್ಷಣೆ ಮಾಡಿತು.' ಕೋಟ್ಯವಧಿ ಜನರ ಮನಸ್ಸಿನ ಅನುಸಂಧಾನ ವನ್ನು ಮಾಡಲು ಮತ್ತು ಅವುಗಳಲ್ಲಿ ಐಕ್ಯವನ್ನು ನಿರ್ಮಿಸಲು ರಾಮ

ನಾಮದ ಅಖಂಡಸ್ಮರಣೆಯಂತಹ ಸಬಲವಾಗಿಯೂ, ಸುಂದರವಾಗಿಯೂ ಇರುವ ಇನ್ನೊಂದು ಸಾಧನವಿಲ್ಲ. ಈವರೆಗಿನಿಗೆ ಎಷ್ಟು ಸಾಮ್ರಾಟರು ಸಮುದ್ರವಲಯಾಂಕಿತ ಪೃಥ್ವಿಯನ್ನು ಆಳಿದರೂ ಅವರಲ್ಲಿ ಯಾರನ್ನೂ ಶ್ರೀರಾಮನಷ್ಟು ಯಾರೂ ಕೊಂಡಾಡುವುದಿಲ್ಲ. ಅವರು ಯಾವ ಪರಿಯಿಂದಲೂ ಆರಾಧನೆಗೆ ವಿಷಯರಾಗಲಿಲ್ಲ. ರಾಮರಾಜ್ಯವೆಂಬಂತೆ ಅವರ ರಾಜ್ಯಕ್ಕೆ ಅವರ ಹೆಸರನ್ನು ಯಾರೂ ಇಡಲಿಲ್ಲ. ಇದನ್ನು ಆಲೋಚಿಸಿದರೂ ಶ್ರೀರಾಮ ಮತ್ತು ಶ್ರೀರಾಮರಾಜ್ಯ ಇವುಗಳ ಮಹತ್ವವು ಮನದಟ್ಟಾಗುವುದು.”

## ವಾಲ್ಮೀಕಿ ನಾರದರ ಸಂವಾದ

ತಪಃ ಸ್ವಾಧ್ಯಾಯನಿರತಂ ತಪಸ್ವೀ ವಾಗ್ವಿದಾಂ ವರಂ ।
ನಾರದಂ ಪರಿಪಪ್ರಚ್ಛ ವಾಲ್ಮೀಕಿರ್ಮುನಿಪುಂಗವಮ್ ॥

(ವಾಲ್ಮೀಕಿ ರಾಮಾಯಣ, ಬಾ. ಸರ್ಗ ೧, ಶ್ಲೋಕ ೧)

ಶ್ರೀ ರಾಮಾಯಣದ ಆರಂಭವು ಈ ಶ್ಲೋಕದಿಂದಲೇ ಆಗಿದೆ. ಶ್ರೀ ವಾಲ್ಮೀಕಿ-ನಾರದರ ಮುಂದಿನ ಪ್ರಶ್ನೋತ್ತರಗಳಿಗೆ ಈ ಶ್ಲೋಕವೇ ಉಗಮವು. ಶ್ರೀರಾಮನ ವಿಭೂತಿಮತ್ವ ಮತ್ತು ಆದರ್ಶ ವ್ಯಕ್ತಿತ್ವವನ್ನು ಪ್ರಕಟಪಡಿಸುವ ಈ ಮುಂದಿನ ಶ್ಲೋಕಗಳನ್ನು ನೋಡೋಣ.

ಕೋನ್ವಸ್ಮಿನ್ ಸಾಂಪ್ರತಂ ಲೋಕೇ ಗುಣವಾನ್ ಕಶ್ಚ ವೀರ್ಯವಾನ್ ।
ಧರ್ಮಜ್ಞಶ್ಚ ಕೃತಜ್ಞಶ್ಚ ಸತ್ಯವಾಕ್ಯೋ ದೃಢವ್ರತಃ ॥ ೨ ॥
ಚಾರಿತ್ರ್ಯೇಣ ಚ ಕೋ ಯುಕ್ತಃ ಸರ್ವಭೂತೇಷು ಕೋ ಹಿತಃ ।
ವಿದ್ವಾನ್ ಕಃ ಕಃ ಸಮರ್ಥಶ್ಚ ಕಶ್ಚೈಕಪ್ರಿಯದರ್ಶನಃ ॥ ೩ ॥
ಆತ್ಮವಾನ್ ಕೋ ಜಿತಕ್ರೋಧೋ ದ್ಯುತಿಮಾನ್ ಕೋಽನಸೂಯಕಃ ।
ಕಸ್ಯ ಬಿಭ್ಯತಿ ದೇವಾಶ್ಚ ಜಾತರೋಷಸ್ಯ ಸಂಯುಗೇ ॥ ೪ ॥

(ವಾ. ರಾ. ಬಾ. ಸರ್ಗ ೧, ಶ್ಲೋಕ ೨-೪)

ಈ ಕಾಲದಲ್ಲಿ ಇಡೀ ವಿಶ್ವದಲ್ಲಿಯೇ ಗುಣಾಢ್ಯನೂ, ಪರಾಕ್ರಮಶಾಲಿಯೂ, ಧರ್ಮಜ್ಞನೂ, ಕೃತಜ್ಞನೂ, ಸತ್ಯಸಂಧನೂ, ಸತ್ಯಸಂಕಲ್ಪನೂ, ಸಚ್ಚರಿತ್ರನೂ, ಸರ್ವಭೂತ ಹಿತೈಷಿಯೂ ಎಂದು ಹೇಳಿಸಿಕೊಂಡಿರುವಾತನಾವನು? ವಿದ್ವಾಂಸನೂ, ಸಮರ್ಥನೂ, ವಿಶ್ವಮೋಹ

ಕನೂ, ಧೈರ್ಯವಂತನೂ, ಜಿತಮನಸ್ಕನೂ, ಆತ್ಮನಿಷ್ಠನೂ ಯಾವಾತನಿಹನು? ಜಿತಕ್ರೋಧನೂ, ಅತ್ಯಂತ ತೇಜಸ್ವಿಯೂ, ಗುಣಗ್ರಾಹಿಯೂ ಆಗಿರತಕ್ಕವನಾರು? ಕೋಪಗೊಂಡರೆ ದೇವತೆಗಳೂ ಸಹ ಯಾವಾತನಿಗೆ ಹೆದರುವರೋ ಅಂತಹವನಾವನು ಈ ಅವನಿಯಲ್ಲಿಹನು? ಎಂಬ ಪ್ರಶ್ನೆಗೆ ನಾರದರ ಉತ್ತರ ಈ ಕೆಳಗಿನಂತಿರುವದು:

ಇಕ್ಷ್ವಾಕುವಂಶಪ್ರಭವೋ ರಾಮೋನಾಮ ಜನೈಃ ಶ್ರುತಃ ।
ನಿಯತಾತ್ಮಾ ಮಹಾವೀರ್ಯೋ ದ್ಯುತಿಮಾನ್ ಧೃತಿಮಾನ್ವಶೀ ॥ ೮ ॥
ಬುದ್ಧಿಮಾನ್ನೀತಿಮಾನ್ವಾಗ್ಮೀ ಶ್ರೀಮಾಞ್ಛತ್ರುನಿಬರ್ಹಣಃ ।
(ವಾ. ರಾ. ಬಾ. ಸರ್ಗ ೧, ಶ್ಲೋಕ ೮–೯)

ಯಾವಾತನಲ್ಲಿ ಈ ಎಲ್ಲ ಗುಣಗಳಿರುವುವೋ ಆತ ಇಕ್ಷ್ವಾಕು ವಂಶದಲ್ಲಿ ಜನಿಸಿರುವ ರಾಮನೆಂಬ ಹೆಸರುಳ್ಳ ಒಬ್ಬನಿರುವನು. ಈತನೇ ಮನಸ್ಸನ್ನು ಜಯಿಸಿದ ಮಹಾ ಬಲಶಾಲಿಯು, ಮಹಾ ತೇಜಸ್ವಿಯು, ಮಹಾ ಧೈರ್ಯಶಾಲಿಯು, ಮಹಾನ್ ಮನೋನಿಗ್ರಹಿಯು, ಮಹಾನ್ ಬುದ್ಧಿಮಾನನು, ಮಹಾನ್ ನೀತಿಮಾನನು, ಮಹಾನ್ ವಾಗ್ಮಿಯು, ಮಹಾನ್ ವೈಭವಶಾಲಿಯು, ಮಹಾನ್ ಶತ್ರುನಿರ್ಮಾಲಕನು.

## ಶ್ರೀರಾಮನ ವರ್ಣನೆ

ವಿಪುಲಾಂಸೋ ಮಹಾಬಾಹುಃ ಕಂಬುಗ್ರೀವೋ ಮಹಾಹನುಃ ॥ ೯ ॥
ಮಹೋರಸ್ಕೋ ಮಹೇಷ್ವಾಸೋ ಗೂಢಜತ್ರುರರಿಂದಮಃ ।
ಆಜಾನುಬಾಹುಃ ಸುಶಿರಾಃ ಸುಲಲಾಟಃ ಸುವಿಕ್ರಮಃ ॥ ೧೦ ॥
ಸಮಃ ಸಮವಿಭಕ್ತಾಂಗಃ ಸ್ನಿಗ್ಧವರ್ಣಃ ಪ್ರತಾಪವಾನ್ ।
ಪೀನವಕ್ಷಾಃ ವಿಶಾಲಾಕ್ಷೋ ಲಕ್ಷ್ಮೀವಾನ್ಶುಭಲಕ್ಷಣಃ ॥ ೧೧ ॥
(ವಾ. ರಾ. ಬಾ. ಸರ್ಗ ೧, ಶ್ಲೋಕ ೯–೧೧)

ಶ್ರೀರಾಮನ ಹೆಗಲುಗಳು ಭುಜಗಳು ವಿಶಾಲವಾಗಿದ್ದುವು. ಈತನ ಕಂಠವು ಶಂಖದ ಆಕೃತಿಯಂತಿದೆ. ಮೋಹಕವಾದ ಕೆನ್ನೆಗಳಿಂದಲೂ, ಆಕರ್ಷಕವಾದ ಗಲ್ಲಗಳಿಂದಲೂ, ಮುಗ್ಧಗೊಳಿಸುವ ದಂತಗಳಿಂದಲೂ, ಮನಸ್ಸನ್ನು ಸೆಳೆಯುವ ಕಮನೀಯ ಹನುವಿನಿಂದಲೂ ಈತನು ಅತಿ

ಸುಂದರನಾಗಿರುವನು. ದಂತಾವಳಿಯ ಧವಲಪ್ರಭೆಯಿಂದ ಹೊರಸೂಸುವ ಈತನ ನಸುನಗುವನ್ನು ಕಂಡು ಮುಗ್ಧರಾಗದವರೇ ಇಲ್ಲ. ಅವನ ಆ ವಿಶಾಲಧನುಷ್ಯವು ಅವನ ಬಾಹುಬಲವನ್ನೂ, ಪರಾಕ್ರಮವನ್ನೂ ಪ್ರಕಟಿಸುವುದು. ಮೊಣಕಾಲಿನವರೆಗೂ ದೀರ್ಘವಾದ ಅವನ ಉದ್ದ ತೋಳುಗಳು ಆತನ ನಿರವಧಿ ಪೌರುಷವನ್ನೂ, ದಿವ್ಯವಿಭೂತಿಮತ್ವವನ್ನೂ ಕಾಣಿಸುವುವು. ಬಹು ಪುಷ್ಟಿಗೊಂಡಿದ್ದರಿಂದ ಅವನ ಉನ್ನತವಾದ ಎದೆಯ ಮೇಲ್ಭಾಗದಲ್ಲಿರುವ ಎಲುವುಗಳು ಕಣ್ಣಿಗೆ ಗೋಚರವಾಗವು. ಈತನ ದರ್ಶನಮಾತ್ರದಿಂದಲೇ ಈತನು ಅಪಾರ ಮಹಿಮೆಯುಳ್ಳ ಪರಾಕ್ರಮಶಾಲಿಯೆಂದು ನಿರ್ಧಾರವಾಗುವುದು. ಈತನಲ್ಲಿ ಪರಾಕ್ರಮದ ಎಷ್ಟು ಉಗ್ರ ತೇಜಸ್ಸಿರುವುದೋ ಅಷ್ಟೇ ವಿವೇಕದ ಶಾಂತತೇಜಸ್ಸು ಇವನ ಶ್ರೀಮುಖದಲ್ಲಿ ಕಂಗೊಳಿಸುವುದು. ನೋಡಿದವರಿಗೆಲ್ಲಾ ಅವನ ವಿಷಯದಲ್ಲಿ ತಮ್ಮ ರಕ್ಷಣೆಗಾಗಿದ್ದ ಪರಮಾತ್ಮನ ಭಾವನೆಯನ್ನು ಒಡಮೂಡಿಸುವುದು. ಅವನ ಬ್ರಹ್ಮಸ್ವರೂಪದ ಆನಂದವನ್ನು ಬೀರುತ್ತಿರುವ ಆತನ ವರ್ತುಲಾಕಾರವಾಗಿ ಛತ್ರದಂತಿರುವ ಶಿರೋಭಾಗವು ಅತಿ ಸುಂದರವಾಗಿ ಕಂಗೊಳಿಸುವುದು. ಶ್ರೀರಾಮನ ಅಪಾರ ಪ್ರಭುತ್ವವನ್ನು ಸೂಚಿಸುತ್ತ ಈತನ ಅರ್ಧಚಂದ್ರಾಕಾರವಾದ ಉನ್ನತ ಲಲಾಟವು ಬಹು ಶೋಭಾಯಮಾನವಾಗಿ ಕಾಣುವುದು. ರಾಜಲಕ್ಷಣಕ್ಕೆ ಒಪ್ಪುವ ಇವನ ನಡೆಯುವ ಠೀವಿ ಬಹು ಅಂದವಾದುದು. ಈತನು ಸರ್ವಸಮತ್ವವುಳ್ಳವನು. ಈತನ ದೇಹವು ಅತಿ ಗಿಡ್ಡವೂ, ಅತಿ ಎತ್ತರವೂ ಇರದೆ ಸಮವಾಗಿದೆ. ಇವನ ಶಾರೀರಿಕ ಆಕೃತಿಯ ಸೌಷ್ಠವವು ಮಹಾಪುರುಷತ್ವವನ್ನು ವ್ಯಕ್ತಪಡಿಸುತ್ತದೆ. ನೀಲಮಣಿಯಂತೆ ಅತಿ ಶೋಭಾಯಮಾನವಾದ ಬಹು ಸ್ನಿಗ್ಧವಾಗಿರುವ ದೇಹವಿವನದು—ಅತಿ ಚಿತ್ತಾಕರ್ಷಕವಿದೆ. ತೇಜಸ್ವೀ ಪರಿವಾರದ ಶೋಭೆಯಿಂದ ಈತನು ಅಲಂಕೃತನಾಗಿ ಶೋಭೆಗೊಂಡಿಹನು. ಯಾವಾಗಲೂ ಸಜ್ಜನರ ಕೂಟದಲ್ಲಿರತಕ್ಕವನು. ಈತನಿಗೆ ಯಾವಾಗಲೂ ಸತ್ಪುರುಷರ ಒಡನಾಟವಿದೆ. ಹೋದವರ ಯೋಗ್ಯ ಆತಿಥ್ಯವನ್ನು ಮಾಡುವನು. ಎಲ್ಲರನ್ನೂ ಆದರಿಸಿ ಮೃದು—ಮಧುರವಾಗಿ ನುಡಿಯುವನು. ಬ್ರಾಹ್ಮಣರಲ್ಲಿ ಈತನಿಗೆ ಬಹುಭಕ್ತಿ. ವಸಿಷ್ಠರಿಂದ ಈತನಿಗೆ ವಿದ್ಯೆ ಪ್ರಾಪ್ತವಾಗಿಹುದು.

ಈತನ ಬಳಿಯಲ್ಲಿ ವಸಿಷ್ಠ ಮುಂತಾದ ಋಷಿಮುನಿಗಳಿರುವರು. ಇಂತಹವರ ಸಲಹೆಯಿಂದ ನಿರ್ದುಷ್ಟವಾಗಿ ರಾಜ್ಯಭಾರವನ್ನು ನಡೆಸುವನು. ತಪ್ಪುಗಳಿಗೆ ಇದಿರಾಗುವ ಎದೆಗಾರಿಕೆಯನ್ನು ಕಾಣಿಸುವ ಉನ್ನತ ವಿಶಾಲವಾದ ಈತನ ತುಂಬಿದ ಎದೆಯು ನೋಡಿದವರಿಗೂ ಸಹ ಪೌರುಷವನ್ನುಂಟು ಮಾಡುವುದು. ಈತನ ಅವಯವಗಳೆಲ್ಲ ವಜ್ರದಂತೆ ಕಠಿಣವಾಗಿದ್ದರೂ ಅಷ್ಟೇ ಕಮನೀಯ ಕೋಮಲವಾಗಿಹವು. ಅಂತೂ ಈ ಶ್ರೀರಾಮನು ಶಾಸ್ತ್ರದಲ್ಲಿ ಹೇಳಿದ ಶುಭಲಕ್ಷಣಗಳಿಂದ ಪೂರ್ಣ ಸಂಪನ್ನನಾಗಿಹನೆಂಬು ವುದರಲ್ಲಿ ಯಾವ ಸಂದೇಹವೂ ಇಲ್ಲ.



## ಶ್ರೀರಾಮನ ಆದರ್ಶ ಗುಣಗಳು

ಧರ್ಮಜ್ಞಃ ಸತ್ಯಸಂಧಶ್ಚ ಪ್ರಜಾನಾಂ ಚ ಹಿತೇ ರತಃ ।
ಯಶಸ್ವೀ ಜ್ಞಾನಸಂಪನ್ನಃ ಶುಚಿರ್ವಶ್ಯಃ ಸಮಾಧಿಮಾನ್ ॥ ೧೨ ॥

ಪ್ರಜಾಪತಿಸಮಃ ಶ್ರೀಮಾನ್ ಧಾತಾ ರಿಪುನಿಷೂದನಃ ।
ರಕ್ಷಿತಾ ಜೀವಲೋಕಸ್ಯ ಧರ್ಮಸ್ಯ ಪರಿರಕ್ಷಿತಾ ॥ ೧೩ ॥

ರಕ್ಷಿತಾ ಸ್ವಸ್ಯ ಧರ್ಮಸ್ಯ ಸ್ವಜನಸ್ಯ ಚ ರಕ್ಷಿತಾ ।
ವೇದವೇದಾಂಗ ತತ್ವಜ್ಞೋ ಧನುರ್ವೇದೇ ಚ ನಿಷ್ಠಿತಃ ॥ ೧೪ ॥

ಸರ್ವಶಾಸ್ತ್ರಾರ್ಥ ತತ್ವಜ್ಞಃ ಸ್ಮೃತಿಮಾನ್ ಪ್ರತಿಭಾನವಾನ್ ।
ಸರ್ವಲೋಕಪ್ರಿಯಃ ಸಾಧುರದೀನಾತ್ಮಾ ವಿಚಕ್ಷಣಃ ॥ ೧೫ ॥

ಸರ್ವದಾಭಿಗತಃ ಸದ್ಭಿಃ ಸಮುದ್ರ ಇವ ಸಿಂಧುಭಿಃ ।
ಆರ್ಯಃ ಸರ್ವಸಮಶ್ಚೈವ ಸದೈವ ಪ್ರಿಯದರ್ಶನಃ ॥ ೧೬ ॥

ಸ ಚ ಸರ್ವಗುಣೋಪೇತಃ ಕೌಸಲ್ಯಾನಂದವರ್ಧನಃ ।
ಸಮುದ್ರ ಇವ ಗಾಂಭೀರ್ಯೇ ಧೈರ್ಯೇಣ ಹಿಮವಾನಿವ ॥ ೧೭ ॥

ವಿಷ್ಣುನಾ ಸದೃಶೋ ವೀರ್ಯೇ ಸೋಮವತ್ ಪ್ರಿಯದರ್ಶನಃ ।
ಕಾಲಾಗ್ನಿ ಸದೃಶಃ ಕ್ರೋಧೇ ಕ್ಷಮಯಾ ಪೃಥಿವೀಸಮಃ ॥ ೧೮ ॥

ಧನದೇನ ಸಮಸ್ತ್ಯಾಗೇ ಸತ್ಯ ಧರ್ಮ ಇವಾಪರಃ ।
ತಮೇವಂ ಗುಣಸಂಪನ್ನಂ ರಾಮಂ ಸತ್ಯಪರಾಕ್ರಮಮ್ ॥ ೧೯ ॥

(ವಾ. ರಾ. ಸರ್ಗ ೧, ಶ್ಲೋಕ ೧೨–೧೯)

ಶ್ರೀರಾಮನು ಧರ್ಮದ ಎಲ್ಲಾ ಜ್ಞಾನವುಳ್ಳವನು. ಶರಣಾಗತ ರಕ್ಷಣೆ ಮಾಡುವುದೇ ತನ್ನ ಧರ್ಮವೆಂದು ಈತನ ನಿಶ್ಚಯವಿರುವುದು. ಪ್ರಜಾಧರ್ಮ, ರಾಜಧರ್ಮ, ಪಿತೃಧರ್ಮ, ಮಾತೃಧರ್ಮ, ಸತೀಧರ್ಮ, ಪತಿಧರ್ಮ, ಪುತ್ರಧರ್ಮ, ಬಂಧುಧರ್ಮ, ವರ್ಣಧರ್ಮ, ಆಶ್ರಮಧರ್ಮ, ಪ್ರವೃತ್ತಿಧರ್ಮ, ನಿವೃತ್ತಿಧರ್ಮ ಮುಂತಾದ ಎಲ್ಲವನ್ನೂ ಈತನು ಬಲ್ಲವನಾಗಿ ತಿಹನು. ಈತನು ಸತ್ಯಪ್ರತಿಜ್ಞನು. ಇವನ ಮಾತಿಗೆ ಎರಡಿಲ್ಲ. ವಚನಕ್ಕೆ ಹುಸಿಯಿಲ್ಲ. ಪ್ರಜೆಗಳ ಹಿತವನ್ನು ಸಾಧಿಸುವುದರಲ್ಲಿ ಈತನು ಸರ್ವದಾ ದಕ್ಷನಾಗಿಹನು. ಈತನ ಯಶಸ್ಸು ಎಲ್ಲೆಡೆಯಲ್ಲಿಯೂ ಹರಡಿರುವುದು. ಈತನು ಆತ್ಮನಿಷ್ಠನಾಗಿಯೂ, ಸರ್ವಜ್ಞನಾಗಿಯೂ ಇರುವನು. ಈತನು ಸರಳಸ್ವಭಾವದವನು. ಈತನ ಹೃದಯ ಅತಿ ಪವಿತ್ರವಾದುದು. ಈತನನ್ನು ಕಂಡರೆ ನೋಡಿದವರ ಮನಸ್ಸಿನಲ್ಲಿ ಸಹ ಒಂದು ಪವಿತ್ರಭಾವನೆ ಒಡ ಮೂಡುವುದು. ನರ-ನಾರಾಯಣರಂತೆ ಮನಸ್ಸು ಮತ್ತು ಇಂದ್ರಿಯಗಳು ಈತನ ವಶದಲ್ಲಿರುವುವು. ಇವನು ಆಶ್ರಿತಜನರ ವಶವರ್ತಿಯು. ಈತನು ನಿಶ್ಚಲಚಿತ್ತನು. ಪ್ರಜಾಪತಿಯಂತೆ ಜಗತ್ತನ್ನು ಪಾಲಿಸುವವನು. ಶ್ರೀರಾಮನು ಮಹಾನ್ ಶ್ರೀಮಾನನು; ಎಲ್ಲ ಸದ್ವೃತ್ತಿಗಳ ಪೋಷಕನು. ಸ್ವಜನ ರಕ್ಷಕನು. ಸ್ವಜನರ ರಕ್ಷಣೆಗಾಗಿ ದುಷ್ಟರನ್ನು ನಷ್ಟಪಡಿಸಿ ತನ್ನಿಂದ ಹತರಾದರೆಂದು ಗ್ರಹಿಸಿ ಅವರಿಗೂ ಕೊನೆಯಲ್ಲಿ ಮೋಕ್ಷವನ್ನು ಕೊಡುವನು. ಎಲ್ಲರ ಪರಿಪಾಲನೆ ಮಾಡುವನು. ಆಚಾರ ಪ್ರಚಾರಗಳ ಮೂಲಕ ಧರ್ಮದ ರಕ್ಷಣೆ ಮಾಡುವನು. ಈತನು ತನ್ನ ಧರ್ಮವನ್ನು ಬಿಟ್ಟು ಅತ್ತಿತ್ತ ಹೋಗುವವನೇ ಅಲ್ಲ. ಸಜ್ಜನರ ರಕ್ಷಣೆಯಲ್ಲಿ ಈತನು ತನ್ನ ಸುಖವನ್ನು ನೋಡನು. ವೇದ-ವೇದಾಂಗ ತತ್ವಗಳನ್ನು ಅರಿತವನು. ಧನುರ್ವೇದದಲ್ಲಿ ಈತನ ಕೈ ಹಿಡಿಯುವವರೇ ಇಲ್ಲ. ಎಲ್ಲಾ ಶಾಸ್ತ್ರಗಳನ್ನು ಅವುಗಳ ತಾತ್ವಿಕ ಅರ್ಥವನ್ನೂ ಬಲ್ಲವನು. ಆತ್ಮವಿಸ್ಮೃತಿ ಈತನಿಗೆ ಆಗದು. ಓದಿದುದನ್ನು ಮರೆಯನು. ಈತನ ಧಾರಣೆ ಅಸಾಧಾರಣವಾದುದು. ಈತನು ಅಸಾಧಾರಣ ಪ್ರತಿಭಾಸಂಪನ್ನನು. ಸರ್ವಲೋಕ ಪ್ರಿಯನು, ಸೌಮ್ಯನು, ಸಜ್ಜನನು, ಸರಳಸ್ವಭಾವದವನು. ಯಾವ ವಿಧ ದೈನ್ಯಭಾವವೂ ಈತನಲ್ಲಿಲ್ಲ. ಕೇಳಿದ ವೇದಶಾಸ್ತ್ರ ಪ್ರಶ್ನೆಗಳಿಗೆ ಯೋಗ್ಯ

ಯುಕ್ತ ಉತ್ತರವನ್ನು ಕೊಡುವನು. ವಾಚಸ್ಪತಿಯಂತೆ ಮಾತು ಬಲ್ಲವನು. ಈತನ ಮೃದು-ಮಧುರವಾದ ನುಡಿಯನ್ನು ಕೇಳಿ ಎಂತಹವನಿಗೂ ಶಾಂತಿ ಸಮಾಧಾನವಾಗುವುದು. ಹೊಳೆಗಳು ಸಮುದ್ರವನ್ನು ಸೇರುವಂತೆ ಎಲ್ಲರೂ ಈತನನ್ನು ಸೇರುವರು. ಆರ್ಯನು ಸರ್ವಸಮವರ್ತನೆಯಿಂದ ಸರ್ವರನ್ನೂ ಸಂತೈಸುವನು. ಇವನನ್ನು ಕಂಡರೆ ಸಾಕು, ಅಷ್ಟು ಆನಂದವಾಗುವುದು. ಇವನ ದರ್ಶನಕ್ಕಾಗಿ ನಿತ್ಯ ಹೊಸ ಹುರುಪಿನಿಂದ ಎಲ್ಲ ಜನರೂ ಉತ್ಸುಕರಾಗಿರುವರು. ಸಕಲಗುಣಾಲಂಕೃತನಾದ ಈ ಶ್ರೀರಾಮನು ತನ್ನ ತಾಯಿಯಾದ ಕೌಸಲ್ಯೆಯ ಹೃದಯಸಮುದ್ರವನ್ನು ಉಕ್ಕೇರಿಸುವ ಚಂದ್ರನೇ ಸರಿ. ಶ್ರೀರಾಮನು ಸಮುದ್ರದಂತೆ ಗಂಭೀರನು. ಮೇರುವಿನಂತೆ ಇವನ ನಿಷ್ಠೆಯೂ, ಧೈರ್ಯವೂ ಅಚಲವಾದುದು. ಪರಾಕ್ರಮದಲ್ಲಿ ಈತನು ಪ್ರತಿವಿಷ್ಣುವೇ ಸರಿ. ಪೌರ್ಣಿಮೆಯ ನಿಷ್ಕಳಂಕ ಚಂದ್ರನಂತೆ ಸುಂದರವಾದ ಈತನ ಮುಖವು ಎಲ್ಲರ ಮನಸ್ಸನ್ನೂ ಹರಣ ಮಾಡುವುದು. ಶತಕೋಟಿ ಮನ್ಮಥರನ್ನು ಸಹ ಮೀರುವ ಇವನ ಸೌಂದರ್ಯವು, ಧರಣಿಯಂತಿರುವ ಇವನ ತಾಳ್ಮೆಯು, ಬೃಹಸ್ಪತಿಯಂತಿರುವ ಈತನ ಬುದ್ಧಿಮತ್ತೆಯು, ಯಮಧರ್ಮನಂತಿರುವ ನೀತಿಯು ಎಲ್ಲಾ ವಿಧದಿಂದಲೂ ಅವರ್ಣನೀಯವಾಗಿದೆ.

ಅಂತಹ ಸಬಲಕಾರಣದ ಹೊರತಾಗಿ ಶ್ರೀರಾಮನಿಗೆ ಕ್ರೋಧವು ಬಾರದು. ಧರ್ಮವಿರುದ್ಧವಾಗಿ ನಡೆದು ಅಕಾರಣವಾಗಿ ಸಜ್ಜನರನ್ನು ಪೀಡಿಸುವ ಪುಂಡರನ್ನು ಗತ್ಯಂತರವಿಲ್ಲದೆ ದಂಡಿಸುವಾಗ ಅವರಿಗೆ ಈತನು ಸಾಕ್ಷಾತ್ ಕಾಲಾಗ್ನಿಯಂತೆ ಕಂಡುಬರುವನು. ಇಲ್ಲವಾದರೆ ಕ್ಷಮೆ ಮಾಡುವುದು ಈತನ ಹುಟ್ಟುಗುಣವೇ ಸರಿ. ಈತನ ಕ್ಷಮಾಗುಣಕ್ಕೆ ಪೃಥ್ವಿಯ ಹೋಲಿಕೆಯನ್ನು ಕೊಡಬಹುದು. ಸತ್ಯದಲ್ಲಿ ಈತನು ಪ್ರತಿಧರ್ಮನಂತಿರುವನು. ಮಾನವಧರ್ಮವನ್ನು ಬೋಧಿಸುವ ಇವನ ಗುಣಗಳು ಪಠನೀಯ, ಮನನೀಯ ಮತ್ತು ಅನುಕರಣೀಯವಾಗಿವೆ. ಶ್ರೀರಾಮನು ಇವೇ ಮುಂತಾದ ಆದರ್ಶ ಗುಣಗಳಿಂದ ಅಖಿಲ ಮಾನವ ಜಾತಿಗೆ ಆರಾಧ್ಯನಾಗಿಯೂ, ಧ್ಯೇಯನಾಗಿಯೂ ಇರುವನೆಂದು ಕಂಡು ಬರುವುದು.

ಅಹಂ ವೇದ್ಮಿ ಮಹಾತ್ಮಾನಂ ರಾಮಂ ಸತ್ಯಪರಾಕ್ರಮಂ ।
ವಸಿಷ್ಠೋಽಪಿ ಮಹಾತೇಜಾ ಯೇಚೇಮೇ ತಪಸಿ ಸ್ಥಿತಾಃ ॥ ೧೪
(ವಾ. ರಾ. ಬಾ. ಸರ್ಗ ೧೯

ಯಜ್ಞದ ರಕ್ಷಣೆಗಾಗಿ ಶ್ರೀರಾಮನನ್ನು ಒಯ್ಯಲು ಬ... ವಿಶ್ವಾಮಿತ್ರನ ಈ ವಾಕ್ಯವು ಬಾಲ್ಯದಲ್ಲಿಯೇ ಶ್ರೀರಾಮನ ಮಾಹಾತ್ಮ್ಯ... ಸರ್ವವಿದಿತವಾಗಿತ್ತೆಂಬುದನ್ನು ವ್ಯಕ್ತಪಡಿಸುವುದು. ಶ್ರೀರಾಮನು ಸಿ... ವಾಗಿ ಪರಾಕ್ರಮಶಾಲಿಯು. ಆತನ ಮಾಹಾತ್ಮ್ಯವು ಬಲು ದೊಡ್ಡದಿ... ದನ್ನು ನಾನೊಬ್ಬನೇ ಅರಿತಿರುವೆನೆಂದು ತಿಳಿಯಬೇಡ. ಅವನ ಮಾ... ತ್ಮ್ಯವು ವಸಿಷ್ಠರಿಗೂ ಗೊತ್ತುಂಟು. ಅಷ್ಟೇ ಅಲ್ಲ, ಯಾರು ಯಾರು ತಪ... ನಲ್ಲಿರುವರೋ ಅವರಿಗೆಲ್ಲ ಶ್ರೀರಾಮನ ಮಹತ್ವವು ಗೊತ್ತಿದೆಯೆಂಬುದ... ಈ ಶ್ಲೋಕದಲ್ಲಿ ಹೇಳಿದ್ದುಂಟು. ಇಲ್ಲಿ "ವೇದಾಹಮೇತಂ ಪುರುಷ... ಮಹಾಂತಂ"- (ಯಜುರ್ವೇದ ೩೧–೧೮) ಈ ವೈದಿಕ ಋಕ್ಕು ನೆನ... ಬರುವುದು. ಅಯೋಧ್ಯಾಕಾಂಡದ ಪ್ರಥಮಸರ್ಗದಲ್ಲಿ ಒಂಭತ್ತನೆ... ಶ್ಲೋಕದಿಂದ ಮೂವತ್ತೆರಡನೆಯ ಶ್ಲೋಕದವರೆವಿಗೂ, ಎರಡನೇ ಸರ್ಗ... ದಲ್ಲಿ ೨೮ ನೇ ಶ್ಲೋಕದಿಂದ ಅಧ್ಯಾಯದ ತುದಿಯವರೆವಿಗೂ ಶ್ರೀರಾಮ... ವರ್ಣನೆ ಇದೆ. ಇವೆಲ್ಲ ಗುಣಗಳೂ ಶ್ರೀರಾಮನನ್ನು ಅಖಿಲ ಕಲ್ಯಾಣಗು... ರತ್ನಾಕರನೆಂದು ಕಾಣಿಸುವುವು. ಅಲ್ಲದೆ ಈ ಆದರ್ಶ ಗುಣಗಳ... ಮುಂದಿಟ್ಟು ತನ್ನ ಜೀವನವನ್ನು ದಿವ್ಯವಾಗಿ ರೂಪುಗೊಳಿಸುವುದಕ್ಕಾ... ಆಗ್ರಹದ ಹಿತೋಪದೇಶವನ್ನು ಮಾಡುವುವು.

ಸ ಹಿ ರೂಪೋಪಪನ್ನಶ್ಚ ವೀರ್ಯವಾನನಸೂಯಕಃ ।
ಭೂಮಾವನುಪಮಃ ಸೂನುರ್ಗುಣೈರ್ದಶರಥೋಪಮಃ ॥ ೯

ಸ ಚ ನಿತ್ಯಂ ಪ್ರಶಾಂತಾತ್ಮಾ ಮೃದುಪೂರ್ವಂ ಚ ಭಾಷತೇ ।
ಉಚ್ಯಮಾನೋಪಿ ಪರುಷಂ ನೋತ್ತರಂ ಪ್ರತಿಪದ್ಯತೇ ॥ ೧೦

ಕಥಂಚಿದುಪಕಾರೇಣ ಕೃತೇನೈಕೇನ ತುಷ್ಯತಿ ।
ನಸ್ಮರತ್ಯಪಕಾರಾಣಾಂ ಶತಮಪ್ಯಾತ್ಮವತ್ತಯಾ ॥ ೧೧

ಶೀಲವೃದ್ಧೈರ್ಜ್ಞಾನವೃದ್ಧೈರ್ವಯೋವೃದ್ಧೈಶ್ಚ ಸಜ್ಜನೈಃ ।
ಕಥಯನ್ನಾಸ್ತ ವೈ ನಿತ್ಯಮಸ್ತ್ರಯೋಗ್ಯಾಂತರೇಷ್ವಪಿ ॥ ೧೨

ಬುದ್ಧಿಮಾನ್ ಮಧುರಾಭಾಷೀ ಪೂರ್ವಭಾಷೀ ಪ್ರಿಯಂವದಃ ।
ವೀರ್ಯವಾನ್ ನ ಚ ವೀರ್ಯೇಣ ಮಹತಾ ಸ್ವೇನ ವಿಸ್ಮಿತಃ ॥ ೧೩ ॥

ನ ಚಾನೃತಕಥೋ ವಿದ್ವಾನ್ ವೃದ್ಧಾನಾಂ ಪ್ರತಿಪೂಜಕಃ ।
ಅನುರಕ್ತಃ ಪ್ರಜಾಭಿಶ್ಚ ಪ್ರಜಾಶ್ಚಾಪ್ಯನುರಜ್ಯತೇ ॥ ೧೪ ॥

ಸಾನುಕ್ರೋಶೋ ಜಿತಕ್ರೋಧೋ ಬ್ರಾಹ್ಮಣಪ್ರತಿಪೂಜಕಃ ।
ದೀನಾನುಕಂಪೀ ಧರ್ಮಜ್ಞೋ ನಿತ್ಯಂ ಪ್ರಗ್ರಹವಾನ್ಛುಚಿಃ ॥ ೧೫ ॥

(ವಾ. ರಾ. ಅ. ಸರ್ಗ ೧)

ಶ್ರೀರಾಮನು ಸುಂದರನು, ವೀರ್ಯವತ್ತರನು, ಪರನಿಂದಾ ಮತ್ಸರಾದಿ ರಹಿತನು, ನಿತ್ಯದಲ್ಲಿಯೂ ವಿಕಾರಶೂನ್ಯ ಆತ್ಮನಿಷ್ಠನು. ಮೊದಲೇ ಮೃದುಮಧುರವಾದ ನುಡಿಗಳಿಂದ ಎಲ್ಲರ ಯೋಗಕ್ಷೇಮವನ್ನೂ ವಿಚಾರಿಸುವನು. ಯಾರಾದರೂ ತಿಳಿಯದೆ ಅಥವಾ ತಿಳಿದು ನಿಷ್ಠುರವಾಗಿ ನುಡಿದರೂ ಅವರ ಮಾತಿಗೆ ಹೋಗನು. ಸುಮ್ಮನಿರುವನು. ಮಾತನಾಡುವುದಾದರೆ ನಯನುಡಿಗಳಿಂದ ಆತನನ್ನು ಸಂತೈಸುವನು. ಯಾವ ಭಾವನೆಯಿಂದಲೇ ಆಗಲಿ ಉಪಕಾರ ಮಾಡಿದರೂ ಈತನು ಅದಕ್ಕಾಗಿ ಕೃತಜ್ಞನಿರುವನು. ನಿತ್ಯಾನಂದಘನವಾದ ಆತ್ಮಸ್ಥಿತಿಯಲ್ಲಿಯೇ ಯಾವಾಗಲೂ ಇರುವನು. ಈತನ ವಿಷಯದಲ್ಲಿ ಯಾರಾದರೂ ಅನಂತ ಅಪಕಾರಗಳನ್ನು ಎಸಗಿದರೂ ಕೂಡ ಅವರಲ್ಲಿ ಇವನು ಹಗೆತನವನ್ನು ಭಾವಿಸುತ್ತಿರಲಿಲ್ಲ. ಕಷ್ಟದಲ್ಲಿ ಸಹಾಯಮಾಡುವನು. ಶೀಲವಂತರಾದವರಲ್ಲಿ ನ್ಯಾಯ-ನೀತಿಯ, ಸುಶೀಲತೆಯ ಪರವಾಗಿ ಮಾತನಾಡುವನು. ಜ್ಞಾನಿಗಳಲ್ಲಿ ಆತ್ಮವಿಚಾರವನ್ನು ನಡೆಸುವನು. ವೃದ್ಧರಲ್ಲಿ ಮೊದಲಿನಿಂದ ಬಂದ ಸಂಪ್ರದಾಯ ಪದ್ಧತಿಯ ವಿಷಯದಲ್ಲಿ ಮಾತನಾಡುವನು. ಶೂರ ವೀರರುಗಳಲ್ಲಿ ಶಸ್ತ್ರಾಸ್ತ್ರಗಳನ್ನು ಕುರಿತು ಮಾತನಾಡುವನು. ಸಜ್ಜನರ ಸಂಗಡ ಮಾತ್ರವೇ ವಿಶೇಷವಾಗಿ ಮಾತನಾಡುವನು. ನಿತ್ಯದಲ್ಲಿಯೂ ಸತ್ಸಂಗದಲ್ಲಿರುವನು. ಬುದ್ಧಿಯನ್ನು ಉಪಯೋಗಿಸಿ ವಿಶ್ವಕಲ್ಯಾಣದ ಬಗೆ ಬಗೆಯ ಸಾಧನಗಳನ್ನುಂಟುಮಾಡುವನು. ಈತನು ನುಡಿದದ್ದೆಲ್ಲ ಸವಿಯೇ. ಈತನ ನಡೆ-ನುಡಿಯೆಲ್ಲ ಅಚ್ಚುಕಟ್ಟಾಗಿರುವುದು, ಅಚ್ಚುಮೆಚ್ಚಾಗಿರುವುದು, ಮೃದುಮಧುರವಾಗಿರುವುದು. ಎಂತಹ ನೀಚನಾದರೂ ಅವನು ಮಾತನಾಡುವ ಪೂರ್ವದಲ್ಲಿಯೇ ಈತನು

ಅವನನ್ನು ಮಾತನಾಡಿಸುವನು. ಎಲ್ಲರಿಗೂ ಪ್ರಿಯ ಮತ್ತು ಹಿತವಾಗು ವಂತೆ ನುಡಿಯುವನು. ಲೋಕೈಕವೀರನಾದರೂ ಇವನಲ್ಲಿ ಲೇಶಮಾತ್ರವೂ ಗರ್ವವಿಲ್ಲ. ಎಂದಿಗೂ ಸುಳ್ಳನ್ನಾಡನು. ವಿಪರೀತವಾಗಿ ಎಣಿಸನು. ಸರ್ವಜ್ಞನು. ಮುದುಕರ ಸೇವೆಯನ್ನು ಮಾಡುವನು. ಎಲ್ಲಾ ವಿಧದಿಂದಲೂ ತಾಯಿ ತಂದೆಯವರನ್ನೂ, ವೃದ್ಧರನ್ನೂ ಆದರಿಸುವನು. ಪ್ರಜಾಪ್ರಿಯನು. ಅಂತೆಯೇ ಪ್ರಜೆಯಲ್ಲಿ ಪ್ರೀತಿಯುಳ್ಳವನು. ಪರರ ದುಃಖವನ್ನು ಪರಿಹರಿಸುವ ದಯಾಮೂರ್ತಿಯು. ಕ್ರೋಧವನ್ನು ಜಯಿಸಿದವನು. ಬ್ರಾಹ್ಮಣರಲ್ಲಿ ನಿಷ್ಠೆಯುಳ್ಳವನು. ಅರ್ಘ್ಯಪಾದ್ಯಾದಿಗಳಿಂದ ಅವರ ಪೂಜೆಯನ್ನು ಮಾಡುವವನು. ದೀನಬಂಧು, ಧರ್ಮಿಷ್ಠನು, ಧರ್ಮ ಪ್ರಾಣನು. ಮನ-ಇಂದ್ರಿಯಗಳನ್ನು ವಶದಲ್ಲಿಟ್ಟು ನಿತ್ಯನೇಮದಿಂದ ನಡೆಯುವವನು. ಇತ್ಯಾದಿ ಶ್ರೀರಾಮನ ಅನುಕರಣೀಯ ವರ್ತನೆಯ ವರ್ಣನೆ ಇರುವುದು.

## ಶ್ರೀರಾಮನು ಧರ್ಮಾವತಾರ

"ರಕ್ಷಕೋ ವಿಷ್ಣುಃ" ವಿಷ್ಣುವು ಸೃಷ್ಟಿಯ ರಕ್ಷಕನು. ಧರ್ಮ ದಿಂದಲೇ ಸೃಷ್ಟಿಯ ರಕ್ಷಣೆಯಾಗತಕ್ಕದ್ದು. ಆದುದರಿಂದ ಅಂತಹ ಧರ್ಮ ಗ್ಲಾನಿಯು ಕಾಲದಲ್ಲಿ ಧರ್ಮಸ್ಥಾಪನೆಗಾಗಿ ಶ್ರೀ ಮಹಾ ವಿಷ್ಣುವು ಅವತಾರ ತಾಳುವನೆಂಬುದು ಯುಕ್ತಿಯುಕ್ತವಾಗಿ ಕಂಡುಬರುವುದು.

ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥

(ಭಗವದ್ಗೀತಾ ೪-೭)

ಧರ್ಮಸ್ಥಾಪನೆಗಾಗಿ ಈ ಶ್ರೀಕೃಷ್ಣನ ವಚನದಂತೆ ಆದ ಶ್ರೀ ಮಹಾ ವಿಷ್ಣುವಿನ ಹಲವು ಅವತಾರಗಳಲ್ಲಿ ಹತ್ತು ಅವತಾರಗಳು ಪ್ರಮುಖ ವಾದವು. ಆ ಅವತಾರಗಳಲ್ಲಿ ಶ್ರೀರಾಮನ ಅವತಾರವು ಏಳನೆಯದೆಂಬು ದಾಗಿ ಹೇಳುವರು. ಅಯೋಧ್ಯಾಕಾಂಡದ ಒಂದನೆಯ ಸರ್ಗದ ಏಳನೆಯ ಶ್ಲೋಕದಿಂದ ಶ್ರೀರಾಮನು ವಿಷ್ಣುವಿನ ಅವತಾರವೇ ಸರಿ ಎಂಬುದು ಮನಸ್ಸಿಗೆ ದಿಟವಾಗಿ ತೋರುವುದು.

ಸ ಹಿ ದೇವೈರುದೀರ್ಣಸ್ಯ ರಾವಣಸ್ಯ ವಧಾರ್ಥಿಭಿಃ ।
ಅರ್ಥಿತೋ ಮಾನುಷೇ ಲೋಕೇ ಜಜ್ಞೇ ವಿಷ್ಣುಃ ಸನಾತನಃ ॥ ೭ ॥

ದೃಪ್ತದುರಾತ್ಮನಾದ ರಾವಣನ ವಿನಾಶಕ್ಕಾಗಿ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟು ಈ ಮರ್ತ್ಯಲೋಕದಲ್ಲಿ ಸನಾತನನಾದ ಶ್ರೀ ವಿಷ್ಣುವು ಶ್ರೀರಾಮನ ರೂಪದಿಂದ ಅವತರಿಸಿದನೆಂಬುದು ಇದರರ್ಥವು.

ಬಲಮಾರೋಗ್ಯಮಾಯುಶ್ಚ ರಾಮಸ್ಯ ವಿದಿತಾತ್ಮನಃ ।
ದೇವಾಸುರ ಮನುಷ್ಯೇಷು ಸಗಂಧರ್ವೋರಗೇಷು ಚ ॥ ೫೨ ॥

ಆರಂಸತೇ ಜನಸ್ಸರ್ವೋ ರಾಷ್ಟ್ರೇ ಪುರವರೇ ತಥಾ ।
ಆಭ್ಯಂತರಶ್ಚ ಬಾಹ್ಯಶ್ಚ ಪೌರಜಾನಪದೋ ಜನಃ ॥ ೫೩ ॥

ಸ್ತ್ರಿಯೋ ವೃದ್ಧಾಸ್ತರುಣ್ಯಶ್ಚ ಸಾಯಂ ಪ್ರಾತಃ ಸಮಾಹಿತಾಃ ।
ಸರ್ವಾನ್ ದೇವಾನ್ನಮಸ್ಯಂತಿ ರಾಮಸ್ಯಾರ್ಥೇ ಮನಸ್ವಿನಃ ॥ ೫೪ ॥

(ವಾ. ರಾ. ಅ. ಸರ್ಗ ೨)

ಶ್ರೀರಾಮನ ಲೋಕಪ್ರಿಯತೆಯ ಭಾವನೆಯನ್ನು ಈ ಮೇಲಿನ ಶ್ಲೋಕಗಳ ಮೂಲಕ ಮಾಡಿಕೊಳ್ಳಬಹುದು. ತನ್ನ ಆತ್ಮರೂಪವಾಗಿ ಕಂಡುಬರುವ ಶ್ರೀರಾಮನಿಗೆ ಆಯುರಾರೋಗ್ಯ ಬಲ ಎಲ್ಲಾ ಸಂಪತ್ತು ಪ್ರಾಪ್ತವಾಗಲೆಂದೂ, ಈತನಿಗೆ ರಾಜ್ಯಾಭಿಷೇಕವಾಗಬೇಕೆಂದೂ ದೇವ-ದಾನವ-ಮನುಷ್ಯಾದಿಯಾಗಿ ಎಲ್ಲರೂ ಹವಣಿಸುತ್ತಿದ್ದರು. ಬಾಲ-ತರುಣ-ವೃದ್ಧ-ಸ್ತ್ರೀಯರೆಲ್ಲರೂ ತ್ರಿಕಾಲದಲ್ಲಿಯೂ ದೇವರ ಪ್ರಾರ್ಥನೆಯನ್ನು ಮಾಡುತ್ತಿದ್ದರು. ಇದೊಂದು ಲೋಕಪ್ರಿಯತೆಯ ಆದರ್ಶವು. ಮುಖಂಡ ರೆಲ್ಲಾ ಈ ವಿಧವಾಗಿ ಲೋಕಪ್ರಿಯರಾಗಿರಬೇಕು.

## ಆರ್ಯ ಸಂಸ್ಕೃತಿಯ ಆದರ್ಶಪುರುಷ ಶ್ರೀರಾಮ

ಈಗ ಆಯಾ ವಿವಿಧ ಪ್ರಸಂಗಗಳಲ್ಲಿ ಹೊರಟ ವಾಕ್ಯಗಳ ಮನನ ಮಾಡೋಣ. ಇದರಿಂದ ಈ ವರ್ಣನೆಗೆ ಅವನ ವರ್ತನೆಯ ಆಧಾರ ಸಿಗುವುದು. ಇದರಿಂದ ರಾಮರಾಜ್ಯವನ್ನು ಮಾಡಲು ಹವಣಿಸುವ ನಮ್ಮಗಳಿಗೆ ಮಾರ್ಗದರ್ಶನವಾಗುವುದು. ನಡೆ-ನುಡಿ, ನೋಟ, ನಗು, ಆಟ-ಪಾಟ, ಹಾಸ್ಯ-ವಿನೋದ ಮುಂತಾದ ಜೀವನದ ಪ್ರತಿಕ್ಷಣದಲ್ಲಿಯೂ ಯಾವಾತನ

ವಿಷಯದಲ್ಲಿ ನಿಖಿಲ ದುರ್ಗುಣಗಳಿಂದ ದೂರವಾದ ದಿವ್ಯ ವಿಭೂತಿಯ ಅರಿವು ಹುಟ್ಟುವುದೋ ಆತನೇ ಆರ್ಯ ಸಂಸ್ಕೃತಿಯ ಆದರ್ಶಪುರುಷನು. ಆಯಾ ಪ್ರಸಂಗಗಳಲ್ಲಿ ತಾನಾಗಿ ಹೊರಟ ಈತನ ನುಡಿಗಳು ಇತರರಿಗೆ ನೌಕೆಯಂತೆ ಪರಿಣಮಿಸುವುವು.

ಯಶ್ಚ ರಾಮಂ ನ ಪಶ್ಯೇತ್ತು ಯಂ ಚ ರಾಮೋ ನ ಪಶ್ಯತಿ ।
ನಿಂದಿತಃ ಸರ್ವಲೋಕೇಷು ಸ್ವಾತ್ಮಾಪ್ಯೇನಂ ವಿಗರ್ಹತೇ ॥ ೧೪ ॥
(ವಾ. ರಾ. ಅ. ಸರ್ಗ ೧೭)

ಯಾವಾತನು ರಾಮುನನ್ನು ನೋಡನೋ, ಯಾವನನ್ನು ರಾಮುನೇ ನೋಡನೋ ಆ ಮನುಷ್ಯನು ಲೋಕನಿಂದಿತನಾಗಿ ವಾಸಿಸುವನು. ಆತನ ಮನಸ್ಸೇ ಆತನನ್ನು ನಿಂದಿಸುವುದು.

## ಶ್ರೀರಾಮುನ ಲೋಕಪ್ರಿಯತೆ ಮುತ್ತು ಸರ್ವಸಮತ್ವ

ಸರ್ವೇಷು ಸ ಹಿ ಧರ್ಮಾತ್ಮಾ ವರ್ಣಾನಾಂ ಕುರುತೇ ದಯಾಮ್ ।
ಚತುರ್ಣಾಂ ಹಿ ವಯಸ್ಥಾನಾಂ ತೇನ ತೇ ತಮನುವ್ರತಾಃ ॥ ೧೫ ॥
(ವಾ. ರಾ. ಅ. ಸರ್ಗ ೧೭)

ಶ್ರೀರಾಮುನು ಎಲ್ಲಾ ವರ್ಣಗಳ ಜನರಲ್ಲಿಯೂ ದಯೆ ತೋರುವನು. ಆ ಧರ್ಮಾತ್ಮನು ಮುದುಕರಲ್ಲಿಯಂತೂ ವಿಶೇಷ ದಯೆ ತೋರಿಸುವನು. ಯಾವ ವರ್ಣದವನನ್ನೇ ಆಗಲಿ ದಯೆಯಿಂದ ನೋಡುವನು. ಆದುದರಿಂದ ಎಲ್ಲರೂ ಅವನನ್ನು ಹಿಂಬಾಲಿಸುತ್ತಿದ್ದರು. ಇದೊಂದು ಲೋಕನಾಯಕರ ಆದರ್ಶವು.

## ಶ್ರೀರಾಮುನ ಪಿತೃಭಕ್ತಿ

ಅತೋಷಯನ್ ಮಹಾರಾಜಮಕುರ್ವನ್ ವಾ ಪಿತುರ್ವಚಃ ।
ಮುಹೂರ್ತಮಪಿ ನೇಚ್ಛೇಯಂ ಜೀವಿತುಂ ಕುಪಿತೇ ನೃಪೇ ॥ ೧೫ ॥
ಯತೋ ಮೂಲಂ ನರಃ ಪಶ್ಯೇತ್ ಪ್ರಾದುರ್ಭಾವಮಿಹಾತ್ಮನಃ ।
ಕಥಂ ತಸ್ಮಿನ್ ನವರ್ತೇತ ಪ್ರತ್ಯಕ್ಷೇ ಸತಿ ದೈವತೇ ॥ ೧೬ ॥
(ವಾ. ರಾ. ಅ. ಸರ್ಗ ೧೮)

"ತಂದೆಯಾದ ದಶರಥ ಮಹಾರಾಜನಿಗೆ ಸಂತೋಷವನ್ನುಂಟು ಮಾಡದೆ— ಪಿತ್ರಾಜ್ಞೆಯನ್ನು ಪರಿಪಾಲಿಸದೆ— ತಂದೆಯ ರೋಷವನ್ನು

ಸಂಪಾದಿಸಿ ಒಂದು ಮುಹೂರ್ತವೂ ಸಹ ಜೀವಿಸಿರಲು ನಾನು ಇಚ್ಛಿಸು ವುದಿಲ್ಲ. ಯಾವಾತನ ಮೂಲಕವಾಗಿ ತನ್ನ ದೇಹದ ಉತ್ಪತ್ತಿಯಾಗಿರು ವುದೋ ಆತನೇ ಪ್ರತ್ಯಕ್ಷ ದೈವತವಾಗಿರಲು ಆತನ ವಶದಲ್ಲಿ ಯಾವಾತನು ತಾನೆ ಇರನು?" ಎಂಬೀ ಶ್ರೀರಾಮನ ವಾಕ್ಯಗಳು ಆದರ್ಶ ಪಿತೃಭಕ್ತಿ ಯಲ್ಲವೇ? ಈಗಿನ ತರುಣವರ್ಗಕ್ಕೆ ಇದು ಪಿತೃಭಕ್ತಿಯ ಒಂದು ಆದರ್ಶ ವಾಗುವುದಿಲ್ಲವೇ?

ಅಹಂ ಹಿ ವಚನಾದ್ರಾಜ್ಞಃ ಪತೇಯಮಪಿ ಪಾವಕೇ ॥ ೨೮ ॥
ಭಕ್ಷಯೇಯಂ ವಿಷಂ ತೀಕ್ಷ್ಣಂ ಮಜ್ಜೇಯಮಪಿ ಚಾರ್ಣವೇ ।
(ಪತೇಯಮಪಿ ಚಾರ್ಣವೇ)

ನಿಯುಕ್ತೋ ಗುರುಣಾ ಪಿತ್ರಾ ನೃಪೇಣ ಚ ಹಿತೇನ ಚ ॥ ೨೯ ॥

ತದ್ಬ್ರೂಹಿ ವಚನಂ ದೇವಿ ರಾಜ್ಞೋ ಯದಭಿಕಾಂಕ್ಷಿತಮ್ ।
ಕರಿಷ್ಯೇ ಪ್ರತಿಜಾನೇ ಚ ರಾಮೋ ದ್ವಿರ್ನಾಭಿಭಾಷತೇ ॥ ೩೦ ॥
(ವಾ. ರಾ. ಅ. ಸರ್ಗ ೧೮)

"ಪಿತನಾದ ಶ್ರೀ ದಶರಥ ಮಹಾರಾಜನ ಆಜ್ಞೆಯಾಗಲು ಧಗಧಗಿಸು ತ್ತಿರುವ ಅಗ್ನಿಜ್ವಾಲೆಯಲ್ಲಿಯೂ ಸಹ ನಾನು ಬೀಳುವೆನು. ಹಾಲಾಹಲ ವನ್ನು ಕೂಡ ಪಾನಮಾಡುವೆನು. ಸಮುದ್ರದಲ್ಲಿಯಾದರೂ ಮುಳುಗು ವೆನು. ನನ್ನ ಹಿತವನ್ನೇ ಕೋರುವ ಪಿತನೂ, ಗುರುವೂ ಆದ ಈ ಮಹಾ ರಾಜನಿಂದ ಏನಾಜ್ಞೆಯಾಗಿರುವುದೋ? ಅದನ್ನು ತಿಳಿಸು. ಮಹಾರಾಜನ ಇಚ್ಛೆಯೇನೆಂಬುದನ್ನು ತಿಳಿದು ಮಾಡುವನೋ ಮಾಡನೋ ಎಂಬ ಸಂದೇಹ ಬೇಡ. ಪಿತೃವಿನ ಇಚ್ಛೆಯಂತೆ ಮಾಡುತ್ತೇನೆ. ಇದು ನನ್ನ ಪ್ರತಿಜ್ಞೆ. ರಾಮನಲ್ಲಿ ಆಡಿದ ಮಾತಿಗೆ ಎರಡಿಲ್ಲ." ಈ ಶ್ಲೋಕಗಳಿಂದ ಶ್ರೀರಾಮನ ಪಿತೃಭಕ್ತಿ ಮತ್ತು ಸತ್ಯೈಕನಿಷ್ಠ ಮಿತಭಾಷಿತ್ವವು ವ್ಯಕ್ತ ವಾಗುವುದು.

## ಶ್ರೀರಾಮನ (ಸ್ಥಿತಪ್ರಜ್ಞತ್ವ) ಅಂತರಸ್ಥಿತಿ

ತದಪ್ರಿಯಮಮಿತ್ರಘ್ನೋ ವಚನಂ ಮರಣೋಪಮಮ್ ।
ಶ್ರುತ್ವಾ ನ ವಿವ್ಯಥೇ ರಾಮಃ ಕೈಕೇಯೀಂ ಚೇದಮಬ್ರವೀತ್ ॥ ೧೯ ॥

ನಾಹಮರ್ಥಪರೋ ದೇವಿ ಲೋಕಮಾವಸ್ತು ಮುತ್ಸಹೇ ।
ವಿದ್ಧಿ ಮಾಂ ಋಷಿಭಿಸ್ತುಲ್ಯಂ ವಿಮಲಂ ಧರ್ಮಮಾಸ್ಥಿತಂ ॥ ೨೦ ॥

ಯದತ್ರ ಭವತಃ ಕಿಂಚಿಚ್ಛಕ್ಯಂ ಕರ್ತುಂ ಪ್ರಿಯಂ ಮಯಾ ।
ಪ್ರಾಣಾನಪಿ ಪರಿತ್ಯಜ್ಯ ಸರ್ವಥಾ ಕೃತಮೇವ ತತ್ ॥ ೨೧ ॥

(ವಾ. ರಾ. ಅ. ಸರ್ಗ ೧೯)

ಬೇರೆಯವರಿಗೆ ಮೃತ್ಯುವಿನಂತೆ ಅಪ್ರಿಯವಾದ ಕೈಕೇಯಿಯ ಮಾತನ್ನು ಕೇಳಿ ಶ್ರೀರಾಮನ ಮುಖಕಾಂತಿಯು ಕುಗ್ಗಲಿಲ್ಲ. ಯಾವ ವ್ಯಥೆಯೂ ತೋರಿಬರಲಿಲ್ಲ. ರಾಜ್ಯಾಭಿಷಿಕ್ತನಾಗಲು ಬಂದ ಉತ್ಸಾಹ ಮತ್ತು ಆನಂದದ ಮುಖವು ಈಗಲೂ ಕಳೆಗುಂದದೆ ಇತ್ತು. ಆತ್ಮಸ್ಥಿತಿಯ ಮೇರೆ ಮೀರಿದ ಆನಂದದಲ್ಲಿ ಮೈ ಮರೆತಿರುವಾಗ ಬಾಹ್ಯಪ್ರಪಂಚದ ಸುಖ ದುಃಖಗಳಿಂದ ಆತ್ಮನಿಷ್ಠರ ಮನಸ್ಸು ಚಲಿಸದು. ಅದು ಗಾಳಿಯಿಲ್ಲದ ಸ್ಥಳದಲ್ಲಿರುವ ದೀಪದಂತೆ ಒಂದೇ ಪ್ರಕಾರವಾಗಿರುವುದೆಂಬ ಮಾತು ಇಲ್ಲಿ ಕಂಡುಬರುವುದು. ಇದು ಆತ್ಮನಿಷ್ಠರ ವ್ಯವಹಾರವನ್ನು ಕಾಣಿಸಿ ಇಡೀ ಪ್ರಪಂಚಕ್ಕೆ ಆದರ್ಶವೆನಿಸಿಕೊಳ್ಳುವುದು. ತನ್ನ ಸ್ಥಿತಿಯನ್ನು ತಾನು ಹೇಳಿಕೊಳ್ಳಬಾರದೆಂದು ಸಾಮಾನ್ಯ ನಿಯಮವಿದ್ದರೂ ಅಂಥಂಥ ಜನರ ಮುಂದೆ ಆಯಾ ಪ್ರಸಂಗದಲ್ಲಿ ಸತ್ಯಸ್ಥಿತಿಯನ್ನು ತಿಳುಹಿಸಿ ತತ್ತ್ವವನ್ನು ಉಳಿಸಲು ಯತ್ನಿಸಬೇಕಾಗಿ ಬರುವುದು. ಪ್ರಪಂಚದಲ್ಲಿ ಇಂತಹ ಕೆಲವೇ ಪ್ರಸಂಗಗಳು ಒದಗಿಬರುವುವು. ಅಪರಿಹಾರ್ಯವಾಗಿ ಮಾಡಲು ದೋಷವಿಲ್ಲ. ಅದು ಸತ್ಯ ತತ್ತ್ವದ ಆವಿಷ್ಕಾರವೇ ಸರಿ. ಇದೇ ಶ್ರೀರಾಮನು ಕೈಕೇಯಿಯನ್ನು ಕುರಿತು ಹೇಳಿದ ಮಾತಿನಿಂದ ಸ್ಪಷ್ಟವಾಗುವುದು. ಶ್ರೀರಾಮನ ಆದರ್ಶಭೂತವಾದ ಅಂತರಸ್ಥಿತಿಯು ಇದರಿಂದ ವ್ಯಕ್ತವಾಗುತ್ತಿದೆ.

ಶ್ರೀರಾಮನು "ಮಾತೇ, ಕೈಕೇಯಿ, ಪಿತ್ರಾಜ್ಞೆಯನ್ನು ಮೀರಿ ಇಲ್ಲಿ ಇರಲು ವೈಭವದ ಹುಚ್ಚಿನವನಲ್ಲ. ಐಹಿಕ ಸುಖದ ಯಾವ ಭಾವನೆಯೂ ನನಗಿಲ್ಲ. ಎಂದೆಂದಿಗೂ ಅಚ್ಚಳಿಯದೆ ಒಂದೇ ಪ್ರಕಾರವಾಗಿರುವ ನಿರವಧಿ ಆತ್ಮಾನಂದದಿಂದ ತೃಪ್ತಿಗೊಂಡಿರುವವನಿವನು. ಇದನ್ನೇ ಎಲ್ಲದಕ್ಕಿಂತಲೂ ಹೆಚ್ಚಿನ ಧರ್ಮಾಚರಣೆ ಎಂಬುದಾಗಿ ಇವನು ಭಾವಿಸಿರುವನು. ಈ ಕೇವಲ

ಧರ್ಮಾಚರಣೆಯಲ್ಲಿದ್ದ ಋಷಿಗಳಂತೆಯೇ ನಾನಿದ್ದೇನೆಂದು ತಿಳಿ. ನನ್ನ ದೇಹವನ್ನೇ ಬಿಟ್ಟು ಸಾಧಿಸುವುದು ಯಾವುದಾದರೂ ನಿನಗೆ ಪ್ರಿಯವಾಗಿದ್ದರೆ ಅದನ್ನೂ ಸಹ ಈ ರಾಮನು ಆನಂದದಿಂದ ಮಾಡಲು ಸರ್ವಥಾ ಸಿದ್ಧನಿದ್ದಾನೆ ಎಂದೇ ನಿಶ್ಚಯಿಸು.'' ಬ್ರಾಹ್ಮಣರ ಜ್ಞಾನಯುಕ್ತ ತ್ಯಾಗೀ ಜೀವನದ ಆದರ್ಶವನ್ನೇ ಮನಸ್ಸಿನಲ್ಲಿಟ್ಟುಕೊಂಡು ರಾಜರು ಇರುತ್ತಿದ್ದರೆಂಬುದು ಇದರಿಂದ ವ್ಯಕ್ತವಾಗುವುದು. ಅಲ್ಲವಾದರೆ ರಾಜ್ಯಭೋಗದ ಎಲ್ಲಾ ವಾಸನೆಯನ್ನು ತಟ್ಟನೆ ಬಿಟ್ಟು ಮುಪ್ಪಿನಲ್ಲಿ ಅಸಹಾಯನಾಗಿ ವಾನಪ್ರಸ್ಥಾಶ್ರಮಕ್ಕೆ ಅಡವಿಯನ್ನು ಸೇರುವುದು ರಾಜರುಗಳಿಗೆ ಸಾಧ್ಯವಾಗುತ್ತಿತ್ತೇ? ಅಖಿಲ ಮಾನವರಿಗೂ ಆದರ್ಶವಾದ ಆರ್ಯರ ತಾತ್ವಿಕ ದಿವ್ಯ ಜೀವನದ ಬಗ್ಗೆ ಇದೊಂದು ಉಜ್ವಲವಾದ ಉದಾಹರಣೆಯಲ್ಲವೇ?

## ಶ್ರೀರಾಮನ ಆತ್ಮಸ್ಥಿತಿ

ನ ಚಾಸ್ಯ ಮಹತೀಂ ಲಕ್ಷ್ಮೀಂ ರಾಜ್ಯನಾಶೋಽಪಕರ್ಷತಿ ।
ಲೋಕಕಾಂತಸ್ಯ ಕಾಂತತ್ವಾಚ್ಛೀತರಶ್ಮೇರಿವ ಕ್ಷಪಾ ॥ ೩೨ ॥

ನ ವನಂ ಗಂತುಕಾಮಸ್ಯ ತ್ಯಜತಶ್ಚ ವಸುಂಧರಾಮ್ ।
ಸರ್ವಲೋಕಾತಿಗಸ್ಯೇವ ಲಕ್ಷ್ಯತೇ ಚಿತ್ತವಿಕ್ರಿಯಾ ॥ ೩೩ ॥

(ವಾ. ರಾ. ಅ. ಸರ್ಗ ೧೯)

ಈ ಶ್ಲೋಕಗಳೂ ಸಹ ಇಹಲೋಕದ ವಿಷಯದಲ್ಲಿ ಶ್ರೀರಾಮನ ವೈರಾಗ್ಯ ಮತ್ತು ನಿತ್ಯನಿರ್ವಿಕಾರವಾದ ಆತ್ಮಾನಂದವನ್ನು ಗುರುತಿಸಿ ತಿಳಿಸುವುವು. ಸರ್ವಲೋಕಾಂತಕರನಾಗಿಯೂ, ಆಹ್ಲಾದಕರನಾಗಿಯೂ ಇದ್ದ ಅಮೃತರಶ್ಮಿ ಚಂದ್ರನ ಆ ನಿತಾಂತ ಶಾಂತವಾದ ಬೆಳದಿಂಗಳ ರಮಣೀಯ ಶೋಭೆಯನ್ನು ಕುಗ್ಗಿಸಲು ರಾತ್ರಿಯು ಶಕ್ತವಾಗದಂತೆ ಸಕಲ ಲೋಕಾಭಿರಾಮನಾದ ಶ್ರೀರಾಮಚಂದ್ರನ ಮುಖದ ಆ ಅನುಪಮೇಯ ದಿವ್ಯ ಕಾಂತಿಯನ್ನೂ, ಆತ್ಮಶಾಂತಿಯನ್ನೂ, ಆತ್ಮತೃಪ್ತಿಯನ್ನೂ ಕುಗ್ಗಿಸಲು ಆ ರಾಜ್ಯಭ್ರಂಶವು ಸ್ವಲ್ಪಮಾತ್ರಕ್ಕೂ ಶಕ್ತವಾಗಲಿಲ್ಲ. ಚಂದ್ರನ ಶಾಂತ ಶೀತಲ ರಶ್ಮಿಗಳಂತೆ ಆತನ ಆತ್ಮಾನಂದದ ನಿರುಪಮ ತೃಪ್ತಿಯು ಹೋದಲ್ಲೆಲ್ಲ ಆವನನ್ನು ಹಿಂಬಾಲಿಸುತ್ತಿತ್ತು. ಲೋಕಮನೋಹರನಾಗಿಯೂ

ಎಲ್ಲರ ನಿತಾಂತಶುದ್ಧ ಆನಂದರೂಪನಾಗಿಯೂ ಇರುವ ಶ್ರೀರಾಮನು ಎಲ್ಲಾ ಲೋಕದ ಪ್ರಿಯತಮತ್ವವನ್ನು ಪಡೆದನು. ಸಕ್ಕರೆಗೆ ಇರುವೆ ಮುತ್ತುವಂತೆ ಹೋದಲ್ಲಿಯೇ ಎಲ್ಲಾ ಜನರು ಆತನನ್ನು ಮುತ್ತುತ್ತಿದ್ದರು. ಆ ತಮ್ಮ ಶುದ್ಧರೂಪದ ಅನಂತ ಆನಂದವನ್ನು ಹೊಂದುತ್ತಿದ್ದರು. ತನ್ನ ನಿತ್ಯ ನಿರ್ವಿಕಲ್ಪವಾದ ಅನಂತ ಆನಂದದಿಂದ ಯಾವ ಕುಂದು ಕೊರತೆಯೂ ಇಲ್ಲದೆ ಬೆಳಗುತ್ತಿರುವ ಶ್ರೀರಾಮನಿಗೆ ಈ ರಾಜ್ಯಭ್ರಂಶದಿಂದ ಏನುತಾನೆ ಆಗತಕ್ಕದ್ದಿದೆ? ಸಮುದ್ರಕ್ಕೆ ಯಾವುದೋ ಒಂದು ನೀರಿನ ಬಿಂದುವು ಸೇರದೆಹೋಗುವಲ್ಲಿ ಸಮುದ್ರವು ಎಂತು ಸೊರಗದೋ ಅಂತೆಯೇ ಈ ರಾಜ್ಯಭ್ರಂಶದಿಂದ ಶ್ರೀರಾಮನ ಮುಖಶ್ರೀಯು ಸ್ವಲ್ಪವೂ ಕಳೆಗುಂದಲಿಲ್ಲ. ಸನಾತನ ಧರ್ಮದ ಈ ವೈಭವವು ಅಪಾರವಿದೆ.

ಸಮದುಃಖಸುಖ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ ॥

(ಗೀತಾ ೧೪-೨೪)

ಈ ಸ್ಥಿತಪ್ರಜ್ಞತ್ವವು ಇಲ್ಲಿ ಕಂಡುಬರುವುದು. '**ಮುಖಕಾನ್ತಿರ್ನನಶ್ಯತಿ**' ಎಂಬ ಜೀವನ್ಮುಕ್ತ ಲಕ್ಷಣವು ಇಲ್ಲಿ ಪ್ರಕಟವಾಗುವುದು.

ತಾನಾಗಿ ಪ್ರಾಪ್ತವಾಗುವ ರಾಜ್ಯಲಕ್ಷ್ಮಿಯನ್ನು ಸ್ವೀಕರಿಸಿ ಸ್ವರ್ಗದಲ್ಲಿ ಇಂದ್ರನಂತೆ ತನ್ನ ಇಷ್ಟಮಿತ್ರರಿಂದೊಡಗೂಡಿ ಮೆರೆದಾಡುವುದನ್ನು ಬಿಟ್ಟು ಕಷ್ಟಕರವಾದ, ಕಂಟಕಮಯವಾದ ಘೋರಾರಣ್ಯದ ಹಾದಿಯನ್ನು ಹಿಡಿದು ಹೋಗುವಂಥ ಪ್ರಸಂಗ ಒದಗಿದರೂ ಸ್ವಲ್ಪವೂ ಚಿತ್ತವೈಕಲ್ಯ ಶ್ರೀರಾಮನಲ್ಲಿ ತೋರಿಬರಲಿಲ್ಲ.

ಸುಖದುಃಖ ದಶಾ ಧೀರಂ ಸಾಮ್ಯಾನ್ನ ಪ್ರೋದ್ಧರಂತಿಯಮ್ ।
ನಿಶ್ವಾಸಾ ಇವ ಶೈಲೇಂದ್ರಂ ಚಿತ್ತಂ ತಸ್ಯ ಮೃತಂ ವಿದುಃ ॥

ಸುಖ ದುಃಖಗಳ ಪರಿಸ್ಥಿತಿಯು ಇರುವೆಯ ಶ್ವಾಸಗಳು ಮೇರುಪರ್ವತವನ್ನು ಅಲಗಾಡಿಸದಂತೆ ಸರ್ವಸಮತೆಯಿಂದ ಯಾವಾತನ ಚಿತ್ತವನ್ನು ಚಂಚಲ ಪಡಿಸದೋ ಆತನ ಚಿತ್ತವು ಮೃತವಾದುದೆಂದು ತಿಳಿಯಬೇಕು. ಹಗಲು ರಾತ್ರಿಯಂತೆ ಒಂದರ ಹಿಂದೊಂದು ಒದಗಿಬರುವ ಸುಃಖ ದುಃಖದ ಈ ಜೀವನದಲ್ಲಿ ಪ್ರತಿಯೊಬ್ಬರಿಗೂ ಇಂಥಾ ಆತ್ಮಸ್ಥಿತಿಯ ಆವಶ್ಯಕತೆ ಇದ್ದೇ

ಇರುವುದು. ಈ ಸ್ಥಿತಿಯ ಅಭ್ಯಾಸವನ್ನು ಮಾಡತಕ್ಕದ್ದು ವಿಶ್ವಧರ್ಮ ವಾಗಿದೆ.

ಶ್ರೀರಾಮನು ವನಕ್ಕೆ ಹೋಗುವನೆಂದು ತಿಳಿದನಂತರ "ಆರ್ತ ಶಬ್ದೋ ಮಹಾನ್ ಜಜ್ಞೇ" ಅಂತಃಪುರದ ಮಲತಾಯಂದಿರುಗಳಲ್ಲಿ ದೊಡ್ಡ ಹಾಹಾಕಾರವಾಯಿತು. ಆ ದುಃಖದಲ್ಲಿ ಅವರ ಮುಖದಿಂದ ಹೊರಟ ಶಬ್ದಗಳನ್ನು ವಿಚಾರಿಸಿದರೆ ಶ್ರೀರಾಮನ ತಾಳ್ಮೆ, ವಿವೇಕ ಮತ್ತು ಸಮತ್ವವು ವ್ಯಕ್ತವಾಗುವುದು.

ಕೌಸಲ್ಯಾಯಾಂ ಯಥಾ ಯುಕ್ತೋ ಜನನ್ಯಾಂ ವರ್ತತೇ ಸದಾ ।
ತಥೈವ ವರ್ತತೇಽಸ್ಮಾಸು ಜನ್ಮಪ್ರಭೃತಿ ರಾಘವಃ ॥ ೩ ॥
ನ ಕ್ರುಧ್ಯತ್ಯಭಿಶಪ್ತೋಽಪಿ ಕ್ರೋಧನೀಯಾನಿ ವರ್ಜಯನ್ ।
ಕ್ರುದ್ಧಾನ್ಪ್ರಸಾದಯನ್ ಸರ್ವಾನ್ ಸ ಇತೋಽದ್ಯ ಪ್ರವತ್ಸ್ಯತಿ ॥ ೪ ॥
(ವಾ. ರಾ. ಅ. ಸರ್ಗ ೨೦)

ಶ್ರೀರಾಮನು ಕೌಸಲ್ಯೆಯ ಸಂಗಡ ಎಷ್ಟು ವಿಧೇಯತೆಯಿಂದ ವರ್ತಿಸುವನೋ ಅಷ್ಟೇ ವಿಧೇಯತೆಯಿಂದ ಆತನು ನಮ್ಮೆಲ್ಲರ ಸಂಗಡವೂ ವರ್ತಿಸುವನು. ಆತನ ಮಾತೃಪ್ರೇಮದಲ್ಲಿ ತಾರತಮ್ಯಭಾವವು ಇಲ್ಲ. ಬಾಲ್ಯದಿಂದಲೂ ಅದು ಒಂದೇ ಪ್ರಕಾರವಾಗಿ ಇದೆ. ಯಾರಾದರೂ ಕಠಿನ ಮಾತನಾಡಿದರೂ ಕೋಪಿಸುವುದಿಲ್ಲ. ಸಿಟ್ಟಿಗೆ ಕಾರಣವಾಗುವ ಆಚರಣೆಯನ್ನು ತಾನು ಇಟ್ಟುಕೊಳ್ಳದೆ, ಉದ್ದೇಶಪೂರ್ವಕವಾಗಿ ಆಗ್ರಹ ಇಟ್ಟು ಕೋಪಗೊಂಡವರನ್ನು ತನ್ನ ನಯವಾದ ಸಿಹಿಮಾತಿನಿಂದ ಸಂತೈಸುವನು. ಕೈಕೇಯಿಯ ವಾಕ್ಯವೂ ಹೀಗೆ ಇದೆ.

## ಸಾಪತ್ನ ಆದರ್ಶ

ಸಾಪತ್ನ ಸಂಬಂಧದಲ್ಲೆಲ್ಲಾ ಇದೊಂದು ಅನುಕರಣೀಯ ಆದರ್ಶ. ಶ್ರೀರಾಮನ ವರ್ತನ ಕ್ರಮವನ್ನೂ ಸಾಪತ್ನ ಪುತ್ರರೆಲ್ಲಾ ಅನುಕರಿಸತಕ್ಕದ್ದು. ಆರ್ಯಸಂಸ್ಕೃತಿಯ ಇದೊಂದು ಲಕ್ಷಣ.

ರಾಮೇ ವಾ ಭರತೇ ವಾಹಂ ವಿಶೇಷಂ ನೋಪಲಕ್ಷಯೇ ।
ತಸ್ಮಾತ್ತುಷ್ಟಾಸ್ಮಿ ಯದ್ರಾಜಾ ರಾಮಂ ರಾಜ್ಯೇಽಭಿಷೇಕ್ಷ್ಯತಿ ॥ ೩೫ ॥
(ವಾ. ರಾ. ಅ. ಸರ್ಗ ೭)

"ಶ್ರೀರಾಮ ಮತ್ತು ಭರತ ಈ ಈರ್ವರಲ್ಲಿಯೂ ನನಗೆ ಭೇದವ್ಯ ಯಾವ ವಿಶೇಷವೂ ಕಾಣುವುದಿಲ್ಲ. ಆದುದರಿಂದ ಮಹಾರಾಜ ಶ್ರೀರಾಮನಿಗೆ ಪಟ್ಟಾಭಿಷೇಕವನ್ನು ಮಾಡುವರೆಂಬುದನ್ನು ಕೇಳಿ ನನ ತುಂಬಾ ಸಂತೋಷವಾಗಿದೆ." ಮೊದಲು ಮಂಥರೆಯು ಎಷ್ಟು ಹೇ ಳಿದರೂ ಕೈಕೇಯಿಯು ಕೇಳದೆ ಮತ್ತೂ ಶ್ರೀರಾಮನನ್ನೇ ಹೊಗಳಿರುವಳು

ಧರ್ಮಜ್ಞೋ ಗುರುಭಿರ್ದಾಂತಃ (ಗುಣವಾನ್ದಾಂತಃ) ಕೃತಜ್ಞಃ ಸತ್ಯವಾಕ್ಶುಚಿಃ
ರಾಮೋ ರಾಜ್ಞಸ್ಸುತೋ ಜ್ಯೇಷ್ಠೋ ಯೌವರಾಜ್ಯಮತೋಽರ್ಹತಿ ॥ ೧೪

ಭ್ರಾತೄನ್ ಭೃತ್ಯಾಂಶ್ಚ ದೀರ್ಘಾಯುಃ ಪಿತೃವತ್ ಪಾಲಯಿಷ್ಯತಿ ।
ಸಂತಪ್ಯಸೇ ಕಥಂ ಕುಬ್ಜೇ ಶ್ರುತ್ವಾ ರಾಮಾಭಿಷೇಚನಮ್ ॥ ೧೫

ಯಥಾ ಮೇ ಭರತೋ ಮಾನ್ಯಃ ತಥಾ ಭೂಯೋಽಪಿ ರಾಘವಃ ।
ಕೌಸಲ್ಯಾತೋಽತಿರಿಕ್ತಂ ಚ ಸೋಽನುಶುಶ್ರೂಷತೇ ಹಿ ಮಾಮ್ ॥ ೧೮

ರಾಜ್ಯಂ ಯದಿಹ ರಾಮಸ್ಯ ಭರತಸ್ಯಾಪಿ ತತ್ತಥಾ ।
ಮನ್ಯತೇ ಹಿ ಯಥಾತ್ಮಾನಂ ತಥಾ ಭ್ರಾತೄಂಸ್ತು ರಾಘವಃ ॥ ೧೯

(ವಾ. ರಾ. ಅ. ಸರ್ಗ ೮, ಶ್ಲೋಕ ೧೪--೧೫--೧೮--೧೯)

ಶ್ರೀರಾಮನು ಧರ್ಮಜ್ಞನು. ವಸಿಷ್ಠರಿಂದ ಒಳ್ಳೇ ಶಿಕ್ಷಿತನು ಕೃತಜ್ಞನೂ, ಸತ್ಯಭಾಷಿಯೂ, ಪರಿಶುದ್ಧನೂ ಆಗಿರುವನು. ಮಹಾರಾಜ ಜ್ಯೇಷ್ಠಪುತ್ರನು ಸಹ ಈತನಾದುದರಿಂದ ಯುವರಾಜ್ಯದ ಅಧಿಕಾರ ಈತನಿಗೆ ಇದೆ. ತಂದೆಯಂತೆ ಈತನು ತನ್ನ ಬಂಧು ಮತ್ತು ಭೃತ್ಯರನ್ನ ಪರಿಪಾಲಿಸುವನು. ತನ್ನ ಮುದ್ದಿನ ಮಗುವು ದೀರ್ಘಾಯುವಾಗಲಿ ರಾಮರಾಜ್ಯಾಭಿಷೇಕ ವಾರ್ತೆಯನ್ನು ಕೇಳಿ ನೀನೇಕೆ ಇಷ್ಟು ಬೇಸ ಯಾಗುತ್ತೀಯೆ. ಭರತನಿಗಿಂತಲೂ ಶ್ರೀರಾಮನ ಮೇಲೆಯೇ ನನ ಪ್ರೀತಿ ಹೆಚ್ಚು, ಆತನೂ ಸಹ ನನ್ನನ್ನು ಕೌಸಲ್ಯೆಗಿಂತಲೂ ಹೆಚ್ಚಾಗಿಯೆ ಕಾಣುವನು. ನನ್ನ ಸೇವೆಯನ್ನು ಮಾಡುವನು. ಶ್ರೀರಾಮನ ರಾಜ್ಯ ವಾದರೆ ಅದು ಭರತನ ರಾಜ್ಯವೂ ಆಗುವುದು. ಭರತನೇ ಯುವರಾಜ ನಾಗುವನಲ್ಲವೇ? ಶ್ರೀರಾಮನು ತನ್ನಂತೆಯೇ ಬಂಧುಗಳನ್ನು ಕಾಣುವನ ಇದಲ್ಲವೇ ಸಾಪತ್ನಭಾವವನ್ನು ಅಳಿಯಿಸುವ ಶ್ರೀರಾಮನ ಒಂದು ದಿ ಸ್ವಭಾವ ಮತ್ತು ದಿವ್ಯ ಆಚರಣೆ.

## ಶ್ರೀರಾಮನ ಧರ್ಮದೃಷ್ಟಿ

ಉಪಾಧ್ಯಾಯಾನ್ ದಶಾಚಾರ್ಯ ಆಚಾರ್ಯಾಣಾಂ ಶತಂ ಪಿತಾ ।
ಸಹಸ್ರಂತು ಪಿತೄನ್ಮಾತಾ ಗೌರವೇಣಾತಿರಿಚ್ಯತೇ ॥ (ಮನು ೨–೧೪೫)

ಉಪಾಧ್ಯಾಯನಿಗಿಂತಲೂ ಆಚಾರ್ಯನು ಹತ್ತುಪಾಲು ಹೆಚ್ಚು. ಈ ಆಚಾರ್ಯನಿಗಿಂತಲೂ ತಂದೆಯು ನೂರುಪಾಲು ಹೆಚ್ಚು. ತಂದೆಗಿಂತಲೂ ತಾಯಿಯು ಸಾವಿರಪಾಲು ಗೌರವದಿಂದ ಹೆಚ್ಚು ಎಂಬ ದೃಷ್ಟಿಯನ್ನು ಮುಂದಿಟ್ಟು ಬೆಂದ ಒಡಲಿನಿಂದ "ಪ್ರಲಾಪೋಽರ್ಥಶೂನ್ಯಃ" ಪ್ರಲಾಪವನ್ನು ಮಾಡುತ್ತ ನನ್ನ ಮಾತಿನ ಮೇಲೆ ನೀನಿರು ಎಂಬುದಾಗಿ ಕೌಸಲ್ಯೆಯು ಹೇಳುತ್ತಿರುವಾಗ ಶ್ರೀರಾಮನು ಧರ್ಮದೃಷ್ಟಿಯನ್ನು ಕೈಕೊಂಡು ತಾಯಿಯನ್ನು ಸಂತೈಸಿದ್ದಿದೆ. ತಾಯಿಯ ಯೋಗ್ಯತೆಯು ಹೆಚ್ಚು ಎಂದು ಹೇಳಿದರೂ ಸತಿಯು ಪತಿಯನ್ನು ಅನುಸರಿಸುವಳಾದುದರಿಂದ ಪರಶುರಾಮಾದಿ ಪುರಾಣ ಕಥೆಗಳಲ್ಲಿ ಮೊದಲು ತಂದೆಯ ಆಜ್ಞೆಯನ್ನು ಪರಿಪಾಲಿಸಿದ್ದುಂಟು ಎಂಬುದನ್ನು ಹಲವು ಐತಿಹಾಸಿಕ ಪ್ರಮಾಣಗಳಿಂದ ವಿವರಿಸಿ ಹೇಳಿರುವನು.

ಸನಕಾದಿಗಳ ಮತ್ತು ಧ್ರುವ ಪ್ರಹ್ಲಾದಾದಿಗಳ ಉದಾಹರಣೆಯನ್ನು ವಿಚಾರಿಸಲು ಮೋಕ್ಷಕ್ಕಾಗಿಯೂ ಪರಮಾತ್ಮ ಪ್ರಾಪ್ತಿಗಾಗಿಯೂ ತಾಯಿತಂದೆಯರ ಆಜ್ಞೆಯನ್ನು ಸಹ ಮೀರಬಹುದೆಂದಿದೆ. ಆ ವಿಷಯ ಪ್ರತ್ಯೇಕವಾದದ್ದು. 'ಗುರುರ್ಗರೀಯಾನ್‌ಪಿತೃತೋ ಮಾತೃತಶ್ಚೇತಿ ಮೇ ಮತಿಃ' (ಮಹಾಭಾರತ) ಮೋಕ್ಷದಾತನಾದ ಸದ್ಗುರುವು ತಾಯಿ ತಂದೆಗಳಿಗಿಂತಲೂ ಶ್ರೇಷ್ಠನಾದವನೆಂದು ಹೇಳಲ್ಪಟ್ಟಿದೆ.

ನಾಸ್ತಿ ಶಕ್ತಿಃ ಪಿತುರ್ವಾಕ್ಯಂ ಸಮತಿಕ್ರಮಿತುಂ ಮಮ ।
ಪ್ರಸಾದಯೇ ತ್ವಾಂ ಶಿರಸಾ ಗಂತುಮಿಚ್ಛಾಮ್ಯಹಂ ವನಂ ॥ ೩೦ ॥
(ವಾ. ರಾ. ಅ. ಸರ್ಗ ೨೧)

"ತಂದೆಯ ಆಜ್ಞೆಯನ್ನು ಉಲ್ಲಂಘಿಸಲು ನನಗೆ ಶಕ್ತಿ ಸಾಲದು. ತಂದೆಯ ಆಜ್ಞೆಯನ್ನು ಪರಿಪಾಲಿಸುವುದು ಧರ್ಮವೆಂದರಿತು ನಾನು ವನಕ್ಕೆ ಹೊರಟಿದ್ದೇನೆ. ನನ್ನನ್ನು ಆಶೀರ್ವದಿಸು. ನಿನಗೆ ಪತಿಯ ಆಜ್ಞೆ ನಡೆಸಿದಂತಾಗುವುದು. ಮತ್ತು ನನಗೆ ಪಿತ್ರಾಜ್ಞೆ ನಡಿಸಿದಂತಾಗುವುದು.

ನನಗೆ ನಿನ್ನ ಅನುಜ್ಞೆಯೂ ಆದರೆ ನಾನು ತಾಯಿ ತಂದೆ ಇಬ್ಬರ ಆಜ್ಞೆ
ಯನ್ನೂ ಪರಿಪಾಲಿಸಿದಂತಾಗುವುದು" ಎಂಬುದಾಗಿ ದೈನ್ಯದಿಂದ ಕೇಳಿ
ಕೊಂಡಿರುವನು.

ಧರ್ಮೋ ಹಿ ಪರಮೋ ಲೋಕೇ ಧರ್ಮೇ ಸತ್ಯಂ ಪ್ರತಿಷ್ಠಿತಂ ।
ಧರ್ಮಸಂಶ್ರಿತಮಪ್ಯೇತತ್ಪಿತುರ್ವಚನಮುತ್ತಮಂ ॥

ಸಂಶ್ರುತ್ಯ ಚ ಪಿತುರ್ವಾಕ್ಯಂ ಮಾತುರ್ವಾ ಬ್ರಾಹ್ಮಣಸ್ಯ ವಾ ।
ನ ಕರ್ತವ್ಯಂ ವೃಥಾ ವೀರ ಧರ್ಮಮಾಶ್ರಿತ್ಯ ತಿಷ್ಠತಾ ॥ ೪೩

(ವಾ. ರಾ. ಅ. ಸರ್ಗ ೨

ಜಗತ್ತಿನಲ್ಲಿ ಎಲ್ಲಕ್ಕಿಂತಲೂ ಧರ್ಮವೇ ಶ್ರೇಷ್ಠ. ಧರ್ಮದಂ
ನಡೆದರೆ ಅನಾಯಾಸವಾಗಿ ಸತ್ಯದ ಪರಿಪಾಲನೆಯಾಗುವುದು. ಧರ್ಮ
ದಲ್ಲಿಯೇ ಸತ್ಯವು ನೆಲೆಗೊಂಡಿದೆ. ತಂದೆಯ ಆಜ್ಞೆಯನ್ನು ಪರಿಪಾ
ಸುವುದು ಪುತ್ರಧರ್ಮವಷ್ಟೇ. ಧರ್ಮವನ್ನಾಶ್ರಯಿಸಿರತಕ್ಕವನು ತಂದೆ
ತಾಯಿ ಮತ್ತು ಬ್ರಾಹ್ಮಣರ ಆಜ್ಞೆಯನ್ನು ವಿಫಲಮಾಡಬಾರದು.

ಯಸ್ಮಿಂಸ್ತು ಸರ್ವೇಸ್ಯುರಸನ್ನಿವಿಷ್ಟಾಃ
ಧರ್ಮೋ ಯತಃ ಸ್ಯಾತ್ತದುಪಕ್ರಮೇತ ।
ದ್ವೇಷ್ಯೋ ಭವತ್ಯರ್ಥಪರೋ ಹಿ ಲೋಕೇ
ಕಾಮಾತ್ಮತಾ ಖಲ್ವಪಿ ನ ಪ್ರಶಸ್ತಾ ॥ ೫೮

(ವಾ. ರಾ. ಅ. ಸರ್ಗ ೨

ಧರ್ಮದ ಅನುಷ್ಠಾನ ನಡೆಯುವಲ್ಲಿ ಸೌಖ್ಯಾತಿಶಯಗಳ
ಈಯುವ ಎಲ್ಲಾ ಪುರುಷಾರ್ಥಗಳು ತಾನಾಗಿ ಕೈಸೇರುವುವು. ಎಲ್ಲಿ ಇಷ್ಟ
ವಿರುದ್ಧ ಅನುಭವ ಬರುವುದೋ ಅಂತಹ ಅಧರ್ಮದ್ಯೋತಕವಾ
ಕರ್ಮಗಳನ್ನು ಯಾರೂ ಉಪಕ್ರಮಿಸಬಾರದು. ಯಾವ ಕರ್ಮಗಳಿ
ಧರ್ಮವು ಸಾಂಗವಾಗಿ ಅದರ ಫಲಿತವಾದ ಎಲ್ಲಾ ಸುಖ ಸಂತೋಷಗ
ಲಭಿಸುವುವೋ ಅಂತಹ ಸತ್ಕರ್ಮಗಳಲ್ಲಿಯೇ ತೊಡಗಿರಬೇಕು. ಅಧರ್ಮ
ದಿಂದ ದ್ರವ್ಯವನ್ನು ಮಡಿದವನು ಹಲವು ಬಗೆಯಿಂದ ಸಮಾಜ
ದ್ರೋಹಕ್ಕೆ ಪಾತ್ರನಾಗುವನಲ್ಲದೆ ಆ ಹಣವೂ ಸಹ ಹೆಚ್ಚು ಕಾಲ ಉಳಿ
ಯದು. ಧರ್ಮ ವಿರುದ್ಧವಾಗಿ ಇರುವ ಕಾಮವು ನರಕಕ್ಕೆ ಕಾರಣ
ವಾದುದರಿಂದ ಹೇಗೂ ಪ್ರಶಸ್ತವಲ್ಲ.

ಯಶೋಹ್ಯಯಂ ಕೇವಲ ರಾಜ್ಯಕಾರಣಾನ್ನ ಪೃಷ್ಠತಃ
ಕರ್ತುಮಲಂ ಮಹೋದಯಂ । ಅದೀರ್ಘಕಾಲೇ ನ ತು ।
ದೇವಿ ಜೀವಿತೇ ವೃಣೇಽವರಾಮದ್ಯಮಹೀಮಧರ್ಮತಃ ॥ ೯೩ ॥
(ವಾ. ರಾ. ಅ. ಸರ್ಗ ೨೧)

"ಕೇವಲ ಒಂದು ತುಚ್ಛ ರಾಜ್ಯೋಪಭೋಗಕ್ಕಾಗಿ ಮಹಾಫಲರೂಪವಾದ ನನ್ನ ಯಶಸ್ಸನ್ನು ಕಳೆದುಕೊಳ್ಳಲು ನಾನು ಎಂದಿಗೂ ಉದ್ಯುಕ್ತನಾಗೆನು. ಮಿಂಚಿನಂತೆ ಕೆಲಕಾಲ ಹೊಳೆದು ಮೋಸಗೊಳಿಸುವ ಕ್ಷಣಬಾಳಿನ ಈ ಜೀವನದಲ್ಲಿ ತುಚ್ಛಫಲವನ್ನೀಯುವ ಈ ಪೃಥ್ವೀಸಾಮ್ರಾಜ್ಯವನ್ನು ಅಧರ್ಮದಿಂದ ಆಳಲು ಈ ರಾಮನು ಎಂದೆಂದಿಗೂ ಸಿದ್ಧನಾಗನು. ಧರ್ಮವಿರುದ್ಧ ಅರ್ಥಕಾಮದ ಪ್ರಾಪ್ತಿ ಅನರ್ಥಕರವಾದುದೆಂದು ತಿಳಿಯತಕ್ಕದ್ದು.

ನ ಬುದ್ಧಿಪೂರ್ವಂ ನಾಬುದ್ಧಂ ಸ್ಮರಾಮೀಹ ಕದಾಚನ ।
ಮಾತೃಣಾಂ ವಾ ಪಿತುರ್ವಾಹಂ ಕೃತಮಲ್ಪಂ ಚ ವಿಪ್ರಿಯಂ ॥ ೮ ॥
(ವಾ. ರಾ. ಅ. ಸರ್ಗ ೨೨)

ತಿಳಿದಾಗಲೀ, ತಿಳಿಯದಾಗಲೀ ನಾನು ಈವರೆಗೂ ತಾಯಿ-ತಂದೆಗಳಿಗೆ ಅಪ್ರಿಯವೆನಿಸಿದ್ದನ್ನು ಸ್ವಲ್ಪವೂ ಆಚರಿಸಿದ್ದಿಲ್ಲ." ಎಲ್ಲ ಸುಪುತ್ರರಿಗೆ ಅನುಕರಿಸಲು ಶ್ರೀರಾಮನ ಈ ಮಾತು, ಈ ಆಚರಣೆ ಮೇಲ್ಪಂಕ್ತಿಯಾಗಿರುವುದಲ್ಲವೇ? ಆದರ್ಶ ಪುತ್ರನ ಪಾವನಚರಿತವಿದು.

ಸತ್ಯಮೇಕಪದಂ ಬ್ರಹ್ಮ ಸತ್ಯೇ ಧರ್ಮಃ ಪ್ರತಿಷ್ಠಿತಃ ।
ಸತ್ಯಮೇವಾಕ್ಷಯಾ ವೇದಾಃ ಸತ್ಯೇನಾವಾಪ್ಯತೇ ಪರಮ್ ॥ ೭ ॥
(ವಾ. ರಾ. ಅ. ಸರ್ಗ ೧೪)

## ದುರ್ದಮ್ಯ ದೈವೀ ವಿಲಾಸ

ಸತ್ಯವೇ ಒಂದು ಮುಖ್ಯ ಪದವು. ಸತ್ಯವೇ ಪ್ರಾಪ್ಯವಾದಂಥ ಬ್ರಹ್ಮವು. ಸತ್ಯವೇ ಧರ್ಮದ ಪರಾಕಾಷ್ಠೆಯ ಸ್ವರೂಪವು. ಅಕ್ಷಯವಾದ ವೇದಗಳು ಸತ್ಯವನ್ನೇ ಪ್ರತಿಪಾದಿಸುವುವು. ಮೇರೆ ಮೀರಿದ ಪ್ರಯೋಜನರೂಪವಾದ ಮೋಕ್ಷವೂ ಸಹ ಸತ್ಯದಿಂದಲೇ ಲಭಿಸುವುದು. ಈ ಕೈಕೇಯಿಯ ವಾಕ್ಯವನ್ನು ನೋಡಿದರೆ ಅವಳು ಸಾಮಾನ್ಯಳಾದ ಒಬ್ಬ

ಅವಿವೇಕಿ ಹೆಂಗಸು ಎಂದು ಹೇಳಲಾಗುವುದಿಲ್ಲ. ಇಂತಹ
'ತ್ವಯಾರಣ್ಯಂ ಪ್ರವೇಷ್ಟವ್ಯಂ' ಈ ಪ್ರಕಾರವಾಗಿ ಮಾತನಾಡಬೇಕಾ
ಇದು ದೈವವಿಲಾಸವೇ ಸರಿ. ಬೆಳಗಾಗುವುದೇ ತಡ, ಪಟ್ಟಾಭಿಷೇ
ಮಿಕ್ಕ ಎಲ್ಲಾ ಸಿದ್ಧತೆಯೂ ಆಗಿತ್ತು. ಯಾರ ಕನಸು ಮನಸ್ಸಿನಲ್ಲಿ
ಇರದ ವಾರ್ತೆಯು ಒಮ್ಮೆಲೇ ಕೇಳಿಬಂದಿತು. ಎಲ್ಲರ ಉತ್ಸಾಹವು
ತ್ಸಾಹದ ಧಾಳಿಯಿಂದ ನಷ್ಟವಾಯಿತು. ಶ್ರೀರಾಮನಿಗೆ ಪಟ್ಟವಾ
ಬದಲು ವನವಾಸವಾಯಿತು. ಶೃಂಗರಿಸಿರುವ ಅಯೋಧ್ಯೆಯ ಮಧ್ಯದ
ರಾಜ್ಯಾಭಿಷೇಕವನ್ನು ಕಣ್ಣುತುಂಬ ನೋಡಿ ಮನಸ್ಸಿನ ಬಯಕೆಯ
ಪೂರ್ಣಪಡಿಸಲು ಬಂದ ಜನರ ಕಣ್ಣುಮುಂದೆ ಸೀತಾ ಲಕ್ಷ್ಮಣರ
ಒಡಗೂಡಿ ಶ್ರೀರಾಮನು ಮುನಿಯ ವೇಷವನ್ನು ಧರಿಸಿ ಕಾ
ಹೊರಟನು. ಇದಕ್ಕೆ ದೈವ ಅಥವಾ ವಿಧಿಯೆಂದು ಹೇಳದೆ ಮತ್ತೇ
ಹೇಳಲಿಕ್ಕೆ ಬರುವಂತಿದೆ? ಯಾವ ವಿಚಾರಕ್ಕೂ ಅವಕಾಶವಿರದೆ
ರೀಕ್ಷಿತವಾಗಿ(ಅಕಸ್ಮಾತ್ತಾಗಿ) ಒದಗಿ ಅನುಭವಿಸಬೇಕಾಗಿ ಬರುವ ಇಂ
ಪರಿಸ್ಥಿತಿಯಲ್ಲಿ ಸುಮ್ಮನೆ ದೈವ ಎಂದು ಹೇಳಿ ಸಮಾಧಾನಮಾಡಿಕೊ
ಹೊರತಾಗಿ ಮತ್ತೆ ಯಾವ ಪ್ರಯತ್ನಕ್ಕೂ ಇಲ್ಲಿ ಅವಕಾಶವೇ ಇರ
"ದುರ್ದಮ್ಯ ದೈವೀ ವಿಲಾಸ"ವೆಂದು ಇದರ ಹೆಸರು.

ಶ್ರೀರಾಮನು ಲಕ್ಷ್ಮಣನನ್ನು ಸಂತೈಸಲು ಆತನಿಗೆ ಬಹು ಪರಿಯ
ಉಪದೇಶವನ್ನು ಮಾಡಿದ ಸಂದರ್ಭಗಳಲ್ಲಿ ಇದೊಂದು. ಇದು ೨೨ನೇ
ಸರ್ಗದಲ್ಲಿ ಪ್ರಾರಂಭವಾಗುವುದು. ಕೆಲವು ಶ್ಲೋಕಗಳನ್ನು ಪರಿಶೀಲಿಸೋ

> ಜಾನಾಸಿ ಹಿ ಯಥಾ ಸೌಮ್ಯ ನ ಮಾತೃಷು ಮಮಾಂತರಮ್ ।
> ಭೂತಪೂರ್ವಂ ವಿಶೇಷೋ ವಾ ತಸ್ಯಾ ಮಯಿ ಸುತೇಽಪಿ ವಾ ॥ ೧೧
>
> ಸೋಽಭಿಷೇಕ ನಿವೃತ್ತ್ಯರ್ಥೈಃ ಪ್ರವಾಸಾರ್ಥೈಃ ಸುದುರ್ವಚೈಃ ।
> ಉಗ್ರೈರ್ವಾಕ್ಯೈರಹಂ ತಸ್ಯಾ ನಾನ್ಯದ್ದೈವಾತ್ಸಮರ್ಥಯೇ ॥ ೧೧
>
> (ವಾ. ರಾ. ಅ. ಸರ್ಗ

"ಲಕ್ಷ್ಮಣಾ, ನೋಡು, ಇದು ನಿನಗೆ ಗೊತ್ತಿದ್ದ ಮಾತೇ
ಇಂದಿನವರೆಗಾದರೂ ನನ್ನಲ್ಲಿ ಮತ್ತು ಕೈಕೇಯಿಲ್ಲಿ ಯಾವುದೇ ಒ
ಮಾತಿಗಾದರೂ ಮತಭೇದವಾದುದುಂಟೇ? ಇಲ್ಲ. ಭರತ

ಮತ್ತು ನನ್ನಲ್ಲಿ ಅವಳಿಗೆ ಒಂದೇ ಪ್ರಕಾರವಾಗಿ ಪ್ರೀತಿಯಿತ್ತಲ್ಲವೇ? ಸ್ವಲ್ಪವೂ ಹೆಚ್ಚು-ಕಡಿಮೆಯೆಂಬುದು ಕಂಡುಬರಲಿಲ್ಲವಷ್ಟೇ? ಹೀಗಿರುವಾಗ ಕೈಕೇಯಿಯು ನನಗೆ ಪಟ್ಟಾಭಿಷೇಕವಾಗಬಾರದು ಮತ್ತು ನಾನು ಅರಣ್ಯಕ್ಕೆ ಹೋಗಬೇಕು ಎಂಬ ವಿಷಯದಲ್ಲಿ ತೊಟ್ಟ ಹಠವನ್ನೂ, ಪಡುವ ಆಗ್ರಹವನ್ನೂ ನೋಡು. ಅವಳ ಆ ಪ್ರಕಾರದ ವಾತ್ಸಲ್ಯವು ಈವಾಗ ಎಲ್ಲಿ ಅಡಗಿತೆಂದು ಹೇಳಲು ಸಾಧ್ಯವಾಗದು. ಕೈಕೇಯಿಯು ಸಾಮಾನ್ಯಳಲ್ಲ. ಧರ್ಮಾಧರ್ಮ ವಿಚಾರವನ್ನೆಲ್ಲ ತಿಳಿದವಳು. ಅಂತಹುದರಲ್ಲಿ ತನ್ನ ಪತಿಯ ಮುಂದೆ ಅಶಿಕ್ಷಿತ ಹಠವಾದಿಯಾದ ಸಾಮಾನ್ಯ ಓರ್ವ ಸ್ತ್ರೀಯಂತೆ ಈ ವಿಧವಾಗಿ ವರ್ತಿಸುವುದನ್ನೂ ಮತ್ತು ಮಾತನಾಡುವುದನ್ನೂ ನೋಡಿದರೆ "ದೈವೀ ವಿಚಿತ್ರಾಗತಿಃ" ಎನ್ನುವುದರ ಹೊರತಾಗಿ ಲಕ್ಷ್ಮಣಾ ಇನ್ನೇನನ್ನು ಹೇಳಲು ಸಾಧ್ಯ? ತಂದೆ ಮಹಾರಾಜನ ಪ್ರೇಮವೂ ಕೂಡ ಸಾಮಾನ್ಯವೇ? ದೇವಾಸುರರ ಯುದ್ಧದಲ್ಲಿ ಕೈಕೇಯಿಯ ಸಾಹಸಕ್ಕೆ ಮೆಚ್ಚಿ ಕೊಟ್ಟ ವರವು ಈ ವಿಧವಾಗಿ ಅಡ್ಡಗಟ್ಟಬಹುದೆಂದು ಆತನ ಕನಸು ಮನಸ್ಸಿನಲ್ಲಿಯೂ ಇರಲಿಲ್ಲ. ಅದೆಲ್ಲಾ ಸಮಯ ಸಾಧಿಸಿ ಒದಗಬೇಕಾದರೆ ದೈವವಲ್ಲದೆ ಮತ್ತೇನು ಲಕ್ಷ್ಮಣಾ?

ಯದಚಿಂತ್ಯಂ ತು ತದ್ದೈವಂ ಭೂತೇಷ್ವಪಿ ನ ಹನ್ಯತೇ ।
ವ್ಯಕ್ತಂ ಮಯಿ ಚ ತಸ್ಯಾಂ ಚ ಪತಿತೋ ಹಿ ವಿಪರ್ಯಯಃ ॥ ೨೦ ॥

ಕಶ್ಚ ದೈವೇನ ಸೌಮಿತ್ರೇ ಯೋದ್ಧುಮುತ್ಸಹತೇ ಪುಮಾನ್ ।
ಯಸ್ಯ ನ ಗ್ರಹಣಂ ಕಿಂಚಿತ್ಕರ್ಮಣೋಽನ್ಯನ್ನ ದೃಶ್ಯತೇ ॥ ೨೧ ॥

ಸುಖದುಃಖೇ ಭಯಕ್ರೋಧೌ ಲಾಭಾಲಾಭೌ ಭವಾಭವೌ ।
ಯಸ್ಯ ಕಿಂಚಿತ್ತಥಾ ಭೂತಂ ನನು ದೈವಸ್ಯ ಕರ್ಮ ತತ್ ॥ ೨೨ ॥

(ವಾ. ರಾ. ಅ. ಸರ್ಗ ೨೨)

ನೋಡು, ವಿಚಾರಮಾಡು. ಪೂರ್ವಾಪರ ಯಾವ ಸೂಚನೆಯೂ ಇಲ್ಲದೆ ತಟ್ಟನೆ ಒದಗುವ ವಿಷಮಪರಿಸ್ಥಿತಿಯ ಕಾರಣವು ಈ ಜೀವನ ವ್ಯವಹಾರದಲ್ಲೇನೂ ತೋರದಿರುವಾಗ ಅದಕ್ಕೆ ದೈವೀಸಂಕಲ್ಪ, ದೈವ, ಈಶ್ವರೇಚ್ಛೆ, ಪೂರ್ವಕರ್ಮ, ಭವಿತವ್ಯತೆ ಇತ್ಯಾದಿಯಾಗಿ ಹೇಳುವರು. ಇದರ ಪ್ರಭಾವ ಕೂಡ, ಅಚಿಂತ್ಯವಾದುದು. ಇದನ್ನು ಮೀರಲು

ಯಾರಿಂದಲೂ ಸಾಧ್ಯವಿಲ್ಲ. ಯಾವ ತಡೆಯಿಲ್ಲದೆ ಎಲ್ಲರ ಜೀವನದಲ್ಲಿ ಈ ಪ್ರಭಾವವನ್ನು ಕಾಣಿಸುವಂತಹದಿದು. ನನಗೆ ಪ್ರಾಪ್ತವಾಗುವ ಪಟ್ಟ ದೂರವಾಗುವುದಕ್ಕೂ, ನನ್ನ ಮೇಲಿದ್ದ ಕೈಕೇಯಿಯ ವಾತ್ಸಲ್ಯವು ಒಮ್ಮೆ ನಷ್ಟವಾಗುವುದಕ್ಕೂ ಇದೇ ಕಾರಣವಲ್ಲದೆ ಮತ್ತೊಂದಿಲ್ಲ. ತನ್ನ ಕಾ ಆದಮೇಲೆ ಕಾಣಿಸಿಕೊಳ್ಳುವ ಇದರ ವಿಷಯದಲ್ಲಿ ಯಾವಾತನು ತಾನೆ ಏ ಮಾಡಬಲ್ಲನು? ಮೊದಲು ಗುಪ್ತನಾಗಿದ್ದು ಯಾವ ಪೂರ್ವ ಸೂಚನೆ ಇಲ್ಲದೆ ಮಾಡುವಂತಹದ್ದನ್ನೆಲ್ಲ ಪೂರೈಸಿಯೇ ಕಾಣಿಸಿಕೊಳ್ಳುವ ಈ ದೈ ವಿಚಾರದಲ್ಲಿ ಮುಂಜಾಗ್ರತೆಯನ್ನು ಇಟ್ಟುಕೊಳ್ಳುವುದಾದರೂ ಹೇಗೆ? ಎ ಧೀರರಾದರೂ ಇದರ ಮುಂದೆ ಎಲ್ಲರೂ ಸೋತುಹೋಗುವುದೇ ಸರಿ. ಈ ನಿವಾರಣೆಯನ್ನು ಹೇಗೆತಾನೆ ಮಾಡುವುದು? ಪೂರ್ವಾಪರ ಸೂ ಯಿಲ್ಲದೆ ಫಕ್ಕನೆ ಒದಗುವ ಸುಖದುಃಖಾದಿಗಳಿಗೂ, ಭಯ ಕ್ರೋಧ ಗಳಿಗೂ, ಲಾಭ ಹಾನಿಗಳಿಗೂ, ಉತ್ಪತ್ತಿ ನಾಶಗಳಿಗೂ ಈ ಅದೃಶ್ಯ ದೈವ ಕಾರಣವಲ್ಲದೆ ಮತ್ತೇನು?

ಅಸಂಕಲ್ಪಿತಮೇವೇಹ ಯದಕಸ್ಮಾತ್ಪ್ರವರ್ತತೇ ।
ನಿವರ್ತ್ಯಾರಬ್ಧಮಾರಂಭೈರ್ನನು ದೈವಸ್ಯ ಕರ್ಮ ತತ್ ॥ ೨೧

(ವಾ. ರಾ. ಅ. ಸರ್ಗ ೨

ಪೂರ್ವಾಪರ ವಿಮರ್ಶವಿರದೆ ಅನಿರೀಕ್ಷಿತವಾಗಿ ಅದರ ಯಾ ಕುರುಹು ಕಲ್ಪನೆಯೂ ಇರದೆ ಪ್ರಾರಂಭಮಾಡಿದ ಕಾರ್ಯವನ್ನು ನಿ ಪಡಿಸಿ ತಾನು ಫಕ್ಕನೆ ಯಾವದು ಮುಂದೆ ಬಂದು ನಿಲ್ಲುವದೋ ಅ "ದೈವ" ಅಥವಾ "ಭವಿತವ್ಯ" ಎಂಬುದಾಗಿ ತಿಳಿ. ಇದನ್ನು ನಿವಾ ಯಾರಿಂದಲೂ ಅಸಾಧ್ಯವಾದುದರಿಂದ ಇದನ್ನು ದೈವೀಸಂಕಲ್ಪ ಅಥ ಈಶಸಂಕಲ್ಪವೆಂತಲೂ ಹೇಳುವರು." ಇಲ್ಲಿ ದೈವಾದಿ ಏಕಾರ್ಥಕ ಶಬ್ದ ವಿವರಣೆಯನ್ನು ಶ್ರೀರಾಮನ ಮುಖದಿಂದಲೇ ತಿಳಿದುಕೊಳ್ಳಲು ಅವಕಾ ವಿರುವುದು. ಪುತ್ರಶೋಕದಿಂದ ಬೆಂದ ಪತಿಯ ಸೇವೆಯಲ್ಲಿರುವುದಕ್ಕಾ ತಾಯಿಯಾದ ಕೌಸಲ್ಯೆಗೆ ತನ್ನ ಜೊತೆಗೆ ಬಾರದೆ ಇರಲು ಹೇಳಿ ಸ ಧರ್ಮವನ್ನು ವಿಶದೀಕರಿಸುವಾಗ ಆತನ ಮುಖದಿಂದ ಬಂದ ಕೆಲ ನುಡಿಗಳನ್ನಾರಿಸಿ ಸತೀಧರ್ಮಗಳನ್ನು ತಿಳಿಯೋಣ.

## ರಾಮನು ನುಡಿದ ಸತೀ ಧರ್ಮ

ವ್ರತೋಪವಾಸನಿರತಾ ಯಾ ನಾರೀ ಪರಮೋತ್ತಮಾ ।
ಭರ್ತಾರಂ ನಾನುವರ್ತೇತ ಸಾ ಚ ಪಾಪಗತಿರ್ಭವೇತ್ ॥ ೨೫ ॥

ಭರ್ತುಃ ಶುಶ್ರೂಷಯಾ ನಾರೀ ಲಭತೇ ಸ್ವರ್ಗಮುತ್ತಮಮ್ ।
ಅಪಿ ಯಾ ನಿರ್ನಮಸ್ಕಾರಾ ನಿವೃತ್ತಾ ದೇವಪೂಜನಾತ್ ॥ ೨೬ ॥

ಶುಶ್ರೂಷಾಮೇವ ಕುರ್ವೀತ ಭರ್ತುಃ ಪ್ರಿಯಹಿತೇ ರತಾ ।
ಏಷ ಧರ್ಮಃ ಪುರಾದೃಷ್ಟೋ ಲೋಕೇ ವೇದೇ ಶ್ರುತಃ ಸ್ಮೃತಃ ॥ ೨೭ ॥
(ವಾ. ರಾ. ಅ. ಸರ್ಗ ೨೪)

ಏಷ ಧರ್ಮಃ ಸ್ತ್ರಿಯಾ ನಿತ್ಯೋ ವೇದೇ ಲೋಕೇ ಶ್ರುತಃ ಸ್ಮೃತಃ ॥
(ಪಾಠಾಂತರ)

ವ್ರತೋಪವಾಸಗಳನ್ನು ಮಾಡಿ ಉತ್ಕೃಷ್ಟ ಆಚಾರಸಂಪನ್ನಳೂ, ಗುಣಾಢ್ಯಳೂ ಆಗಿದ್ದು ತನ್ನ ಪತಿಯನ್ನು ಅನುಸರಿಸಿಹೋಗುವ ಸ್ವಭಾವ ವಿರದಿದ್ದರೆ ಅವಳು ಪಾಪಿಗಳ ಗತಿಯನ್ನೇ (ನರಕವನ್ನೇ) ಸೇರುವಳು. ಇದಕ್ಕೆ ಅನುಗುಣವಾಗಿ ಶ್ರೀ ಸೀತಾದೇವಿಯ ವಚನಗಳು ಈ ಪ್ರಕಾರ ಇವೆ:

ಆರ್ಯಪುತ್ರ ಪಿತಾ ಮಾತಾ ಭ್ರಾತಾ ಪುತ್ರಸ್ತಥಾ ಸ್ನುಷಾ ।
ಸ್ವಾನಿ ಪುಣ್ಯಾನಿ ಭುಂಜಾನಾಃ ಸ್ವಂ ಸ್ವಂ ಭಾಗ್ಯಮುಪಾಸತೇ ॥ ೪ ॥

ಭರ್ತುರ್ಭಾಗ್ಯಂತು ಭಾರ್ಯೈಕಾ ಪ್ರಾಪ್ನೋತಿ ಪುರುಷರ್ಷಭ ।
ಅತಶ್ಚೈವಾಹಮಾದಿಷ್ಟಾ ವನೇ ವಸ್ತವ್ಯಮಿತ್ಯಪಿ ॥ ೫ ॥

ನ ಪಿತಾ ನಾತ್ಮಜೋ ವಾತ್ಮಾ ನ ಮಾತಾ ನ ಸಖೀಜನಃ ।
ಇಹ ಪ್ರೇತ್ಯ ಚ ನಾರೀಣಾಂ ಪತಿರೇಕೋ ಗತಿಃ ಸದಾ ॥ ೬ ॥
(ವಾ. ರಾ. ಅ. ಸರ್ಗ ೨೭)

ಪೂರ್ವದಲ್ಲಿ ವಿಶೇಷವಾಗಿ ಸತಿಯು ಪತಿಯನ್ನು ಸಂಬೋಧಿಸುತ್ತಿರುವಾಗ 'ಆರ್ಯಪುತ್ರ' ಎಂಬ ಗೌರವದ ಹೆಸರಿನಿಂದ ಸಂಬೋಧಿಸುವುದು ಇತ್ತು. ಎಲ್ಲಾ ಆದರ್ಶಗುಣಗಳಿಂದ ಕೂಡಿದವನೆಂಬ ಗರ್ಭಾರ್ಥವು ಈ ಶಬ್ದಪ್ರಯೋಗದಲ್ಲಿದೆ. "ಆರ್ಯಪುತ್ರ ಶ್ರೀರಾಮಾ, ತಾಯಿ, ತಂದೆ, ಅಣ್ಣ, ತಮ್ಮ, ಮಗ, ಸೊಸೆ ಇವರು ಅವರವರ ಕರ್ಮಪ್ರಾಪ್ತವಾದ

ಸುಖ-ದುಃಖಗಳನ್ನೂ, ಹಾನಿ-ವೈಭವಗಳನ್ನೂ ಸ್ವತಂತ್ರವಾಗಿ ಅನುಭವಿಸು ವರು. ಅರ್ಧಾಂಗಿಯೆನಿಸಿದ ಸತಿಯೊಬ್ಬಳೇ ಮಾತ್ರ ಪತಿಯ ಸುಖ-ದುಃಖ, ಹಾನಿ-ಲಾಭಗಳಲ್ಲಿ ಪಾಲುಗಾರಳಾಗುವಳು. ಇಹದಲ್ಲಾಗಲೀ, ಪರ ದಲ್ಲಾಗಲೀ ಸತಿಗೆ ಪತಿಯೇ ಒಂದು ಗತಿಯಲ್ಲದೆ ತಾಯಿಯೂ ಅಲ್ಲ, ತಂದೆಯೂ ಅಲ್ಲ, ಪುತ್ರಪುತ್ರಿಯರೂ ಅಲ್ಲ, ಸಖೀಜನರೂ ಅಲ್ಲ. ದೇಹ ವರ್ಜಿತವಾದುದರಿಂದ ಅಸ್ವತಂತ್ರವಾದ ಈ ದೇಹವೂ ಅಲ್ಲ. ಆದುದರಿಂದ ಈ ಸೀತೆಯು ಶ್ರೀರಾಮನ ಜೊತೆಗೆ ಬರುವವಳೇ ಸರಿ.'' ಸತಿ-ಪತಿಗಳ ಆದರ್ಶ ಸಹಯೋಗಕ್ಕೆ ಇದೊಂದು ಆದರ್ಶ.

## ಮನುಷ್ಯನ ಆದರ್ಶ ಗುಣಗಳು

ಶ್ರೀರಾಮ, ಸೀತೆ, ಲಕ್ಷ್ಮಣ ಈ ಮೂವರೂ ವನಕ್ಕೆ ಹೋಗುವ ಸಿದ್ಧತೆಯಿಂದ ಪಾದಚಾರಿಗಳಾಗಿ ಹೊರಟಾಗ ನಗರದ ಜನರೆಲ್ಲಾ ಅವರನ್ನು ನೋಡಿ ವಿಧವಿಧವಾಗಿ ಮಾತನಾಡಿಕೊಳ್ಳುವುದರಲ್ಲಿ ಶ್ರೀರಾಮನ ಚಾರಿತ್ರ್ಯ ವರ್ಣನೆಯು ಬಂದಿರುವುದು. ಆ ಶ್ಲೋಕಗಳನ್ನು ನೋಡೋಣ. ಇದರಿಂದ ಮನುಷ್ಯರ ಆದರ್ಶ ಗುಣಗಳು ತಿಳಿದುಬರುವುವು.

ನಿರ್ಗುಣಸ್ಯಾಪಿ ಪುತ್ರಸ್ಯ ಕಥಂ ಸ್ಯಾದ್ವಿಪ್ರವಾಸನಮ್ ।
ಕಿಂ ಪುನರ್ಯಸ್ಯ ಲೋಕೋಽಯಂ ಜಿತೋ ವೃತ್ತೇನ ಕೇವಲಮ್ ॥೧೧

ಅನೃಶಂಸ್ಯಮನುಕ್ರೋಶಃ ಶ್ರುತಂ ಶೀಲಂ ದಮಃ ಶಮಃ ।
ರಾಘವಂ ಶೋಭಯಂತ್ಯೇತೇ ಷಡ್ಗುಣಾಃ ಪುರುಷರ್ಷಭಮ್ ॥ ೧೨

(ವಾ. ರಾ. ಅ. ಸರ್ಗ ೩೩

ಇದು ದಶರಥ ಮಹಾರಾಜನು ತನ್ನ ಸ್ವಬುದ್ಧಿಯಿಂದ ಹೇಳಿರುವ ಮಾತಲ್ಲ; ಹೇಳುವ ಮಾತಲ್ಲ. ಅಂತಹ ಪ್ರಿಯನಾದ ಪುತ್ರನನ್ನು ವನಕ್ಕೆ ಹೇಗೆ ತಾನೇ ಕಳುಹಿಸುವನು? ''ಎಂಥ ಗುಣಶೂನ್ಯನಾದ ಪುತ್ರ ನನ್ನೂ ಸಹ ತಂದೆಯಾದವನು ಮನೆಯಿಂದ ಹೊರ ಹೊರಡಿಸುವುದಿಲ್ಲ. ಇದಂತೂ ಹಾಗಲ್ಲ. ಶ್ರೀರಾಮನು ತನ್ನ ಕೇವಲ ವರ್ತನೆಯಿಂದಲೇ ಲೋಕವನ್ನೆಲ್ಲಾ ವಶಪಡಿಸಿರುವನು. ಅಹಿಂಸೆ, ದಯೆ, ವಿದ್ವತ್ತೆ ಸುಶೀಲತೆ, ಇಂದ್ರಿಯನಿಗ್ರಹ, ಚಿತ್ತಶಾಂತಿ ಈ ಆರು ಗುಣಗಳು ಪುರುಷ

ಶ್ರೇಷ್ಠನಾದ ಶ್ರೀರಾಮನನ್ನು ಅಲಂಕರಿಸಿರುವುವು. ಪುರುಷಶ್ರೇಷ್ಠನಾಗಿ ಬಾಳಬೇಕಾದರೆ ಈ ಆರು ಗುಣಗಳನ್ನು ಅಳವಡಿಸಿಕೊಳ್ಳಬೇಕೆಂತಲೂ, ಮೈಗೊಂಡ ಈ ಆರು ಗುಣಗಳಿಂದ ಚಾರಿತ್ರ್ಯವುಳ್ಳವನಾಗುವನೆಂತಲೂ, ಇಂತಹ ಚಾರಿತ್ರ್ಯದ ಪೂಜ್ಯ ವ್ಯಕ್ತಿಯೇ ತನ್ನ ನಿರ್ದುಷ್ಟ ಆಚರಣದಿಂದ ಲೋಕವನ್ನು ವಶಪಡಿಸುವುದೆಂದೂ ಇದರಿಂದ ತಿಳಿದುಕೊಳ್ಳುವಂತಿದೆ. ಶ್ರೀರಾಮನ ಆದರ್ಶವನ್ನೇ ಮುಂದಿಟ್ಟುಕೊಳ್ಳತಕ್ಕುದೆಂಬುದಕ್ಕೆ ಆ ಜನರಿಂದಲೇ ಹೊರಹೊರಟ ಒಂದು ವಚನವಿದೆ, ಅದನ್ನು ನೋಡೋಣ.

ಮೂಲಂ ಹ್ಯೇಷ ಮನುಷ್ಯಾಣಾಂ ಧರ್ಮಸಾರೋ ಮಹಾದ್ಯುತಿಃ ।
ಪುಷ್ಪಂ ಫಲಂ ಚ ಪತ್ರಂ ಚ ಶಾಖಾಶ್ಚಾಸ್ಯೇತರೇ ಜನಾಃ ॥ ೧೫ ॥
(ವಾ. ರಾ. ಅ. ಸರ್ಗ ೩೩)

ಸಾರಭೂತವಾದ ಧರ್ಮವೇ ರೂಪವನ್ನು ತಾಳಿ ಶ್ರೀರಾಮನಾಗಿರುವನು. ಧರ್ಮಮೂರ್ತಿಯಾದ ಶ್ರೀರಾಮನು ಮನುಷ್ಯವೃಕ್ಷಕ್ಕೆಲ್ಲಾ ಮೂಲಭೂತನಾಗಿರುವನು. ಉಳಿದ ಜನರು ಎಲೆ-ಹೂ-ಹಣ್ಣುಗಳ ರೂಪವಾಗಿ ಆ ವೃಕ್ಷದ ವಿಸ್ತಾರವೆನ್ನಿಸಿಕೊಳ್ಳುವರು. ಈತನ ಮುಖದ ತೇಜಸ್ಸು ಅಪಾರವಾದುದು.

## ಶ್ರೀರಾಮನ ದಯೆ ಮತ್ತು ಬ್ರಾಹ್ಮಣ ಪೂಜ್ಯತೆ

ಬ್ರವೀಮಿ ಸತ್ಯೇನ ನ ತೇಽಸ್ತಿ ಯಂತ್ರಣಾ ಧನಂ ಹಿ ಯದ್ಯನ್ಮಮ ವಿಪ್ರಕಾರಣಾತ್ ।
ಭವತ್ಸು ಸಮ್ಯಕ್ ಪ್ರತಿಪಾದನೇನ ಮಯಾರ್ಜಿತಂ ಚೈವ ಯಶಸ್ಕರಂ ಭವೇತ್ ॥
(ರಾ. ಅ. ೩೨-೪೨)

"ನಾನು ಸತ್ಯವಾಗಿ ನುಡಿಯುವೆನು. ನಿಜವಾಗಿಯೂ ನನ್ನ ಸಂಪತ್ತೆಲ್ಲಾ ಬ್ರಾಹ್ಮಣರಿಗಾಗಿಯೇ ಇರುವಂಥಾದ್ದು. ನಿಮ್ಮಂತಹವರಿಗೆ ಅದು ಪ್ರಾಪ್ತವಾದರೆ ನಾನು ಗಳಿಸಿದ ದ್ರವ್ಯವು ಸತ್ಯವಾಗಿಯೂ ಯಶಸ್ಕರವಾಗುವುದು" ಎಂಬ ಶ್ರೀರಾಮನ ಶ್ರೀಮುಖದಿಂದ ಹೊರಟಿರುವ ಈ ಹಾರ್ದಿಕ ವಚನವು ಬಹು ಮನನೀಯವಿದೆ.

ಉಂಛವೃತ್ತಿಯಿಂದ ಜೀವಿಸುವ ತ್ರಿಜಟನೆಂಬ ಬ್ರಾಹ್ಮಣನ ಸಂಗಡ ಮಾತನಾಡಬೇಕಾದರೆ ಉಚ್ಚರಿಸಿದ "ಧನಂ ಹಿ ಯದ್ಯನ್ಮಮ ವಿಪ್ರ

ಕಾರಣಾತ್" (ವಾ. ರಾ. ಅ. ಸರ್ಗ ೩೨, ಶ್ಲೋಕ ೪೨) ನನ್ನದಾಗಿ
ನಂತಹ ಎಲ್ಲಾ ಧನವು ವಿಪ್ರರಿಗಾಗಿ ಇದೆ ಎಂಬ ಹಾರ್ದಿಕವ
ಮನನೀಯವಿದೆ.

## ಶ್ರೀರಾಮನ ವಿವೇಕ ವಿಚಾರ

ಶ್ರೀರಾಮನನ್ನು ಕರೆದೊಯ್ಯಲು ಭರತನು ಬರುತ್ತಿದ್ದನು. ಭ
ನೆಂದರೆ ಭ್ರಾತೃಪ್ರೇಮದ ಆದರ್ಶಮೂರ್ತಿಯೇ ಸರಿ. ಆತನು ಸಸೈ
ನಾಗಿ ಬರುವುದನ್ನು ಕಂಡು ತಪ್ಪುಭಾವನೆಯಿಂದ ಲಕ್ಷ್ಮಣನು
ಗೆದ್ದನು. ನಮ್ಮನ್ನು ಕೊಂದು ನಿಷ್ಕಂಟಕ ಪೃಥ್ವಿಯ ಸಾಮ್ರಾಜ್ಯವ
ಆಳಲು ಭರತನಿಲ್ಲಿಗೆ ಬಂದಿಹನೆಂಬ ಭಾವನೆ ಲಕ್ಷ್ಮಣನಿಗೆ ಆಯಿತು
ಯುದ್ಧಸನ್ನಾಹ ಮಾಡುತಿದ್ದ ಲಕ್ಷ್ಮಣನನ್ನು ಕಂಡು ಶ್ರೀರಾಮ
ಹೇಳಿದ ಮಾತನ್ನು ನೋಡೋಣ. ಮನುಷ್ಯನಿಗೆ ಅವಶ್ಯಕವಾದ ವಿವೇ
ವಿಚಾರಗಳ ಆವಿಷ್ಕಾರವಿಲ್ಲಿ ಆಗಿರುವುದು.

ಕಿಮತ್ರ ಧನುಷಾಕಾರ್ಯಮಸಿನಾ ವಾ ಸಚರ್ಮಣಾ ।
ಮಹೇಷ್ವಾಸೇ ಮಹಾಪ್ರಾಜ್ಞೇ ಭರತೇ ಸ್ವಯಮಾಗತೇ ॥ ೩

ಪಿತುಃ ಸತ್ಯಂ ಪ್ರತಿಶ್ರುತ್ಯ ಹತ್ವಾ ಭರತಮಾಗತಮ್ ।
ಕಿಂ ಕರಿಷ್ಯಾಮಿ ರಾಜ್ಯೇನ ಸಾಪವಾದೇನ ಲಕ್ಷ್ಮಣ ॥ ೪

ಯದ್ದ್ರವ್ಯಂ ಬಾಂಧವಾನಾಂ ವಾ ಮಿತ್ರಾಣಾಂ ವಾ ಕ್ಷಯೇ ಭವೇತ್
ನಾಹಂ ತತ್ಪ್ರತಿಗೃಣ್ಹೀಯಾಂ ಭಕ್ಷ್ಯಾನ್ವಿಷಕೃತಾನಿವ ॥ ೫

ನೇಯಂ ಮಮ ಮಹೀ ಸೌಮ್ಯ ದುರ್ಲಭಾ ಸಾಗರಾಂಬರಾ ।
ನ ಹೀಚ್ಛೇಯಮಧರ್ಮೇಣ ಶಕ್ರತ್ವಮಪಿ ಲಕ್ಷ್ಮಣ ॥ ೬

ಯದ್ವಿನಾ ಭರತಂ ತ್ವಾಂ ಚ ಶತ್ರುಘ್ನಂ ವಾಪಿ ಮಾನದ ।
ಭವೇನ್ಮಮ ಸುಖಂ ಕಿಂಚಿದ್ಭಸ್ಮ ತತ್ಕುರುತಾಂ ಶಿಖೀ ॥ ೮

(ವಾ. ರಾ. ಅ. ಸರ್ಗ ೯

"ಭ್ರಾತೃಪ್ರೇಮದಿಂದ ತಾನಾಗಿ ಬರುತ್ತಿರುವ ಅತಿ ಪ್ರಾಜ್ಞನಾ
ಈ ಭರತನ ವಿಷಯದಲ್ಲಿ ಧನುರ್ಬಾಣಾದಿ ಆಯುಧಗಳ ಪ್ರಯೋಜ
ವೇನಿದೆ ಲಕ್ಷ್ಮಣಾ? ಆ ಅಪವಾದದಿಂದ ಕೂಡಿದ ರಾಜ್ಯವು ಯಾ
ಬೇಕು? ಲಕ್ಷ್ಮಣಾ! ತಂದೆಯಿಂದ ಪ್ರಾಪ್ತವಾದ ರಾಜ್ಯವನ್ನು ಆಳಬೇ

ದರೆ ಭರತನನ್ನು ಕೊಂದು ಶ್ರೀರಾಮನು ರಾಜ್ಯವನ್ನು ಪಡೆದನೆಂದು ಜನರು ಅಪವಾದಿಸದೆ ಇರುತ್ತಾರೋ? ಬಂಧು-ಮಿತ್ರರ ನಾಶದಿಂದ ಪ್ರಾಪ್ತವಾಗುವ ವೈಭವವು ವಿಷಮಿಶ್ರಿತವಾದ ಪಕ್ವಾನ್ನದಂತಿರುವುದು. ಅದನ್ನು ನಾನು ಎಂದೆಂದಿಗೂ ಸ್ವೀಕರಿಸೆನು. ಇಷ್ಟಮಿತ್ರರ ಮತ್ತು ಸಾಧು ಸಜ್ಜನರ ಕೋರಿಕೆಗಳನ್ನು ಪೂರ್ಣಮಾಡಲೂ, ಧರ್ಮರಕ್ಷಣೆ ಮಾಡಲೂ ರಾಜ್ಯವೈಭವವು ತುಂಬಾ ಅನುಕೂಲತೆಯನ್ನು ಕಲ್ಪಿಸಿಕೊಡುವುದಾದ್ದರಿಂದಲೇ ಯಾವ ಧರ್ಮಾತ್ಮನಿಗಾಗಲೀ ರಾಜ್ಯದ ಅಭಿಲಾಷೆ ಉಂಟಾಗುವುದಲ್ಲದೆ ಮತ್ತೇನು? ನಾನು ಮನಸ್ಸು ಮಾಡಿದರೆ ಇಡೀ ಪೃಥ್ವಿಯನ್ನೇ ಹಸ್ತಗತಮಾಡಿಕೊಳ್ಳುವುದಿದೊಂದು ಮಹಾ ದೊಡ್ಡ ಕೆಲಸವೇ? ಆದರೆ ಮಗು, ಅನ್ಯಾಯದಿಂದ ಇಂದ್ರನ ಪಟ್ಟವೂ ಸಹ ನನಗೆ ಬೇಡವೆನಿಸುವಾಗ ಈ ಒಂದು ಲೋಕದ ಸಾಮ್ರಾಜ್ಯದ ಮಾತೇನು? ನಿಮ್ಮನ್ನೆಲ್ಲಾ ಬಿಟ್ಟು ಕೇವಲ ನಾನೇ ಸಾಮ್ರಾಜ್ಯವನ್ನು ಪಡೆದು ಅದರ ಸುಖವನ್ನು ಅನುಭವಿಸಬೇಕೆಂದು ನನಗಿದ್ದರೆ ಈಗಲೇ ನಾನು ಅಗ್ನಿಯ ತುತ್ತಾಗುವೆನು. ಲಕ್ಷ್ಮಣಾ! ನನ್ನಂತೆ ಭರತನಿಗೂ ಇಲ್ಲ. ಆತನ ಪರಿಚಯವು ನಿನಗಿಲ್ಲವೇನೋ? ಈವರೆಗೂ ಆತನು ಯಾವುದಾದರೊಂದು ಅಪ್ರಿಯವಾದುದನ್ನು ಮಾಡಿರುವುದುಂಟೇ?" ಒದಗುವ ಆಪತ್ತೆಲ್ಲಾ ಹೆಚ್ಚಾಗಿ ಅಯಥಾರ್ಥಭಾವನೆಯಿಂದಲೇ ಎಂಬುದು ಸರ್ವಸಾಮಾನ್ಯ ಅನುಭವ. ಪೂರ್ವಾಪರವಿಚಾರದಿಂದ ಸತ್ಯಸ್ಥಿತಿಯನ್ನು ತಿಳಿಯುವ ಚಾತುರ್ಯವೊಂದಿದ್ದರೆ ತನಗೂ ಪರರಿಗೂ ಸುಖವಾಗುವುದು. ಕಣ್ಣಾರೆ ಕಂಡರೂ ಪರಾಂಬರಿಸಿ ನೋಡಬೇಕೆಂಬ ಗಾದೆಯ ನೆನಪು ಇಲ್ಲಿ ಆಗುವುದು. ಇದೊಂದು ಕಲಿಯತಕ್ಕ ಪಾಠವೇ ಸರಿ.

> ಕಚ್ಚಿದ್ದೇವಾನ್ ಪಿತೄನ್ ಭೃತ್ಯಾನ್ ಗುರೂನ್ಪಿತೃಸಮಾನಪಿ ।
> ವೃದ್ಧಾಂಶ್ಚ ತಾತ ವೈದ್ಯಾಂಶ್ಚ ಬ್ರಾಹ್ಮಣಾಂಶ್ಚಾಭಿಮನ್ಯಸೇ ॥ ೧೩ ॥
> (ವಾ. ರಾ. ಅ. ಸರ್ಗ ೧೦೦)

ಛತ್ರ ಚಾಮರಾದಿಗಳಿಂದ ರಹಿತನಾಗಿ ಬಂದ ಪ್ರೀತಿಯ ಭರತನನ್ನು ಕಂಡು ಏನೋ ಶಂಕೆಗೊಂಡು ಅಕ್ಕರೆಯಿಂದ ಆತನ ಯೋಗಕ್ಷೇಮವನ್ನು ಶ್ರೀರಾಮನು ವಿಚಾರಿಸುವ ಸಂದರ್ಭದ ಇದೊಂದು ಶ್ಲೋಕ. "ಮಗು,

ಭರತ! ದೇವರೂ, ಪಿತೃಗಳೂ, ತಾಯಂದಿರೂ, ಗುರುಗಳೂ, ಪಿ
ಸಮಾನರಾದವರೂ, ಮುದುಕರೂ, ವೈದ್ಯರೂ, ಬ್ರಾಹ್ಮಣರೂ ಇವ
ಮನ್ನಿಸಲು ಯೋಗ್ಯರಾಗಿರತಕ್ಕವರು. ಇವರ ಅವಮಾನದಿಂದ ಕೇಡಾ
ವುದು. ಆದುದರಿಂದ ಇವರನ್ನೆಲ್ಲಾ ನೀನು ಮನ್ನಿಸಿದ್ದುಂಟಲ್ಲವೇ?"
ಈ ಶ್ಲೋಕದಿಂದ ಸತ್ಕಾರಯೋಗ್ಯರಾರೆಂಬುದು ತಿಳಿದುಬರುವುದು
ಅರ್ಚನ, ವಂದನ, ದೇವಸ್ಥಾನದ ಜೀರ್ಣೋದ್ಧಾರ ಮತ್ತು ದೇವತೆ
ಆರಾಧನೆಯನ್ನು ನಡೆಸಬೇಕು. ಆಜ್ಞಾಪಾಲನ, ಶುಶ್ರೂಷೆ ಶ್ರಾ
ಪಕ್ಷಗಳನ್ನು ನಡೆಸುವುದೂ, ಬಾವಿ, ಕೆರೆ, ಉದ್ಯಾನ, ಧರ್ಮಶಾ
ಮುಂತಾದ ಲೋಕೋಪಯೋಗಿ ಕೆಲಸಗಳನ್ನು ಮಾಡಬೇಕು. ದಾ
ಮಾನ, ಅಧ್ಯಯನ, ತತ್ವನಿಷ್ಠೆ, ಸತ್ಕಾರ್ಯ, ವಚನಪಾಲನ, ಅ
ನಾದಿಗಳಿಂದ ಸದ್ಗುರುಗಳನ್ನು ಆರಾಧಿಸಬೇಕು. ದೊಡ್ಡಪ್ಪ ಚಿಕ್ಕಪ್ಪ
ರಲ್ಲಿಯೂ, ಅವರ ಸಮಾನವಯಸ್ಸಿನ ಇಷ್ಟಮಿತ್ರರಲ್ಲಿಯೂ ಪೂ
ಭಾವನೆಯನ್ನು ಇಟ್ಟುಕೊಳ್ಳುವುದು, ಅವರ ಕಷ್ಟಕಾಲದಲ್ಲಿ ಮ
ಮುಪ್ಪಿನಲ್ಲಿ ಅವರಿಗೆ ಸಹಾಯಮಾಡುವುದು, ಅವರ ಹಿತೋಪದೇಶಗಳ
ಕೇಳುವುದು, ವೃದ್ಧ ಜನರಲ್ಲಿ ವಂದನಾದಿಗಳನ್ನು ನಡೆಯಿಸಿ ಅವ
ವಿಧೇಯನಾಗಿರುವುದು, ವೈದ್ಯರಿಗೆ ಅವರ ಶ್ರಮಕ್ಕೆ ತಕ್ಕ ದ್ರವ್ಯವ
ಕೊಟ್ಟು ಅವರ ಉಪಕಾರದ ಹಂಬಲಿಟ್ಟು ವರ್ತಿಸುವುದು, ವಿದ್ವಾ
ರನ್ನು ಆದರಿಸಿ ಅವರ ಸಲಹೆಯನ್ನು ತೆಗೆದುಕೊಳ್ಳುವುದು, ಬ್ರಹ್ಮನಿಷ್ಠ
ಸದಾಚಾರಿಗಳ ಒಡನಾಟದಲ್ಲಿರುವುದು, ಶೀಲ, ವಿದ್ವತ್ತು ಮ
ಸದಾಚಾರವುಳ್ಳ ಬ್ರಾಹ್ಮಣರಿಂದ ಶ್ರುತಿ-ಸ್ಮೃತಿ ಪುರಾಣೋಕ್ತ ಕ
ಗಳನ್ನು ಮಾಡಿಸಿ ಯಥೋಕ್ತ ದಾನ-ದಕ್ಷಿಣೆಗಳಿಂದ ಅವರನ್ನು ಸಂತೈಸ
ವುದು, ಮುಂತಾದ ಪ್ರಕಾರಗಳನ್ನು ವರ್ತನಕ್ರಮದಲ್ಲಿಟ್ಟುಕೊಂಡ
ನಡೆದುಕೊಳ್ಳಬೇಕೆಂದು ಇದರ ಅರ್ಥವಾಗುವುದು.

## ಸಮಾಜ ಮತ್ತು ಸುರಾಜ್ಯದ ವ್ಯವಸ್ಥಿತರೂಪ

ಅಯೋಧ್ಯಾಕಾಂಡ ನೂರನೇ ಸರ್ಗವನ್ನು ಆರ್ಯಸಂಸ್ಕೃತಿಯ
ಜಿಜ್ಞಾಸುಗಳು ಮತ್ತು ರಾಜ್ಯಸೂತ್ರಧಾರರೆಲ್ಲ ನೋಡಿ ಬಹು ಪರಿಯ

ಆಲೋಚನೆ ಮಾಡುವಂತಹದ್ದಾಗಿದೆ. ರಾಜ್ಯಸೂತ್ರವನ್ನು ಹೇಗೆ ನಡೆಯಿಸುವುದೆಂಬುದರ ಪಾಠವೇ ಇದು. ರಾಜಕಾರಣದಲ್ಲಿ ಭಾಗವಹಿಸ ತಕ್ಕವರು ಇದನ್ನು ಸಮಾಲೋಚಿಸತಕ್ಕದ್ದು. ಶ್ರೀರಾಮನ ಮುಖದಿಂದ ಜನ್ಮತಾಳಿದ ಸಮಾಜ ಮತ್ತು ಸುರಾಜ್ಯ ವ್ಯವಸ್ಥೆಗಳ ದರ್ಶನವು ಕೆಲವು ಮಟ್ಟಿಗೆ ಇಲ್ಲಿ ಜಿಜ್ಞಾಸುಗಳಿಗಾಗುವುದು. ಬೇಕಾದ ಮುಖ್ಯ ವಿಷಯ ಗಳನ್ನು ಸ್ವಲ್ಪಮಟ್ಟಿಗೆ ನೋಡೋಣ. ಕೆಲ ಸಿದ್ಧಾಂತಗಳನ್ನು ಹೇಳೋಣ.

## ಪುರೋಹಿತರು

ಸ ಕಚ್ಚಿದ್ಬ್ರಾಹ್ಮಣೋ ವಿದ್ವಾನ್ ಧರ್ಮನಿತ್ಯೋ ಮಹಾದ್ಯುತಿಃ ।
ಇಕ್ಷ್ವಾಕೂಣಾ ಮುಪಾಧ್ಯಾಯೋ ಯಥಾವತ್ತಾತ ಪೂಜ್ಯತೇ ॥ ೯ ॥
(ವಾ. ರಾ. ಅ. ಸರ್ಗ ೧೦೦)

ಕುಲಕ್ಕೂ ರಾಷ್ಟ್ರಕ್ಕೂ ಒಬ್ಬ ಪುರೋಹಿತನು ಬೇಕು. ಈತನು ಬ್ರಾಹ್ಮಣನೂ, ಸತ್ಕುಲಪ್ರಸೂತನೂ, ಜಿತೇಂದ್ರಿಯನೂ, ತ್ಯಾಗಿಯೂ, ಬ್ರಹ್ಮನಿಷ್ಠನೂ, ನಿತ್ಯ ಧರ್ಮಾನುಷ್ಠಾನ–ಅಧ್ಯಯನ–ಅಧ್ಯಾಪನಾದಿ ಕರ್ಮಾನುಷ್ಠಾನ ನಿರತನೂ, ಬ್ರಹ್ಮವರ್ಚಸ್ವಿಯೂ, ನಿರಹಂಕಾರಿಯೂ, ಬಹುಶ್ರುತನೂ, ಅಸೂಯಾರಹಿತನೂ, ವೇದಮತಾನುಸಾರಿಯೂ, ಹೋಮ ಹವನಾದಿಪರನೂ (ಅಗ್ನಿಹೋತ್ರಾದಿ ಅಶ್ವಮೇಧಾಂತ), ಶೂರನೂ, ವೇದವೇದಾಂಗ ನಿಪುಣನೂ, ನಿಖಿಲ ಶಾಸ್ತ್ರ ಕೋವಿದನೂ, ಇತಿಹಾಸ-ಪುರಾಣಜ್ಞನೂ, ವಿಮರ್ಶಾತ್ಮಕ ಬುದ್ಧಿಯುಳ್ಳವನೂ, ಆಚಾರ-ವಿಚಾರಗಳಲ್ಲಿ ಏಕಪ್ರಕಾರನಾಗಿರುವವನೂ, ಸರಳಸ್ವಭಾವದವನೂ, ದೇವ–ಪಿತೃ–ಮಾತೃಭಕ್ತನೂ ಆಗಿರಬೇಕು. ಉಪಾಧ್ಯಾಯ ಶಬ್ದದಿಂದ ಹೀಗಿರುವುದು ಬ್ರಾಹ್ಮಣ ಜನಾಂಗದ ಉಪಲಕ್ಷಣವಾಗುವುದು. ಆ ಕಾಲದ ಬ್ರಾಹ್ಮಣ ಸಮಾಜವು ಬಹುಮಟ್ಟಿಗೆ ಈ ವಿಧವಾಗಿರುತ್ತಿತ್ತೆಂಬುದು ಇದರಿಂದ ಗೋಚರವಾಗುತ್ತಿದೆ. ಇಂತಹ ಪುರೋಹಿತನನ್ನು ನಿತ್ಯದಲ್ಲಿಯೂ ಮನ್ನಿಸಬೇಕು. ಬ್ರಾಹ್ಮಣರನ್ನು ಆದರಿಸಬೇಕೆಂದು ಈ ಶ್ಲೋಕದಿಂದ ವ್ಯಕ್ತವಾಗುವುದು.

## ಅಮಾತ್ಯರು

ಕಚ್ಚಿದಾತ್ಮಸಮಾಃ ಶೂರಾಃ ಶ್ರುತವಂತೋ ಜಿತೇಂದ್ರಿಯಾಃ ।
ಕುಲೀನಾಶ್ಚೇಂಗಿತಜ್ಞಾಶ್ಚ ಕೃತಾಸ್ತೇತಾತ ಮನ್ತ್ರಿಣಃ ॥ ೧೫ ॥
(ವಾ. ರಾ. ಅ. ಸರ್ಗ ೧೦೦)

ಮಂತ್ರೋವಿಜಯಮೂಲಂ ಹಿ ರಾಜ್ಞಾಂ ಭವತಿ ರಾಘವ ।
ಸುಸಂವೃತೋ ಮಂತ್ರಿಧುರ್ಯೈರಮಾತ್ಯೈಃ ಶಾಸ್ತ್ರಕೋವಿದೈಃ ॥ ೧೬ ॥

ತನ್ನ ವಿಶ್ವಾಸ ತನಗೆ ಎಷ್ಟರಮಟ್ಟಿಗೆ ಇರುವುದೋ ಅಷ್ಟೇ ಅಥವಾ ಅದಕ್ಕಿಂತಲೂ ಅಧಿಕವಾಗಿ ವಿಶ್ವಾಸಾರ್ಹರಾದ ಮಂತ್ರಿಗಳಿರಬೇಕು. ಅವರು ಧೀರರಾಗಿರಬೇಕು, ಶೂರರಾಗಿರಬೇಕು, ವೀರರಾಗಿರಬೇಕು, ವಿದ್ವಾಂಸರಾಗಿರಬೇಕು. ಅರ್ಥಶಾಸ್ತ್ರಜ್ಞರೂ, ನೀತಿಶಾಸ್ತ್ರಜ್ಞರೂ, ಜಿತೇಂದ್ರಿಯರೂ, ತಂದೆತಾಯಿಗಳಂತೆ ಎಲ್ಲರ ನಿಜವಾದ ಹಿತವನ್ನು ಸಾಧಿಸುವವರೂ, ಮೃದುಮಧುರವಾಣಿಯುವರೂ, ನಿರಹಂಕಾರಿಗಳೂ, ಸಕಲವನ್ನರಿತವರೂ, ಕುಲೀನರೂ, ಪ್ರಾಮಾಣಿಕರೂ, ಧರ್ಮನಿಷ್ಠರೂ, ಆತ್ಮತತ್ವಜ್ಞರೂ, ವರ್ಣಾಶ್ರಮಗಳಂತೆ ಅವರವರನ್ನು ಅವರವರ ಕರ್ತವ್ಯದಲ್ಲಿ ಇಡತಕ್ಕವರೂ, ಯೋಗ್ಯ ಸಲಹೆಯನ್ನು ಕೊಡತಕ್ಕವರೂ, ಸದಾಚಾರಸಂಪನ್ನರೂ, ಪ್ರೀತಿಪಾತ್ರರಾಗಿ ಎಲ್ಲರ ಉತ್ಕರ್ಷದ ಬಗ್ಗೆ ತ್ರಿಕರಣದಿಂದ ಪ್ರಯತ್ನಿಸುವವರೂ, ಧರ್ಮಾಧರ್ಮದ ರಹಸ್ಯವನ್ನು ತಿಳಿದವರೂ, ದಯಾಶೀಲರೂ, ವ್ಯವಹಾರ ಕುಶಲರೂ, ದೂರದೃಷ್ಟಿಯುಳ್ಳವರೂ, ಸಮಾಜದಲ್ಲಿ ಐಹಿಕ ಪಾರಲೌಕಿಕ ಸಾಧನಗಳನ್ನು ಬೆಳೆಸತಕ್ಕವರೂ, ವಿಶ್ವಬಂಧುಗಳೂ, ಉಪಾಯಗಾರರೂ, ಸಮಯಜ್ಞರೂ, ಇಂಗಿತಜ್ಞರೂ, ಆಗಿರಬೇಕು. ಪ್ರಜೆಗಳ ಇಹಪರ ಸುಖವು ಹೆಚ್ಚಾಗಿ ಮಂತ್ರಿಗಳ ಮೇಲೆ ಅವಲಂಬಿಸಿ ಇರುತ್ತದೆ.

## ಪ್ರಾತರುತ್ಥಾನ

ಕಚ್ಚಿನ್ನಿದ್ರಾವಶಂ ನೈಷಿ ಕಚ್ಚಿತ್ಕಾಲೇಽವಬುಧ್ಯಸೇ ।
ಕಚ್ಚಿಚ್ಚಾಪರರಾತ್ರೇಷು ಚಿಂತಯಸ್ಯರ್ಥನೈಪುಣಂ ॥ ೧೭ ॥
(ವಾ. ರಾ. ಅ. ಸರ್ಗ ೧೦೦)

ಬೇಗ ಮಲಗಿ ಬೇಗ ಏಳುವುದು ಆರೋಗ್ಯವನ್ನು ಹೆಚ್ಚಿಸುವುದು. ಉತ್ಸಾಹವನ್ನು ಹೆಚ್ಚಿಸಿ ದುಡಿಮೆಗೆ ಸಹಾಯಮಾಡುವುದು. ಪ್ರಾತರುತ್ಥಾನದಿಂದ ಬುದ್ಧಿಯು ಹರಿತವಾಗುವುದು. ಯಾವುದಾದರೊಂದು ಸೂಕ್ಷ್ಮ ವಿಷಯದ ಮೇಲೆ ವಿಚಾರಮಾಡಬೇಕಾದರೆ ಪ್ರಾತಃಕಾಲವೇ ಅನುಕೂಲವಾದುದು. ಆ ಕಾಲದಲ್ಲಿ ಮನಸ್ಸಿನ ಏಕಾಗ್ರತೆಯು ಇರುತ್ತದೆ. ಧ್ಯಾನಕ್ಕೂ ಈ ಸಮಯವು ಅನುಕೂಲವಿರುತ್ತದೆ. ಅಪರ ರಾತ್ರಿಯಲ್ಲಿ ಸ್ವಾಭಾವಿಕವಾಗಿಯೇ ಹೊರಗೆ ಹೆಚ್ಚು ಶಾಂತತೆ ಇರುತ್ತದೆ. ಆಗ ಹೊರಗಿನಿಂದ ಯಾವ ಭಂಗವೂ ಬರುವುದಿಲ್ಲ. ಶಾಂತ ವಾತಾವರಣದಲ್ಲಿ ಸೂಕ್ಷ್ಮ ವಿಚಾರ ನಡೆಸಲು ಬಹಳ ಅನುಕೂಲವಾಗುತ್ತದೆ.

## ಕಾರ್ಯಾಲೋಚನೆ ಮತ್ತು ಕಾರ್ಯ

ಕಚ್ಚಿನ್ಮನ್ತ್ರಯಸೇ ನೈಕಃ ಕಚ್ಚಿನ್ನ ಬಹುಭಿಃ ಸಹ ।
ಕಚ್ಚಿತ್ತೇ ಮನ್ತ್ರಿತೋ ಮನ್ತ್ರೋ ರಾಷ್ಟ್ರಂ ನ ಪರಿಧಾವತಿ ॥ ೧೮ ॥
(ವಾ. ರಾ. ಅ. ಸರ್ಗ ೧೦೦)

ಕೆಲ ಸಂದರ್ಭದಲ್ಲಿ ಒಬ್ಬನೇ ವಿಚಾರ ನಡೆಸಬೇಕಾಗುತ್ತದೆ. ಕೆಲ ಪ್ರಸಂಗದಲ್ಲಿ ಜನರನ್ನು ಒಡಗೂಡಿ ವಿಚಾರಮಾಡಬೇಕಾಗುವುದು. ಗೋಪ್ಯವಾದುದನ್ನು ಬೇರೆಯವರಿಗೆ ತಿಳಿಸಬಾರದು. ನಾಲ್ಕು ಜನರ ಮತವನ್ನರಿತು ಮಾಡಬೇಕಾದ ಕಾರ್ಯದಲ್ಲಿ ತಾನೊಬ್ಬನೇ ತನಗೆ ಕಂಡಂತೆ ಮುಂದುವರಿಸಲೂಬಾರದು. ತನ್ನ ವಿಚಾರ ಇಂತಹ ಸಂದರ್ಭದಲ್ಲಿ ಏಕದೇಶೀಯವಾಗುವ ಸಂಭವವಿರುತ್ತದೆ.

ಕಚ್ಚಿದರ್ಥಂ ವಿನಿಶ್ಚಿತ್ಯ ಲಘುಮೂಲಂ ಮಹೋದಯಂ ।
ಕ್ಷಿಪ್ರಮಾರಭಸೇ ಕರ್ಮ ನ ದೀರ್ಘಯಸಿ ರಾಘವ ॥ ೧೯ ॥
(ವಾ. ರಾ. ಅ. ಸರ್ಗ ೧೦೦)

ಮಹಾ ಫಲವನ್ನೀಯುವ ಸಂಕಲ್ಪಿತ ಕಾರ್ಯದ ಅಲ್ಪಾರಂಭವನ್ನು ಶೀಘ್ರದಲ್ಲಿಯೇ ಮಾಡಿ ಹಿಡಿದ ಪಟ್ಟನಿಂದ ಅದನ್ನು ಕೊನೆಗಾಣಿಸಬೇಕು. "ನಾಳೆ ಎಂಬುವನ ಮನೆ ಹಾಳು" ಇದನ್ನು ಮರೆಯಬಾರದು. ದೀರ್ಘಸೂತ್ರಿಯಾಗಬಾರದು.

ಸಂಕಲ್ಪಿತವಾದ ಕಾರ್ಯಗಳು ತನಗೂ ಪರರಿಗೂ ಹಿತವಾಗಿ ಮತ್ತು ಮಂಗಳವಾಗಿ ಇರಬೇಕು. ಮಾಡುವ ಕಾರ್ಯವು ಶೀಘ್ರ ಫಲಕಾರಿ

ಯಾಗುವಂತೆ ಎಲ್ಲಾ ಏರ್ಪಾಡು ನಡೆಸಬೇಕು. ಮುಗಿಯುವ ಪೂರ್ವ ಬಹಿರಂಗವಾದರೆ ಕಷ್ಟವಾಗುವ ಸಂದರ್ಭದಲ್ಲಿ ಕಾರ್ಯಗಳ ಸ್ಥಿ ವನ್ನು ಕಾರ್ಯ ಮುಗಿದಮೇಲೆ ಮಾಡಬೇಕು.

ಮಂತ್ರಿಗಳಿಂದ ಒಡಗೂಡಿ ಮಾಡುವ ವಿಚಾರಗಳನ್ನೆಲ್ಲಾ ಧ ಶಾಸ್ತ್ರಕ್ಕೆ ಬಿಟ್ಟು ಕೇವಲ ತರ್ಕಕರ್ಕಶನಾಗಿರಬಾರದು. ಎರಡು ವಾಗಬಾರದು. ಮಂತ್ರಿಗಳ ಕೂಟ ವಿಶ್ವಾಸಕ್ಕೆ ಅರ್ಹರಾದ ಜನ ಕೂಡಿರಬೇಕು. ಅಲ್ಲಿ ನಡೆದ ಗುಪ್ತವಿಚಾರ ಯಾರ ಕಿವಿಗೂ ಬಾರದು. ಬಾಯಿ ಬಿಚ್ಚಿ ಆಡಲಾಗದ್ದನ್ನು ಯಥಾರ್ಥ ಊಹೆಗಳ ಅಂತರಂಗದ ಇಂಗಿತವನ್ನು ತಾನಾಗಿ ತಿಳಿಯುವಷ್ಟು ಮಂತ್ರಿಗಳು ವಂತರಾಗಿರಬೇಕು. ಹೀಗೆ ಮಂತ್ರಿಗಳ ವಿಚಾರವನ್ನು ತಿಳಿಯುವ ವಂತಿಕೆ ರಾಜನಲ್ಲಿಯೂ ಬೇಕು.

ಕಚ್ಚಿತ್ ಸಹಸ್ರಾನ್ ಮೂರ್ಖಾಣಾಮೇಕಮಿಚ್ಛಸಿ ಪಂಡಿತಂ ।
ಪಂಡಿತೋಽಹ್ಯರ್ಥಕೃಚ್ಛ್ರೇಷು ಕುರ್ಯಾನ್ನಿಃಶ್ರೇಯಸಂ ಮಹತ್ ॥
(ವಾ. ರಾ. ಅ. ಸರ್ಗ ೧

ಸಹಸ್ರಾರು ಅಪ್ರಬುದ್ಧರಿಂದ ಒಡಗೂಡಿ ದೀರ್ಘಕಾಲ ವಿಚಾ ಮಾಡುವುದಕ್ಕಿಂತಲೂ ಒಬ್ಬ ನಿಜವಾದ ಪಂಡಿತನ ಸಂಗಡ ಅಲ್ಪ ಮಾಡಿದ ವಿಚಾರವು ಧರ್ಮಸಂಕಟಗಳಲ್ಲಿ ಅಥವಾ ಕಾರ್ಯಾಕಾ ವಿಚಾರಗಳಲ್ಲಿ ಅತಿ ಶ್ರೇಯಸ್ಕರವಾದುದು. ಆಯಾ ವಿಷಯ ನುರಿತವರ ಸಂಗಡವೇ ಆಯಾ ವಿಷಯದ ವಿಚಾರವನ್ನು ಮಾಡು ಅಲ್ಪ ದ್ರವ್ಯದಿಂದ ಅನಾಯಾಸವಾಗಿ ತಡವಿಲ್ಲದೆ ಉತ್ಕೃಷ್ಟ ಕಾ ವಾಗುವುದು. ಕಾರ್ಯಕ್ಷಮವಿದ್ವಾಂಸನನ್ನು ಆರಿಸುವುದಾದರೆ ಆತ ಸದ್ವೃತ್ತಿಯವರಾದ ತಂದೆ ತಾಯಿಗಳಿಂದ ಜನ್ಮತಾಳಿದ ಆನುವಂಶಿಕ ಬಂದ ಉಚ್ಚ ಮನೆತನದವನಾಗಿರಬೇಕು. ಆ ಕುಲದಲ್ಲಿ ಉಚ್ಚ ಸಂಸ್ಕಾ ಗಳ ರಕ್ತವು ಪರಂಪರಾಗತವಾಗಿ ಬಂದಿರುವುದರಿಂದ ಹೆಚ್ಚು ಪು ಔಷಧಿಯಂತೆ ಇಂತಹವರ ಸಹಯೋಗವು ತಪ್ಪದೆ ಫಲಕಾರಿಯಾಗುವು ಒಡನಾಟದಲ್ಲಿದ್ದ ಜನರ ಲಕ್ಷಣದ ಮೇಲಿಂದ ಆತನ ಪೂರ್ವ ಮತ್ತು ಸದ್ಯ ಸಂಸ್ಕಾರವನ್ನು ತಿಳಿಯಬಹುದು. ಮನುಷ್ಯನ ಭೂಮಿಕೆಯು ಆತ

ಸಹಜ ಆಚರಣೆಯಲ್ಲಿ ಅನಾಯಾಸವಾಗಿ ಕಾಣಿಸಿಕೊಳ್ಳುವುದು. ನಡೆ-ನುಡಿ, ಆಚಾರ-ವಿಚಾರ, ಆಹಾರ-ವಿಹಾರ ಇವೇ ಮನುಷ್ಯರನ್ನು ದಿಟ್ಟಿಸಿ ಗುರುತಿಸುವುವು. ಪೂರ್ವಾರ್ಜಿತ ನೀಚೋಚ್ಚ ಕರ್ಮಗಳಂತೆ ನೀಚೋಚ್ಚ ಜಾತಿಗಳಲ್ಲಿ ಆತನ ಜನ್ಮವಾಗುವುದು. ಮನುಷ್ಯನ ಚಾರಿತ್ರ್ಯವು ಜನ್ಮದಿಂದಲೂ, ತಾಯಿತಂದೆಗಳಿಂದಲೂ, ಪರಿವಾರದಿಂದಲೂ, ಸಾಧನ ಅಭ್ಯಾಸಗಳಿಂದಲೂ, ಸಂಗ-ಸಹವಾಸದಿಂದಲೂ ಮಾರ್ಪಡುವುದು. ಮನುಷ್ಯನು ಸಚ್ಚರಿತ್ರನಾಗಬೇಕಾದರೆ ಕಾಯವಾಙ್ಮನಗಳ ಪರಿಶುದ್ಧತೆ ಇರಬೇಕು. ಆತನ ಮನಸ್ಸಿನಲ್ಲಿಯೂ, ವಾಣಿಯಲ್ಲಿಯೂ, ಕ್ರಿಯೆಯಲ್ಲಿಯೂ ಸದ್ಭಾವನೆಗಳ ಉತ್ಕರ್ಷವು ಎದ್ದು ಕಾಣಬೇಕು.

> ಕಚ್ಚಿನ್ಮುಖ್ಯಾ ಮಹತ್ಸ್ವೇವ ಮಧ್ಯಮೇಷು ಚ ಮಧ್ಯಮಾಃ ।
> ಜಘನ್ಯಾಶ್ಚ ಜಘನ್ಯೇಷು ಭೃತ್ಯಾಸ್ತೇ ತಾತ ಯೋಜಿತಾಃ ॥ ೨೫ ॥
> (ವಾ. ರಾ. ಅ. ಸರ್ಗ ೧೦೦)

## ಸಮಾಜ ಶಾಸ್ತ್ರದ ಕೆಲವು ನಿಯಮಗಳು

"ಜಾತಿ-ಕುಲ-ಶೀಲ ಮತ್ತು ವಿದ್ವತ್ತುಗಳಿಂದಲೂ, ಉತ್ತಮ, ಮಧ್ಯಮ, ಕನಿಷ್ಠರಾದವರನ್ನು ಅವರವರ ಯೋಗ್ಯತೆಯ ಪ್ರಕಾರವಾಗಿ ಆಯಾ ಉತ್ತಮ, ಮಧ್ಯಮ, ಕನಿಷ್ಠಕಾರ್ಯಗಳಲ್ಲಿಯೇ ನೇಮಿಸುವೆಯಲ್ಲವೆ ಭರತ" ಎಂದು ಶ್ರೀರಾಮನು ಕೇಳಿದ್ದುಂಟು. ಇದರಲ್ಲಿ ಸಮಾಜ ಶಾಸ್ತ್ರದ ಒಂದು ಸಿದ್ಧಾಂತ ಕಂಡುಬರುವುದು.

ಶೀಲಭ್ರಷ್ಟನಾದವನನ್ನೂ, ಹೀನನನ್ನೂ ಅಧಿಕಾರಪದಾರೂಢ ಮಾಡಿದರೆ ಕೆಲವರು ಆತನನ್ನನುಕರಿಸಿ ಕೆಡುವರು. ಕೆಲವರು ಆತನನ್ನು ವಿರೋಧಿಸಿ ನಡೆವರು. ವಿರೋಧಿಗಳ ಮೇಲೆ ಹಗೆ ಇಟ್ಟು ಈತನು ತನ್ನ ಅಧಿಕಾರವನ್ನು ಉಪಯೋಗಿಸುವನು. ಬಲಾತ್ಕಾರದಿಂದ ಅವರನ್ನು ಕೆಡಿಸುವನು. ಹೀಗೆ ಕ್ರಮೇಣ ರಾಷ್ಟ್ರದ ಉಚ್ಚವರ್ಣವು ಕೆಟ್ಟುಹೋಗುವುದು. ಸಮಾಜದ ಆದರ್ಶನೀತಿಯೂ ನಶಿಸಿಹೋಗುವುದು. ಹೀಗೆ ಯೋಗ್ಯತಾನುಸಾರವಾಗಿ ಕಾರ್ಯವಿಭಾಗವಾಗದಿದ್ದರೆ ಆ ರಾಷ್ಟ್ರವು ಸರ್ವತೋಮುಖವಾಗಿ ಕೆಳಮಟ್ಟಕ್ಕೆ ಇಳಿಯುವುದು. ಉಚ್ಚಸಂಸ್ಕಾರ

ವುಳ್ಳವರಿಗೆ ಜನರಲ್ಲೆಲ್ಲಾ ತಮ್ಮಂತಹ ಉಚ್ಚಸಂಸ್ಕಾರವಿರಬೇಕೆಂ ಕಾಣುವಂತೆ ಹೀನಸಂಸ್ಕಾರದವನಿಗೂ ಜನರಲ್ಲೆಲ್ಲಾ ತನ್ನ ಸಂಸ್ಕಾ ಎದ್ದುಕಾಣುವಂತೆ ಮಾಡಬೇಕೆಂದು ತೋರುವುದು. ಆದುದರಿಂ ಸಮಾಜದ ಏಳಿಗೆಯನ್ನು ಕೋರುವ ರಾಷ್ಟ್ರದಲ್ಲಿ ಎಲ್ಲಾ ವಿಧದಿಂ ಉಚ್ಚರೆನಿಸಿದ ಜನರನ್ನು ಅಧಿಕಾರಪದದಲ್ಲಿಡಬೇಕು. ಅವರು ತ ಸ್ವಭಾವದಂತೆ ಜನರನ್ನು ತಿದ್ದುವರು. ಸಮಾಜದ ಉತ್ಕರ್ಷವಾಗುವ ಎತ್ತರವಾದ ಮನೆಯಲ್ಲಿ ಎಷ್ಟು ಗಿಡ್ಡನಾಗಿದ್ದರೂ ಬೇಕಾದಂತೆ ತಿ ವ್ಯವಹರಿಸಬಹುದು. ಆದರೆ ಸಣ್ಣ ತಗ್ಗಿನ ಮನೆಯಲ್ಲಿ ಮಾತ್ರ ದ ಮತ್ತು ಎತ್ತರವಿದ್ದವರು ನಿಂತು ತಿರುಗಲಾರರು ಮತ್ತು ಬಾಳಲಾ ಅಧಿಕಾರವನ್ನರಿತು ಕಾರ್ಯವಿಭಾಗ ಮಾಡುವ ಜಾಣತನ ಮುಖ್ಯ ಕಾರಿಗಳಲ್ಲಿ ಅವಶ್ಯ ಬೇಕಾದದ್ದು. ದೊಡ್ಡದರಲ್ಲಿ ಸಣ್ಣದರ ಸಮಾವೇ ವಾಗುವುದಲ್ಲದೆ, ಸಣ್ಣದರಲ್ಲಿ ದೊಡ್ಡದರ ಸಮಾವೇಶವಾಗದು. ಆ ರನ್ನು ಹೆಗಲಮೇಲೆ ಇರಿಸಿಕೊಂಡು ಏರನ್ನು ಏರಿಹೋಗುವ ಶಕ್ತಿ ಸಮಾಜದಲ್ಲಿ ಬೇಕು. ಇಳಿಯುವವನು ಏರುವವನನ್ನು ಹಿಂಬಾಲಿಸಿ ಇವನೂ ಏರಿಹೋಗುವನು. ಅಲ್ಲದೆ ಏರುವವನು ಇಳಿಯುವವನನ್ನು ಹಿಂಬಾ ಲಿಸಿದರೆ ಇಬ್ಬರೂ ಕೆಳಗೆ ಬರುವರು, ಇದನ್ನು ಚೆನ್ನಾಗಿ ತಿಳಿದಿರಬೇಕು.

ಉನ್ನತಿಯ ಮಾರ್ಗದಲ್ಲಿ ಅಡ್ಡಬರುವುದನ್ನು ಹೋಗಲಾಡಿಸಿಯೆ ತನ್ನ ಉತ್ಕರ್ಷವನ್ನು ಸಾಧಿಸಲಾಗುವುದು. ಒಂದಲಿಕೆಯನ್ನು ನಾ ಮಾಡದೆ ಬಿಟ್ಟರೆ ಮರವೂ ಸಹ ಬತ್ತಿಹೋಗುವುದಲ್ಲವೆ? ತೋಟದ ಕ ಯನ್ನು ತೆಗೆದು ಗೊಬ್ಬರ ಹಾಕಿ ಅಡಿಕೆಯ ಗಿಡಗಳನ್ನು ಬೆಳೆಯ ಬೇಕಲ್ಲವೇ? ಕೆಟ್ಟದನ್ನು ಹೋಗಲಾಡಿಸಿ ಒಳ್ಳೇದನ್ನು ಬೆಳೆಸುವು ಜಗತ್ತಿನ ಕ್ಷೇಮಕ್ಕಾಗಿ ದುಡಿಯುವುದು. ನಾಚಿಕೆಯ ಮುಳ್ಳಿನ ಗಿಡಗ ಸ್ಥಳವನ್ನು ನಿಸ್ಸಾರಮಾಡಿ ಆ ಸ್ಥಳದಲ್ಲಿದ್ದ ಎಲ್ಲಾ ಬೆಳೆಯನ್ನು ನಾ ಮಾಡುವುವು. ಅವನ್ನು ಯಾವ ಪರಿಯಿಂದಾದರೂ ನಾಶಮಾಡಿಯೆ ಒಳ್ಳೇ ಬೆಳೆಯನ್ನು ಬೆಳೆಯಿಸಬೇಕು. ಒಳ್ಳೇದನ್ನು ಬೆಳೆಯಿಸಲು ಬೀ ಹಾಕಿ ಬೇಸಾಯಮಾಡುವುದು ಅವಶ್ಯ. ನಾಚಿಕೆಯ ಮುಳ್ಳಿನ ಬೆಳೆ ಏನೂ ಮಾಡುವುದು ಬೇಡ. ಅದು ತಾನಾಗಿಯೇ ಹಬ್ಬಿಕೊಳ್ಳುವುದು.

ದುರ್ವಾಸನೆಯ ಸ್ಥಳದಿಂದ ಸುಗಂಧದ ಸ್ಥಳಕ್ಕೆ ಹೋಗುವಂತೆ ದುರ್ವಾಸನೆಯ ಜನರನ್ನೂ ಬಿಟ್ಟು ಸದ್ವಾಸನೆಯ ಜನರೊಡನೆ ಸೇರಿಕೊಳ್ಳ ಬೇಕು. ದುರ್ಗಂಧದ ಸ್ಥಳದಲ್ಲಿದ್ದವರನ್ನು ತನ್ನ ಸುಗಂಧಪೂರ್ಣವಾದ ಸ್ಥಳಕ್ಕೆ ಒಯ್ಯುವುದೇ ದಯೆ ತೋರಿಸುವುದು. ಅಲ್ಲದೆ ತಾನೂ ಅವರ ಜೊತೆಗೆ ದುರ್ಗಂಧದ ಸ್ಥಳದಲ್ಲಿರುವುದು ದಯೆಯಲ್ಲ.

ದುರ್ಬಲರಾಗಿ ಹಿಂದಿದ್ದವರಿಗೆ ಶಕ್ತಿಯುಳ್ಳ ಮುಂದಿನ ಜನರನ್ನನು ಸರಿಸುವುದಕ್ಕಾಗಿ ಹೇಳುವುದೇ ವಿಶ್ವ ಕ್ಷೇಮಕರವಾಗುವುದಲ್ಲದೆ ಮುಂದಿನ ಜನರಿಗೆ ಹಿಂದಿನ ಜನರನ್ನು ಹಿಂಬಾಲಿಸಿರೆಂದು ಒತ್ತಾಯಪಡಿಸುವುದು ಸರಿಯಲ್ಲ. ಇದರಿಂದ ಹಿಂದಿನವರಿಗೆ ಅನುಕರಣೀಯವಾದ ಮುಂದಿನ ಆದರ್ಶವನ್ನು ನಷ್ಟಪಡಿಸಿ ಅವರ ಉತ್ಕೃಷ್ಟವಾದ ಮಾರ್ಗವನ್ನೇ ಹೋಗ ಲಾಡಿಸಿದಂತಾಗುವುದು. ಮಾರ್ಗದರ್ಶಕರೇ ಇಲ್ಲದಿದ್ದಾಗ ಸಮಾಜದ ಉನ್ನತಿ ಆಗಲಾರದು. ಅವರವರ ಸೇವೆಯಿಂದ ಆಯಾ ಗುಣ ವೈಗೂಡುವುದೆಂಬ ನ್ಯಾಯದ ಪ್ರಕಾರ ಕೆಳಗಿನ ಮಟ್ಟದ ಜನರನ್ನು ಮೇಲಿನ ಮಟ್ಟದ ಜನರ ಸೇವೆಗೆ ಹಚ್ಚುವುದೇ ಅವರ ಉದ್ಧಾರದ ಸಾಧನ ಕಲ್ಪಿಸಿ ಕೊಡುವುದಲ್ಲದೆ ಮೇಲ್ಮಟ್ಟದವರನ್ನು ಇವರ ಸೇವೆಗೆ ಹಚ್ಚುವುದರಿಂದ ಎರಡೂ ಸಮಾಜದ ಅವನತಿಯಾಗುವುದು. ಮುಂದಿನವನು ದೂರ ಹೋದದ್ದನ್ನು ಕಂಡು ಹಿಂದಿನವರು ಆದಷ್ಟು ಬೇಗ ನಡೆಯುವುದು ಲೋಕದ ಅನುಭವ.

ಸೈನ್ಯಾದಿ ಸಕಲ ವಿಭಾಗಗಳಲ್ಲಿ ಜನರನ್ನು ಆರಿಸಿಯೇ ಇಡಬೇಕು. ಆದರಣೀಯ ಕೆಲಸಗಳನ್ನು ಮಾಡಿದವರಿಗೆ ಪಾರಿತೋಷಕಾದಿಗಳ ಪ್ರದಾನ ದಿಂದ ಮಿಕ್ಕವರಲ್ಲಿಯೂ ಆ ಬುದ್ಧಿಯನ್ನು ಹೆಚ್ಚಿಸಬೇಕು. ಗುಣಗೌರವ ಮಾಡಬೇಕು. ಹಾಗೆ ಮಾಡದಿದ್ದರೆ ಸದ್ಗುಣಗಳ ಹೆಚ್ಚಳ ಸಮಾಜದಲ್ಲಿ ಆಗುವುದಿಲ್ಲ.

ಪ್ರತಿ ಮಾಸದ ಪೂರ್ತಿಯಲ್ಲಿ ಅವರವರ ವೇತನವು ಸಿಗುವ ವ್ಯವಸ್ಥೆ ರಾಷ್ಟ್ರದಲ್ಲಿರಬೇಕು. ವಿಳಂಬಮಾಡಬಾರದು. ಹೇರಳ ವೇತನದಿಂದ ಲಂಚದ ಅವಶ್ಯಕತೆ ತೋರದಂತೆ ಮಾಡಬೇಕು. ನ್ಯಾಯಾಲಯಗಳಲ್ಲಿ ಯೋಗ್ಯವಾದ ನ್ಯಾಯ (ತೀರ್ಪು) ಬೇಗ ಸಿಗುವಂತೆ ಮಾಡಬೇಕು.

ದೋಷಪ್ರಮಾದಗಳಿಗಾಗಿ ಉಗ್ರ ದಂಡವನ್ನು ಕೈಕೊಳ್ಳುವುದು ಒಂ; ತಾತ್ಕಾಲಿಕ ಸಾಧನವಿದರೂ ಆ ಪ್ರವೃತ್ತಿಯನ್ನು ಹೋಗಲಾಡಿಸ; ಬಾಲ್ಯದಿಂದಲೇ ನೀತಿಯ, ಧರ್ಮದ, ಆದರ್ಶಗುಣಗಳ ಶಿಕ್ಷಣ ಕೊಟ್ಟ ಅಂತಃಕರಣದ ಭೂಮಿಕೆಯನ್ನು ಪವಿತ್ರಗೊಳಿಸುವುದು ಹೆಚ್ಚು ಹಿತ; ವಾಗುವುದು. "ಮೂರು ವರ್ಷದ ಬುದ್ಧಿ ನೂರು ವರ್ಷದವರೆಗೆ" ಎಂಬ ಗಾದೆ ಇದೆ. ಬಾಲ್ಯದಲ್ಲಾದ ಸಂಸ್ಕಾರ ಹಸಿಗೋಡೆಯ ಮೇಲಿ ಕಲ್ಲಿನ ಗುರುತಿನಂತೆ ಕೊನೆಯವರೆಗೂ ಅಚ್ಚಳಿಯದಿರುವುದು.

## ಅಧಿಕಾರಿ ವರ್ಗದ ನಿಯೋಜನೆ

ಅಧಿಕಾರಿ ವರ್ಗದಲ್ಲಿರುವವರು ವ್ಯವಹಾರ ನಿಪುಣರೂ, ರಿಪುನಿಗ್ರ ಕೋವಿದರೂ, ಬುದ್ಧಿವಂತರೂ, ಆಜ್ಞಾಧಾರಕರೂ, ಸಮಯಸೂಚಕ ಆಗಿರಬೇಕು. ದೀರ್ಘದೃಷ್ಟಿಯುಳ್ಳವರೂ, ಆಯಾ ದೇಶ ಮತ್ತು ಆಯಾ ಜನರ ಸಂಗಡ ನಡೆದುಕೊಳ್ಳತಕ್ಕ ಕ್ರಮವನ್ನು ಅರಿತವರೂ ಆಗಿರಬೇಕು ಮಧುರಭಾಷಿಗಳೂ, ಧೈರ್ಯಶಾಲಿಗಳೂ, ಬಾಹ್ಯಾಭ್ಯಂತರ ಪರಿಶುದ್ಧರೂ ಸ್ವಾಮಿಭಕ್ತರೂ, ದೇಶಭಕ್ತರೂ ಆಗಿರಬೇಕು ಮತ್ತು ಕುಲೀನರೂ, ಕಾರ್ಯ ಕುಶಲರೂ, ಸತ್ಯವಾದಿಗಳೂ, ಪ್ರಾಮಾಣಿಕರೂ, ಇಂದ್ರಿಯ ಮನೋ ನಿಗ್ರಹಿಗಳೂ, ಆಚಾರ ವಿಚಾರಶೀಲರೂ, ನ್ಯಾಯಪ್ರಿಯರೂ, ನಿಷ್ಪ ಪಾತಿಗಳೂ, ಆತ್ಮನಿಷ್ಠರೂ ಆಗಿರಬೇಕು.

ಕಾರ್ಯಸಾಧಕ ಗೂಢಚಾರರಿಂದ ರಾಷ್ಟ್ರದ ಅಂತರ್ಬಾಹ್ಯ ಸ್ಥಿ ಯನ್ನು ತಿಳಿಯುತ್ತಾ ಅವುಗಳ ವೃದ್ಧಿ ಕ್ಷಯದ ಬಗ್ಗೆ ಸಾಧನಗಳನ್ನು ನಿರ್ಮಿಸುತ್ತಲಿರಬೇಕು.

ಅಹಿತರಾದ ಜನರು ದುರ್ಬಲರಾದರೂ ಅವರ ಮೇಲಿನ ಜಾಗ್ರ ಯನ್ನು ತಪ್ಪಿಸಬಾರದು. ಉತ್ತಮ ಪರೀಕ್ಷೆಯ ಹೊರತು ಯಾವಾತ ಸಂಗಡವೂ ಅತಿ ವಿಶ್ವಾಸ ಮಾಡಬಾರದು. ಆತನಿಗೆ ಮಹತ್ವದ ಕಾರ್ಯ ವನ್ನು ಒಪ್ಪಿಸಲೂಬಾರದು. ತುಂಟರ ಬಗ್ಗೆ ಯಾವಾಗಲೂ ಎಚ್ಚರ ವಾಗಿರಬೇಕು.

## ದುರ್ಜನರ ಸಂಗತ್ಯಾಗ

ಲೀಲಾವಿನೋದದಿಂದಲೂ ನಾಸ್ತಿಕ ಮತದ ಪುರಸ್ಕಾರ ಮಾಡಬಾರದು. ನಾಸ್ತಿಕರ ಸಂಗಕ್ಕೆ ಹೋಗಲೂಬಾರದು. ಹೀನರ, ದುರ್ಜನರ ಮತ್ತು ವ್ಯಸನಿಗಳ ಜೊತೆಯಲ್ಲಿರಬಾರದು. ಬಹು ಸಂಖ್ಯಾತರಾದ ಕೆಟ್ಟ ಜನರಲ್ಲಿದ್ದರೆ ಒಳ್ಳೆಯವನೂ ಸಹ ಕೆಟ್ಟುಹೋಗುವನು. "**ದುಃಸಂಗಃ ಸರ್ವಥೈವ ತ್ಯಾಜ್ಯಃ**" ಒಳ್ಳೆ ಹಣ್ಣಿನ ರಾಶಿಯಲ್ಲಿ ಕೆಟ್ಟಿರುವ ಒಂದು ಹಣ್ಣಿದ್ದರೂ ಅದು ಹೇಗೆ ಆ ರಾಶಿ ಹಣ್ಣನ್ನೆಲ್ಲಾ ಕ್ರಮೇಣ ಕೆಡಿಸುವುದೋ ಹಾಗೆ ಒಳ್ಳೆಯವರ ಗುಂಪಿನಲ್ಲಿ ಒಬ್ಬ ಕೆಟ್ಟವನಿದ್ದರೂ ಸಾಕು; ಎಲ್ಲರೂ ಕ್ರಮೇಣ ಕೆಟ್ಟುಹೋಗುವರು. ಆದುದರಿಂದ ರಾಜನೂ, ರಾಷ್ಟ್ರದ ಮುಖ್ಯಸ್ಥರೂ ಇದನ್ನು ಲಕ್ಷಿಸುತ್ತಿರಬೇಕು. ಕೆಟ್ಟ ಹಣ್ಣನ್ನು ಆ ರಾಶಿಯಿಂದ ಹೊರಗೆ ಹಾಕುವುದೇ ಉಳಿದ ಹಣ್ಣುಗಳ ಒಳಿತಾಗಿ ಇಟ್ಟುಕೊಳ್ಳುವ ಮಾರ್ಗ. ಬಹಿಷ್ಕೃತ ಎಂಬ ಶಬ್ದವು ರೂಢನಾದುದು ಹೀಗೆ. ಹೀಗಾಗಿಯೇ ಸ್ಪೃಶ್ಯಾಸ್ಪೃಶ್ಯದ ಭಾವನೆಯುಂಟಾಯಿತು.

ಅಯೋಧ್ಯಾಕಾಂಡದ ೧೦೦ನೇ ಸರ್ಗದ ೩೮–೩೯ ಈ ಎರಡು ಶ್ಲೋಕಗಳಲ್ಲಿ, "ವೇದ-ಧರ್ಮಶಾಸ್ತ್ರಗಳಿಗೆ ಸಮ್ಮತಿಸದ ಮತಗಳನ್ನು ನಂಬಬಾರದು, ವೇದಬಾಹ್ಯಮತಪ್ರಚಾರಕರು '**ಅನರ್ಥಕುಶಲಾ ಹೆ ತೇ**' ಅನರ್ಥಮಾಡಿ ಹಾಕುವ ವಿಷಯದಲ್ಲಿ ಬಹು ಕುಶಲರೆಂತಲೂ, '**ನಿರರ್ಥಂ ಪ್ರವದಂತಿ ತೇ**' ಇವರ ಮಾತುಗಳೆಲ್ಲಾ ನಿರರ್ಥಕವಾದವುಗಳೆಂತಲೂ" ಶ್ರೀರಾಮನು ಭರತನಿಗೆ ಹೇಳಿರುವುದಿದೆ.

## ಅಯೋಧ್ಯೆಯ ವರ್ಣನೆ

ಶ್ರೀರಾಮನು ಅಯೋಧ್ಯೆಯ ವರ್ಣನವನ್ನು (೪೧ ರಿಂದ ೪೭ನೆಯ ವರೆಗಿನ ಶ್ಲೋಕಗಳಲ್ಲಿ) ಮಾಡಿರುವನು. ಅಯೋಧ್ಯೆಯು ಒಂದು ವಿಶಾಲ ವೈಭವದ ಪಟ್ಟಣ. ಎಲ್ಲಾ ವಿಧದ ಸಂಪತ್ತಿನಿಂದ ಕೂಡಿರುವಂತಹದು. ಇದು ಒಳ್ಳೇ ಜನಸಂಪತ್ತಿನಿಂದಲೂ ತುಂಬಿಕೊಂಡಿದೆ. ಇದರ ಅತಿ ರಮಣೀಯವಾದ ಉತ್ತುಂಗಪ್ರಾಸಾದಗಳು ಬಹು ಮನೋಹರವಾಗಿರುವುವು. ಇಲ್ಲಿದ್ದವರೆಲ್ಲಾ ಬಹುಮಟ್ಟಿಗೆ ವಿದ್ವಾಂಸರೇ ಸರಿ.

ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಸ್ವಕರ್ಮನಿರತೈಸ್ಸದಾ ।
ಜಿತೇಂದ್ರಿಯೈರ್ಮಹೋತ್ಸಾಹೈಃ ವೃತಾಮಾರ್ಯೈಸ್ಸಹಸ್ರಶಃ ॥ ೪೧ ॥

ಕಚ್ಚಿಚ್ಚೈತ್ಯಶತೈರ್ಜುಷ್ಟಃ ಸುನಿವಿಷ್ಟಜನಾಕುಲಃ ।
ದೇವಸ್ಥಾನೈಃ ಪ್ರಪಾಭಿಶ್ಚ ತಟಾಕೈಶ್ಚೋಪಶೋಭಿತಃ ॥ ೪೩ ॥

ವಿವರ್ಜಿತೋಽನ್ಯೈಃ ಪಾಪೈಃ ॥ ೪೬ ॥

(ವಾ. ರಾ. ಅ. ಸರ್ಗ ೧೦೦)

ಈ ಪಟ್ಟಣದಲ್ಲೆಲ್ಲಾ ಬ್ರಾಹ್ಮಣರು, ಕ್ಷತ್ರಿಯರು, ವೈಶ್ಯರು, ಶೂದ್ರರೂ ಸಹ ತಮತಮಗೆ ಹೇಳಿದ ಕರ್ಮಗಳನ್ನೇ ಅನುಷ್ಠಿಸುವರು. ಎಲ್ಲರೂ ಜಿತೇಂದ್ರಿಯರು, ಮರ್ದಮ್ಯ ಉತ್ಸಾಹವುಳ್ಳವರು. ಇಂತಹ ಸಹಸ್ರಾವಧಿ ಆರ್ಯರಿಂದ ಅಯೋಧ್ಯೆಯು ಶೋಭಾಯಮಾನವಾಗಿರುವುದು. ಎಲ್ಲಾ ಯಜ್ಞಗಳನ್ನು ಮಾಡಿಸಿದ ಎಷ್ಟೋ ಪೂಜ್ಯ ದೀಕ್ಷಿತರಿಲ್ಲಿರುವರು. ಅರಪಟ್ಟಿಗೆ, ಅನ್ನಛತ್ರಗಳು ಅಲ್ಲಲ್ಲಿರುವುವು. 'ದೇವಸ್ಥಾನೈಃ' ಸುಂದರವಾದ ಅನೇಕ ದೇವಸ್ಥಾನಗಳು ಅಲ್ಲಿರುವುವು. ಅಲ್ಲಿಯ ವಿನಿಯೋಗಗಳ ವ್ಯವಸ್ಥೆಯು ಬಹಳ ಪರಿಷ್ಕಾರವುಳ್ಳದ್ದು. 'ಸಮಾಜೋತ್ಸವಶೋಭಿತಃ' ದೇವತೆಗಳ ನಿತ್ಯನೈಮಿತ್ತಿಕೋತ್ಸವಗಳಲ್ಲಿ ಭಾಗವಹಿಸಿದ ಅಲ್ಲಿಯ ಜನತೆ ನಿತ್ಯೋತ್ಸವಸಂಪನ್ನವಾಗಿರುವುದು. ಧರ್ಮದ ಚರ್ಚೆ ನಿರ್ಣಯ ನಡೆಸುವ ಅನೇಕ ಗಂಭೀರ ಮನೋಹರ ಸಭೆಗಳು ಅಲ್ಲಲ್ಲಿ ನಿತ್ಯ ಇದ್ದೇ ಇರುವುವು. ಈ ಎಲ್ಲಾ ಸಭೆಗಳು ಋಷಿ, ಮುನಿ, ಮಹಾತ್ಮರು, ವಿದ್ವಾಂಸರುಗಳಿಂದ ಅತ್ಯಂತ ಶೋಭಾಯಮಾನವಾಗಿರುವುವು. ಒಬ್ಬನೂ ಪಾಪಿ ಎಂಬುವನಿಲ್ಲ. ಸರಯೂ ಎಂಬ ಪುಣ್ಯನದಿಯ ಪವಿತ್ರ ತೀರದಿಂದ ಪಾವನವಾದ ಈ ಸರ್ವಸಮೃದ್ಧ ಅಯೋಧ್ಯೆಯು ಎಲ್ಲಾ ಸತ್ಪ್ರಜೆಗಳೂ ಸುಖವಾಗಿದ್ದಾರೋ ಎಂಬುದಾಗಿ ಯೋಗಕ್ಷೇಮವನ್ನು ಕೇಳಿರುವನು. ಭಾರತವರ್ಷದ ಈಗಿನ ರಾಮರಾಜ್ಯದಲ್ಲಿ ಸಹ ಈ ವರ್ಣನೆಯಂತೆಯೇ ಇರತಕ್ಕದ್ದಲ್ಲವೇ ?

## ಮುಖಂಡರ ಕರ್ತವ್ಯ ಮತ್ತು ಆದರ್ಶ ಸ್ವರಾಜ್ಯ

ಆಶ್ರಿತ ಜನರು ಸುಖಿಗಳಾಗಿರಬೇಕು ; ಆಶ್ರಿತ ಜನರ ಯೋಗಕ್ಷೇಮವನ್ನು ನಡೆಸಬೇಕು ; ಎಲ್ಲಾ ಪೂಜೆಯಲ್ಲಿ ಮುಖ್ಯಾಧಿಕಾರಿಗಳನ್ನು ನೆಲೆಗೊಳಿಸ

ಬೇಕು; ಐಕಮತ್ಯವನ್ನುಂಟುಮಾಡಬೇಕು; ಅವರ ನೀತಿಯನ್ನು ದಿನ ದಿನಕ್ಕೂ ಹೆಚ್ಚಿಸುತ್ತಿರಬೇಕು; ಆಸ್ತಿಕ್ಯ ಬುದ್ಧಿಯನ್ನು ವೃದ್ಧಿಗೊಳಿಸಬೇಕು; ಆಧ್ಯಾತ್ಮಿಕ ಪ್ರೀತಿಯನ್ನು ಬೆಳೆಸಬೇಕು; ವಿಶ್ವಬಾಂಧವ್ಯದ ಭಾವನೆಯನ್ನು ದೃಢಗೊಳಿಸಬೇಕು; ವಿದ್ಯಾಕಲೆಗಳನ್ನು ಹೆಚ್ಚಿಸಬೇಕು; ಪರಸ್ಪರ ಸೌಹಾರ್ದ ಮತ್ತು ಸಹಾನುಭೂತಿಯು ಎಲ್ಲೆಡೆಯಲ್ಲಿಯೂ ತುಂಬಿ ಕೊಂಡಿರಬೇಕು; ಜನವಿಜನ ಪ್ರದೇಶಗಳಲ್ಲಿ ದುಡ್ಡಿನ ಚೀಲವನ್ನು ತಲೆಯಡಿ ಗಿಟ್ಟು ಯಾರೂ ಸುಖವಾಗಿ ನಿದ್ದೆಮಾಡುವಷ್ಟು ಜನರಲ್ಲಿ ವಿಶ್ವಾಸದ ಭೂಮಿಕೆಯು ಇರಬೇಕು; ಗೋವುಗಳನ್ನೂ ಹೆಣ್ಣುಮಕ್ಕಳನ್ನೂ ಸಹ ಪೂಜ್ಯ ಪವಿತ್ರದೃಷ್ಟಿಯಿಂದ ನೋಡುವ ಅಭ್ಯಾಸವು ಎಲ್ಲಾ ಜನತೆಗಿರಬೇಕು; ಸ್ವೇತರವಾದ ಯಾವ ಸ್ತ್ರೀಯನ್ನು ವಯೋನುಗುಣವಾಗಿ ತನ್ನ ತಾಯಿ ಯಂತೆಯೂ, ಅಕ್ಕತಂಗಿಯರಂತೆಯೂ, ಮಕ್ಕಳಂತೆಯೂ ನೋಡುವಂತಹ ದೊಂದು ಎಲ್ಲಾ ಜನರ ಶೀಲವೇ ಆಗಿರಬೇಕು. ಪ್ರಜಾ ಮತ್ತು ಅಧಿಕಾರ ವರ್ಗಕ್ಕೆ ಲಂಚಕೊಡುವ, ಪಡೆಯುವ ಸಂಸ್ಕಾರವೇ ಇರಬಾರದು. ಅಣೆ ಕಟ್ಟು ಮುಂತಾದ ರಾಷ್ಟ್ರದ ಕಾರ್ಯಗಳು ಒಬ್ಬನ ನೇತೃತ್ವದಲ್ಲಿ ನಡೆಯು ವಾಗ ರಾಷ್ಟ್ರದ ಹಣ ಎಂಬ ಭಾವನೆ ಅವನಲ್ಲಿ ಒಡಮೂಡಿ, ಒಂದು ಆಣೆ ಪೈಯನ್ನೂ ವ್ಯರ್ಥ ಖರ್ಚುಮಾಡದೆ, ಶ್ರಮೋಚಿತ ಸಂಬಳವನ್ನು ಮಾತ್ರ ಸ್ವೀಕರಿಸಿ ಉಳಿದ ಎಲ್ಲಾ ಹಣವನ್ನೂ ತಿರುಗಿ ಒಪ್ಪಿಸುವಷ್ಟು ಪ್ರಾಮಾಣಿ ಕತೆ ರಾಷ್ಟ್ರದ ಜನರಲ್ಲಿರಬೇಕು. ಅನೇಕ ಪಶುಪಕ್ಷಿಗಳ ಸಂಗ್ರಹದಿಂದಲೂ ಉದ್ಯಾನಗಳಿಂದಲೂ, ರಮಣೀಯ ಪ್ರಾಕಾರಗಳಿಂದಲೂ ಒಳ್ಳೆ ಮನೋಹರ ವಾಗಿ ನೋಡಿದಲ್ಲೆಲ್ಲಾ ರಾಷ್ಟ್ರವು ಒಂದು ಸಾತ್ವಿಕಭಾವನೆಯನ್ನುಂಟು ಮಾಡುವಂತಹದ್ದಾಗಬೇಕು. ರಾಷ್ಟ್ರದಲ್ಲಿ ಧನಧಾನ್ಯಾದಿಗಳ ಸಮೃದ್ಧಿ ಇರಬೇಕು.

ರಾಷ್ಟ್ರದ ಎಲ್ಲಾ ಜನರೂ ನಿರ್ವ್ಯಸನಿಗಳಾಗಿರಬೇಕು. ಯಾರ ಒಂದು ಕಾಸೂ ಅಯೋಗ್ಯ ಕಾರ್ಯಕ್ಕೆ ಖರ್ಚಾಗಬಾರದು. ಸುಲಭ ಸಲಕರಣೆ ಯಿಂದ ಸರಳಶಾಂತಜೀವನವನ್ನು ಸಾಗಿಸಬೇಕು. ಆದಾಯಕ್ಕಿಂತ ಖರ್ಚನ್ನು ಯಾವಾಗಲೂ ಕಡಮೆಯೇ ಇಟ್ಟಿರಬೇಕು. ದೇವರುತ್ಸವ, ಶ್ರಾದ್ಧಪಕ್ಷ, ಸತ್ಪಾತ್ರ, ಸಾರ್ವಜನಿಕ ಕಾರ್ಯಗಳು, ಧರ್ಮಸಂಸ್ಥೆಗಳು

ಇವೇ ದ್ರವ್ಯದಾನಕ್ಕೆ ಅರ್ಹವಾದ ಸ್ಥಳಗಳಾಗಿರಬೇಕು. ಯಾರ ಬಾ
ಯಲ್ಲಿಯೂ ಒಂದು ಕೆಟ್ಟ ಮಾತು ಇರಬಾರದು. ಮಾತಿನ ಮಾಧು
ದಲ್ಲಿಯೇ ಹೃದಯದ ಪಾವಿತ್ರ್ಯ ಮತ್ತು ವಿಶಾಲತೆಗಳು ಹೊರಸೂಸಬೇ
ಪವಿತ್ರಪಾವನ ತೀರ್ಥಕ್ಷೇತ್ರಗಳು ಮತ್ತು ದೇವಸ್ಥಾನಗಳು ಮಠ
ಗಳು ಪರಮಾತ್ಮನ ದಿವ್ಯ ಸಾಕ್ಷಾತ್ಕಾರ ಮಾಡಿಕೊಡುವ ಮತ್ತು ಎ
ಆಪತ್ತಿನಿಂದ ಬಿಡಿಸಿ ಕ್ಷೇಮವನ್ನೀಯುವ ರಾಷ್ಟ್ರಮಂದಿರದ ಆಧಾರಸ್ತ
ಗಳು ಮತ್ತು ತೊಲೆಗಳಾಗಿರುವುವು. ಅವುಗಳ ಭದ್ರತೆಮೇಲೆ ರಾಷ್ಟ್ರ
ಭವಿತವ್ಯವಿರುತ್ತದೆ. ಇವು ಧರ್ಮಗಳನ್ನು ಕಲಿಸುವ ಪಾಠಶಾಲೆಗಳಾ
ಬೇಕು. ಇವುಗಳ ದರ್ಶನದಿಂದಲೇ ಮನಸ್ಸಿಗೆ ಶಾಂತಿಯುಂಟಾಗಬೇ
ಸಂಸಾರದ ಕಷ್ಟನಷ್ಟಗಳನೆಲ್ಲಾ ಮರೆಯಿಸಬೇಕು. ಬೆಂದ ಒಡಲಿಗೆ
ಸುಖ ಶಾಂತಿಯು ಆಶ್ರಯವಾಗಿ ಪರಿಣಮಿಸಬೇಕು. ದೇವಸ್ಥಾನ ಮ
ಆಡಳಿತದಾರರು ಮಠ ಮತ್ತು ಮಠಾಧಿಪತಿಗಳು ಅಷ್ಟು ಉಚ್ಚಕೋಟಿ
ಪಾವಿತ್ರ್ಯದಿಂದ ಸ್ವಭಾವ ನಿರ್ಮಲರಾಗಿರಬೇಕು. ಅವರು ತಮ್ಮ ದರ್ಶ
ಮಾತ್ರದಿಂದಲೇ ಆಸುರೀಭಾವನೆಗಳ ದುಷ್ಪ್ರವೃತ್ತಿಗಳನ್ನು ನಾಶಿಸಿ ದೈ
ಸಂಪತ್ತಿನ ಸಾಮ್ರಾಜ್ಯವನ್ನು ಹೆಚ್ಚಿಸಬೇಕು. ಅವರ ಆಶ್ರಯದಲ್ಲಿ ಜನ
ಹಾಯಾಗಿ ವಿಶ್ರಾಂತಿ ಸಿಗಬೇಕು. ಧರ್ಮತತ್ವವು ನೇರವಾಗಿ ತಿಳಿದು
ಬೇಕು. ಎಲ್ಲಾ ಸಾಧುಸನ್ಯಾಸಿಗಳ ಮೇಲೆ ಈ ಹೊಣೆಗಾರಿಕೆ ಇದೆ. ತ
ತಪೋಬಲದಿಂದ ಸಮಾಜವನ್ನು ಎತ್ತಿ ಹಿಡಿದು, ಹಲವು ಬಗೆಯಿಂದ ಅ
ಚಾರಿತ್ರ್ಯವನ್ನು ತಿದ್ದಿ ಪರಮಾತ್ಮಸಾಕ್ಷಾತ್ಕಾರದ ಕಡೆಗೆ ಕರೆದೊಯ್ಯು
ಇವರ ಕಾರ್ಯ. ಇದನ್ನು ಅವರು ಚೆನ್ನಾಗಿ ಮನಗೊಂಡಿರಬೇ
ಶುದ್ಧಾತ್ಮರಾದ ಅವರ ಸಂದೇಶದಂತೆ ವರ್ತಿಸಿ ಧನ್ಯರಾಗುವುದೇ ಮಾ
ದೇಹದ ಸಾಫಲ್ಯವೆಂಬೀ ಅರಿವು ಜನರ ನರನರಗಳಲ್ಲಿ ಪ್ರವಹಿಸು
ಬೇಕು. ಅದು ಭಾರತೀಯರ ಲಕ್ಷಣ, ಸ್ವರಾಷ್ಟ್ರದ ನಿಷ್ಠೆ. ರಾಷ್ಟ್ರ
ಯಾರಿಗೂ ದೈನ್ಯ ದಾರಿದ್ರ್ಯವಿರಬಾರದು. ಅಡ್ಡಿ ಅಡಚಣೆಗಳಲ್ಲಿ ಅನ
ನೆಂಬ ಭಾವನೆ ಬಾರದೆ ಎಲ್ಲರೂ ಪರಸ್ಪರ ಸಹಾಯವನ್ನೀಡುವ ಆ
ವ್ಯವಹಾರ ಎಲ್ಲಾ ಕಡೆಗೂ ತೋರಿಬರಬೇಕು. ಒಬ್ಬನೇ ಹೋಗು
ಹಾದಿಯಲ್ಲಿ ಅಸಹಾಯನಾಗಿ ಬಿದ್ದವನನ್ನು ಹೆಗಲಮೇಲೆ ಹೊತ್ತು

ಶಾಲೆಗೆ ಮುಟ್ಟಿಸಬೇಕಾದರೆ ಎಂಥ ಆಚಾರಶೀಲ ಬ್ರಾಹ್ಮಣನಿಗೂ ಇವನು ಹೀನ ಜಾತಿಯ ಅಸ್ಪೃಶ್ಯ ಎಂಬ ಭಾವನೆ ಆ ಕಾಲಕ್ಕೆ ಅವನ ಹೃದಯದಲ್ಲಿ ಏಳದಿರುವವಮುಟ್ಟಿನ ಭೂತದಯೆ ಜನರಲ್ಲಿ ಬಲಿತಿರಬೇಕು. ಅನಂತರ ಪ್ರಾಯಶ್ಚಿತ್ತಮಾಡಿಕೊಳ್ಳುವ ಆಚಾರ ಪ್ರೇಮವೂ ಅವನಲ್ಲಿ ಮನೆ ಮಾಡಿರ ಬೇಕು. ಅದುವೇ ಭಾರತದಲ್ಲಿದ್ದ ಉನ್ನತ ಮನುಷ್ಯ ಜಾತಿಯ ಒಂದು ಆದರ್ಶ ಜೀವನ. ಅನ್ಯಾಯ, ವಿಷಮತೆ, ಹುಂಬುತನ ಮತ್ತು ವಂಚನೆ ಹೇಗೆ ನೋಡಿದರೂ ಎಲ್ಲಿಯೂ ಕಾಣಬಾರದು. ಅದೊಂದು ಆದರ್ಶ ರಾಜ್ಯಪದ್ಧತಿ ಮತ್ತು ನಿಜವಾದ ಮಾನವರ ರಾಜ್ಯ. ಸ್ವರಾಜ್ಯದಲ್ಲಿ ಅಧಿಕಾರಿ ಮತ್ತು ಪ್ರಜೆಗಳಲ್ಲಿ ಪ್ರೇಮದ ಸಂಬಂಧವಿರಬೇಕು. ಹಿತದೃಷ್ಟಿ ಯಿರಬೇಕು. ಅಧಿಕಾರಿ ವರ್ಗದವರು ನಿಕಟಸಂಬಂಧಿಗಳಂತೆ ಕಾಣ ಬೇಕು. ಪರಾಕಾಷ್ಟೆಗೆ ಮುಟ್ಟಿರುವ ಶುದ್ಧ ನೀತಿಯೇ ನಾಗರೀಕತೆ ಎಂಬು ದಾಗಿ ಹೇಳಿಸಿಕೊಳ್ಳುವುದು. ಭಾರತವರ್ಷದ ರಾಜ್ಯಪದ್ಧತಿಗೆ ರಾಮ ರಾಜ್ಯದ ಗೌರವದ ಒಂದು ಪವಿತ್ರ ಹೆಸರು ಕೊಟ್ಟಿದ್ದಾಗಿದೆ. ಮರ್ಯಾದಾ ಪುರುಷೋತ್ತಮನಾದ ಶ್ರೀರಾಮನ ಆಚರಣವು ಮತ್ತು ಆತನ ಎಲ್ಲರಿಗೂ ಹಿತವಾದ ವಚನಗಳು ಭಾರತವಾಸಿಯರಿಗೆ ಆಚರಣೆಗೆ ಮೇಲ್ಪಙ್ತಿ ಯಾಗಿರಬೇಕು. ಎಲ್ಲಾ ಅನರ್ಥಪರಂಪರೆಗೆ ಕಾರಣವೇನೆಂದು ಆಳವಾಗಿ ವಿಚಾರಿಸುವಲ್ಲಿ, ತತ್ವ ವಿಚಾರದ ಮತ್ತು ತಾತ್ವಿಕ ಆಚರಣದ ಅಭಾವವೇ ಎಂದು ಒಂದೇ ಒಂದು ಕಾರಣ ಹೇಳಬಹುದು. ಈ ದೃಷ್ಟಿಯ ಮೂಲಕ ಅಪಸ್ವಾರ್ಥದಿಂದ ಉಂಟಾಗುವ ಎಲ್ಲಾ ಅನರ್ಥ ಪರಂಪರೆಗಳಿಂದ ರಹಿತ ರಾಗಿ ಭಾರತೀಯರು ಒಂದು ಸರ್ವಾಂಗಪೂರ್ಣವಾದ ಎಲ್ಲಾ ವಿಷಯದ ಆದರ್ಶ ಪದ್ಧತಿಯನ್ನು ಕೈಕೊಂಡು ಮಿಕ್ಕ ಮಾನವಜಾತಿಗೂ ಮೇಲ್ಪಙ್ತಿ ಯಾಗಿ ನಿಲ್ಲಲು ಅಂತಹ ಶ್ರೀರಾಮನ ತತ್ವವಿಚಾರ ಮತ್ತು ತಾತ್ವಿಕ ಆಚರಣೆಯ ಪರಿಶೀಲನೆ ನಾವು ಮಾಡುತ್ತಿದ್ದೇವೆ.

## ಭರತನಿಗೆ ಶ್ರೀರಾಮನ ಉಪದೇಶ

**"ತಮೇವಂ ದುಃಖಿತಂ ಪ್ರೇಕ್ಷ್ಯ,"** ಶ್ರೀ ಭರತನನ್ನು ದುಃಖಿತ ನನ್ನಾಗಿ ಕಂಡ ಶ್ರೀರಾಮನು ಆತನ ದುಃಖವನ್ನು ಪರಿಹರಿಸಲು ಹೇಳಿದ

ಮಾತುಗಳನ್ನು ಆಲಿಸೋಣ. ದುಃಖವನ್ನು ಸಂತೈಸುವ ಈ ಮಾತು ಗಳನ್ನು ಕೇಳಿ ಆಲೋಚಿಸಿ ಅಳವಡಿಸಿಕೊಂಡರೆ ನಮ್ಮ ದುಃಖವನ್ನು ಇ ಪರಿಹರಿಸುವೆಂಬುದರಲ್ಲಿ ಸಂದೇಹವಿಲ್ಲ.

ನಾತ್ಮನಃ ಕಾಮಕಾರೋಽಸ್ತಿ ಪುರುಷೋಽಯಮನೀಶ್ವರಃ ।
ಇತಶ್ಚೇತರತಶ್ಚೈನಂ ಕೃತಾಂತಃ ಪರಿಕರ್ಷತಿ ॥ ೧೫

(ವಾ. ರಾ. ಅ. ಸರ್ಗ ೧೦೫)

ಭರತ! ನನ್ನ ವನವಾಸಕ್ಕೆ ತಾಯಿಯಾದ ಕೈಕೆಯಾಗಲೀ, ತಂ ಯಾದ ದಶರಥ ಮಹಾರಾಜನಾಗಲೀ ಕಾರಣರಾಗುವುದಿಲ್ಲ. ಯೋಗವೆಂ ಡೊಂದು ಪ್ರತಿಯೊಬ್ಬರಿಗೂ ಇದ್ದೇ ಇರುವುದು. ಅದು ಯಾರನ್ನಾದ ಮುಂದುಹಾಕಿ ತನ್ನ ಕಾರ್ಯವನ್ನು ಮಾಡಿಸುವುದು. ತನಗೆ ಅನುಕೂ ವಾದ ವಾತಾವರಣವನ್ನು ನಿರ್ಮಿಸುವುದು. ಈ ಯೋಗಕ್ಕೆ ಈಶಸಂಕಲ್ಪ ಭವಿತವ್ಯತೆ, ದೈವ, ಪ್ರಾರಬ್ಧಾದಿ ಹೆಸರುಗಳು ಇರುವುವು. ಎಲ್ಲರೂ ಇದ ಒಳಪಟ್ಟವರೇ ಸರಿ. ಇದನ್ನು ಲೆಕ್ಕಿಸದೆ ಸ್ವತಂತ್ರತೆಯಿಂದ ಮನಸ್ಸಿ ಬಂದಂತೆ ನಡೆಯಲು ಯಾರಿಂದಲೂ ಸಾಧ್ಯವಿಲ್ಲ. ಈ ಭವಿತವ್ಯತೆಯ ಮನುಷ್ಯನನ್ನು ಅಲ್ಲಲ್ಲಿ ತಿರುಗಿಸುವುದು. ಮನುಷ್ಯನ ಆಗು-ಹೋಗು ಗಳಿಗೆಲ್ಲಾ ಇದೇ ಕಾರಣ. ಆದುದರಿಂದ ನನ್ನ ವನವಾಸಕ್ಕೆ ತಂದೆ ದಶರಥನಾಗಲೀ, ತಾಯಿ ಕೈಕೇಯಿಯಾಗಲೀ ಇವರಿಬ್ಬರ ಪೈಕಿ ಒಬ್ಬರೂ ಕಾರಣರಲ್ಲ. ತಾಯಿಯ ಮೇಲೆ ಬೇಸರ ಬೇಡ. ಇದನ್ನು ಮನಸ್ಸಿನಲ್ಲಿಟ್ಟು ವ್ಯಥೆಪಡಬೇಡ. 'ಕಾಮಕಾರಃ' ಎಂದರೆ ಇಚ್ಛೆಯಂತೆ ಮಾಡು ವಿಕೆಯು, 'ಅನೀಶ್ವರಃ' ಎಂದರೆ ಅಸ್ವತಂತ್ರ, 'ಆತ್ಮಃ' ಎಂದರೆ ಇ ದೇಹಧಾರೀ, 'ಕೃತಾಂತಃ' ಎಂದರೆ ದೈವ, ಭವಿತವ್ಯತಾದಿ ಎಂ ತಿಳಿಯಬೇಕು.

ಸರ್ವೇಕ್ಷಯಾಂತಾ ನಿಚಯಾಃ ಪತನಾಂತಾಃ ಸಮುಚ್ಛ್ರಯಾಃ ।
ಸಂಯೋಗಾ ವಿಪ್ರಯೋಗಾಂತಾಃ ಮರಣಾಂತಂ ಚ ಜೀವಿತಂ ॥ ೧೬

(ವಾ. ರಾ. ಅ. ಸರ್ಗ ೧೦೫)

ನಶಿಸಿಹೋಗುವಂತಹ ಕಾಲವು ಬರುವವರೆಗೆ ಮಾತ್ರ ಈ ಎಲ್ಲವೂ ಇರುವುವು. ಯಾವುದೊಂದೂ ಶಾಶ್ವತವಲ್ಲ. ಕಷ್ಟಪಟ್ಟು ಶೇಖರಿಸಿದ ಹಣವೂ ಅದರ ಅವಧಿಯು ತೀರಿದೊಡನೆ ಆಶ್ಚರ್ಯವಾಗಿ ಇಲ್ಲದಂತಾಗು

ವುದು. ಪ್ರಯತ್ನಪಟ್ಟು ಬ್ರಹ್ಮಪಟ್ಟವನ್ನೇ ದೊರೆಕಿಸಿಕೊಂಡರೂ ಅದಕ್ಕೂ ಕಾಲದ ಅವಧಿ ಇದೆ. ಎಷ್ಟು ಉನ್ನತವಾದ ಪದವಾದರೂ ತನ್ನ ನಾಶದ ಕಾಲ ಬರುವವರೆಗೇ ಸರಿ. ಸೇರುವಿಕೆಯು ಅಗಲುವ ಕಾಲ ಬರುವವರೆಗೇ ಸರಿ. ಆ ಕಾಲ ಬಂದರೆ ಸಾಕು. ತಂದೆ-ಮಕ್ಕಳು, ತಾಯಿ-ಮಕ್ಕಳು, ಸತಿ-ಪತಿಗಳು ತಾನಾಗಿ ಅಗಲುವರು. ಕೊನೆಗೆ ಮರಣವಂತೂ ಯಾರಿಗೂ ಬಿಟ್ಟಿದ್ದಲ್ಲ. ಮರಣದವರೆಗೆಯೇ ಇಲ್ಲಿಯ ಜೀವನ. ಭರತ! ಇಲ್ಲಿ ಯಾವುದು ಶಾಶ್ವತವಿದೆ? ಹೋದ ವಸ್ತುವಿನ ಬಗ್ಗೆ ಶೋಕವನ್ನು ಏಕೆತಾನೆ ಮಾಡಬೇಕು? ಒಂದು ದಿನ ನಷ್ಟವಾಗಿಹೋಗುವುದೇ ಈ ಎಲ್ಲದರ ಸ್ವಭಾವ ಎಂದಾಗುವಲ್ಲಿ, ಇಲ್ಲವೆಂದು ವ್ಯಸನಪಡುವುದಾಗಲೀ, ಇದೆ ಯೆಂದು ಹಿಗ್ಗುವುದಾಗಲೀ ಯಾವ ಪ್ರಯೋಜನವುಳ್ಳದ್ದು? ಇದು ಹೋದರೆ ಎಷ್ಟೋ ಇದ್ದರೂ ಅಷ್ಟೇ ಸರಿ. ತತ್ವನಿಷ್ಠರು ಇಲ್ಲದಿದ್ದುದನ್ನು ಹವಣಿಸುವುದಿಲ್ಲ. ಇರುವುದನ್ನು ವಿಶೇಷವೆಂದು ಗ್ರಹಿಸುವುದಿಲ್ಲ. ಹೋದರೆ ವ್ಯಸನಪಡುವುದಿಲ್ಲ. ಪಕ್ವವಾದ ಹಣ್ಣು ತನ್ನ ತೊಟ್ಟನ್ನು ಬಿಟ್ಟು ತಟ್ಟನೆ ಭೂಮಿಗೆ ಬೀಳುವಂತೆಯೂ, ಘಟ್ಟಮನೆ ಜೀರ್ಣವಾಗಿ ಕುಸಿದುಹೋಗುವಂತೆಯೂ, ಹಗಲು ರಾತ್ರಿಯಾಗುವಂತೆಯೂ, ನದಿಯ ನೀರು ಹರಿದುಹೋಗುವಂತೆಯೂ ಈ ಎಲ್ಲವನ್ನೂ ಬಿಟ್ಟು ಮನುಷ್ಯನು ಮೃತಿಗಯ್ಯುವನಲ್ಲವೆ, ಭರತ? ತಂದೆಯವರ ಬಗ್ಗೆ ವ್ಯಸನಮಾಡಬೇಡ. ನಮ್ಮ ಬಾಳೂ ಶಾಶ್ವತವೆಂದು ಗ್ರಹಿಸಬೇಡ. ಜಗತ್ತಿನ ಬೆಡಗು ಬಿನ್ನಾಣ ಗಳಲ್ಲಿ ಹುರುಳಿಲ್ಲ. ಜನ್ಮತಾಳಿದ ಕ್ಷಣದಿಂದಲೇ ಆಯುಷ್ಯ ಗತಿಸಲು ಪ್ರಾರಂಭಿಸುವುದು. ಕ್ಷಣೇ ಕ್ಷಣೇ ಕ್ಷೀಣವಾಗುತ್ತಾ ಕೊನೆಯಲ್ಲಿ ನಶಿಸಿ ಹೋಗುವವಿದೆಲ್ಲವನ್ನೂ ನಂಬಿ ಮೋಸಹೋಗುವವರಿಗೆ ಸುಖವೆಲ್ಲಿ? ತರುಣ ದೇಹದ ಸೊಬಗು, ಒಲವು ವೈಯ್ಯಾರಗಳೆಲ್ಲಾ ಆ ಮುದಿ ದೇಹ ದಲ್ಲಿ ತೋರವು. ಅದನ್ನು ನೋಡಿದರೆ ಅಷ್ಟು ಮನಸ್ಸು ಹೇಸುವುದು— ಮುಪ್ಪಿನಲ್ಲಿ ಚರ್ಮವು ನೆರಿ ಕಟ್ಟುವುದು. ಕೂದಲು ಬೆಳ್ಳಗಾಗುವುದು. ದೇಹವೆಲ್ಲಾ ಶಿಥಿಲವಾಗುವುದು. ಇಂದ್ರಿಯಗಳ ಶಕ್ತಿಯೆಲ್ಲಾ ಕುಗ್ಗು ವುದು. ಅರಿವು-ಮರೆವಿಗೆ ಪ್ರಾರಂಭವಾಗುವುದು. ಆ ಮುಪ್ಪಿನ ಭವಣೆಯನ್ನು ಸಹಿಸಲು ಬಲು ಕಷ್ಟ. ಮೋಕ್ಷದ ಸಾಧನೆ ಇದರೊಳಗೇ ಆಗತಕ್ಕದ್ದು.

ನಂದಂತ್ಯುದಿತ ಆದಿತ್ಯೇ ನಂದಂತ್ಯಸ್ತಮಿತೇ ರವೌ ।
ಆತ್ಮನೋ ನಾವಬುಧ್ಯಂತೇ ಮನುಷ್ಯಾ ಜೀವಿತ ಕ್ಷಯಮ್ ॥ ೩೪
(ವಾ. ರಾ. ಅ. ಸರ್ಗ ೧೦೫

ಮನುಷ್ಯರು ಸೂರ್ಯನ ಉದಯಕಾಲಗಳ ಸೃಷ್ಟಿ ಚಮತ್ಕಾರವನ್ನು ಕಂಡು ಅಲ್ಲಿಯ ಆ ಸುಂದರ ದೃಶ್ಯದಿಂದ ಹರ್ಷಿತರಾಗುವರಲ್ಲದೆ ಜೀವಿತ ಕ್ಷಯವನ್ನರಿಯರು. ಸೂರ್ಯೋದಯವಾದೊಡನೆ ದುಡುಮೆಯ ಹುರು... ನಿಂದ ಹರ್ಷಿತರಾಗುವರು. ಕಣ್ಣು ಕಟ್ಟಿದ ಗಾಣದ ಎತ್ತಿನಂತೆ ದುಡಿ... ಸೂರ್ಯಾಸ್ತವಾದೊಡನೆ ಕಾಮೋಪಭೋಗದ ನಗು ಸೂಸುವುದಲ್ಲದೆ ತೂತುಬಿದ್ದ ಕೊಡದಿಂದ ನೀರು ಸುರಿದುಹೋಗುವಂತೆ ಜೀವಿತವು ನಷ್ಟ... ಹೋಗುತ್ತಿದೆ ಎಂಬ ಅರಿವು ಉಂಟಾಗದು. ಋತುಗಳ ಪರಿವರ್ತನೆ ಯಲ್ಲಿಯೂ ಹಾಗೇ ಜೀವಿತ ಕ್ಷಯವನ್ನು ಅರಿಯದೆಯೇ ಸುಖಿಸುವನು. ನಿಜವಾಗಿಯೂ ಈ ತಾರುಣ್ಯದಲ್ಲಿಯೇ ಆಳವಾಗಿ ವಿಚಾರಿಸಿ ಪರಮಾರ್ಥ ಸಾಧಿಸತಕ್ಕದ್ದೇ ಮಾನವನ ಮುಖ್ಯ ಕರ್ತವ್ಯ.

ಯಥಾ ಕಾಷ್ಠಂ ಚ ಕಾಷ್ಠಂ ಚ ಸಮೇಯಾತಾಂ ಮಹಾರ್ಣವೇ ।
ಸಮೇತ್ಯ ಚ ವ್ಯಪೇಯಾತಾಂ ಕಾಲಮಾಸಾದ್ಯ ಕಂಚನ ॥ ೩೬
ಏವಂ ಭಾರ್ಯಾಶ್ಚ ಪುತ್ರಾಶ್ಚ ಜ್ಞಾತಯಶ್ಚ ಧನಾನಿ ಚ ।
ಸಮೇತ್ಯ ವ್ಯವಧಾವನ್ತಿ ಧ್ರುವೋಹ್ಯೇಷಾಂ ವಿನಾಭವಃ ॥ ೨೭
(ವಾ. ರಾ. ಅ. ಸರ್ಗ ೧೦೫

ಎಲ್ಲೆಲ್ಲಿಂದಲೋ ಬಂದ ಎರಡು ಕಾಷ್ಠಗಳು ಸಮುದ್ರದಲ್ಲಿ ಹೇಗೆ ಸ್ವಲ್ಪಕಾಲದವರೆವಿಗೆ ಒಂದು ಕಡೆಗೆ ಸೇರಿ ಅಗಲುವುವೋ ಅದರಂತೆಯೇ ಎಲ್ಲೆಲ್ಲಿಂದಲೋ ಬಂದು ಸಂಸಾರದಲ್ಲಿ ಕೆಲಕಾಲ ಸೇರಿ ಇದ್ದು ಕಾಲ ಬಂದೊಡನೆಯೇ ಆ ಹೆಣ್ಣು, ಹೊನ್ನು, ಮಣ್ಣು, ಮಕ್ಕಳು, ನೆಂಟರೆಲ್ಲಾ ಅಗಲುವರು. ಮೃತ್ಯುವಿನ ನಂತರ ಯಾರ ಸಂಬಂಧವು ಯಾರಿಗಿರುವುದು!

ನಾತ್ರ ಕಶ್ಚಿದ್ಯಥಾ ಭಾವಂ ಪ್ರಾಣೀ ಸಮಭಿವರ್ತತೇ ।
ತೇನ ತಸ್ಮಿನ್ನಸಾಮರ್ಥ್ಯಂ ಪ್ರೇತಸ್ಯಾಸ್ತ್ಯನುಶೋಚತಃ ॥ ೨೮
ಯಥಾ ಹಿ ಸಾರ್ಥಂ ಗಚ್ಛನ್ತಂ ಬ್ರೂಯಾತ್ಕಶ್ಚಿತ್ಪಥಿಸ್ಥಿತಃ ।
ಅಹಮಪ್ಯಾಗಮಿಷ್ಯಾಮಿ ಪೃಷ್ಠತೋ ಭವತಾಮಿತಿ ॥ ೨೯

ಏವಂ ಪೂರ್ವೈರ್ಗತೋ ಮಾರ್ಗಃ ಪಿತೃ ಪೈತಾಮಹೋ ಧ್ರುವಃ ।
ತಮಾಪನ್ನಃ ಕಥಂ ಶೋಚೇದ್ಯಸ್ಯ ನಾಸ್ತಿ ವ್ಯತಿಕ್ರಮಃ ॥ ೩೦ ॥
(ವಾ. ರಾ. ಅ. ಸರ್ಗ ೧೦೫)

ಈ ಲೋಕದಲ್ಲಿ ತನ್ನ ಮಡದಿ ಮಕ್ಕಳನ್ನೂ, ಆಪ್ತೇಷ್ಟರನ್ನೂ ಒಡಗೂಡಿ ಯಾವಾಗಲೂ ಎಡೆಬಿಡದಿರಬೇಕೆಂದು ಕಂಡರೂ ತನ್ನ ಈ ಕೋರಿಕೆಯ ಪ್ರಕಾರವಾಗಿ ಹಾಗೆ ಮಾತ್ರ ಯಾರೂ ಇರುವುದಿಲ್ಲ. ಸತ್ತವನ ಬಗ್ಗೆ ಶೋಕಮಾಡಬಲ್ಲನಲ್ಲದೆ ಆತನನ್ನು ಬದುಕಿಸಲರಿಯನು. ಮುಂದೆ ಹೋಗುತ್ತಿರುವವರನ್ನು ಕಂಡು ನಾನೂ ಕೂಡ ನಿಮ್ಮ ಹಿಂದೆ ಬರುತ್ತೇನೆಂದು ಹೇಗೆ ಓರ್ವ ಮನುಷ್ಯನು ಹೇಳಿ ಅವರನ್ನು ಹಿಂಬಾಲಿಸು ವನೋ, ಅದರಂತೆಯೇ ಯಾವ ಮೃತ್ಯುಮಾರ್ಗವನ್ನು ಹಿಡಿದು ಆತನ ತಂದೆ ತಾಯಿಗಳು ಪಿತೃ ಪಿತಾಮಹರು ಈ ಮೊದಲು ಹೋಗಿರುವರೋ ಈತನೂ ಸಹ ಆ ಮಾರ್ಗವನ್ನೇ ಅವಲಂಬಿಸಿ ಅವರನ್ನು ಹಿಂಬಾಲಿಸುವನು. ಯಾವುದನ್ನು ಹೋಗಲಾಡಿಸಲು ಸಾಧ್ಯವಾಗದೋ ಅಂತಹ ಮೃತ್ಯುವಿನ ಬಗ್ಗೆ ವ್ಯರ್ಥಶೋಕ ಮಾಡುತ್ತ ಆಯುಷ್ಯ ಹಾಳುಮಾಡುವುದಕ್ಕಿಂತಲೂ ಅಷ್ಟೇ ಕಾಲ ಜನ್ಮ ಜರಾ ಮರಣವನ್ನು ಪರಿಹರಿಸಲು ಹೇಳಿದ ಪರಮಾತ್ಮ ಪ್ರಾಪ್ತಿಯ ಸಾಧನವನ್ನು ಮಾಡಿದರೆ ಯಾವ ಮನುಷ್ಯನು ತಾನೆ ಮುಕ್ತ ನಾಗಲಿಕ್ಕಿಲ್ಲ?

ವಯಸಃ ಪತಮಾನಸ್ಯ ಸ್ರೋತಸೋವಾಽನಿವರ್ತಿನಃ ।
ಆತ್ಮಾಸುಖೇ ನಿಯೋಕ್ತವ್ಯಃ ಸುಖಭಾಜಃ ಪ್ರಜಾಃ ಸ್ಮೃತಾಃ ॥ ೩೧ ॥
(ವಾ. ರಾ. ಅ. ಸರ್ಗ ೧೦೫)

ಹೊಳೆಯ ನೀರಿನಂತೆ ತಾನಾಗಿ ಬರುವ ಮುಪ್ಪನ್ನು ಹೋಗಲಾಡಿ ಸಲು ಅಸಾಧ್ಯವೆಂದರಿತು ಈ ಮೊದಲೇ ತನ್ನನ್ನು ಹೇಗೋ ಅಂತೆಯೇ ಪ್ರಜೆಗಳನ್ನೂ ಸಹ ನಿಜ ಸುಖವನ್ನು ದೊರಕಿಸಿಕೊಡುವ ಮೋಕ್ಷಸಾಧನೆ ಗಳಲ್ಲಿ ನಿಯೋಗಿಸಬೇಕು. ಈ ಶ್ಲೋಕದಲ್ಲಿ ರಾಜ ಅಥವಾ ಮಂತ್ರಿ ಮುಖಂಡರೆಲ್ಲಾ, ಮರಣ ಮುಪ್ಪುಗಳನ್ನು ಹಂಬಲಿಸಿ ತನ್ನಂತೆಯೇ ಎಲ್ಲಾ ಪ್ರಜೆಯೂ ಮೋಕ್ಷಮಾರ್ಗದಲ್ಲಿ ಇರಬೇಕು" ಎಂದೂ ಶ್ರೀರಾಮನ ಉಪದೇಶದ ತಾತ್ಪರ್ಯ.

ಭರತನು ಶ್ರೀರಾಮನನ್ನು ಕರೆದೊಯ್ಯಲು ಪರಿಪರಿಯಾಗಿ ಯ
ಬೇಕಾದರೆ ಬಂದಿರುವ ಇದೊಂದು ಶ್ಲೋಕ. ಇದರಲ್ಲಿ ಒಂದು ಗಂಭೀ
ವಿನೋದವಿದೆ. ಚಾತುರ್ವರ್ಣ್ಯದ ರಕ್ಷಣದ ಬಗ್ಗೆ ಆಗ ಇರುವ ಕರ್ತ
ಬುದ್ಧಿಯು ಇದರಿಂದ ವ್ಯಕ್ತವಾಗುವುದು. ಚಾತುರ್ವರ್ಣ್ಯದ ರಕ್ಷ
ಸ್ವಲ್ಪ ಕಷ್ಟವಾದದ್ದೆನ್ನುವುದು ನಿಜವಾದರೂ ಅದನ್ನು ಬಿಡಲಾಗದೆಂಬ
ಇದರಿಂದ ತೋರಿಬರುವುದು.

## ಭರತನ ಪ್ರಶ್ನೆ

ಅಥ ಕ್ಲೇಶಜಮೇವತ್ವಂ ಧರ್ಮಂ ಚರಿತುಮಿಚ್ಛಸಿ ।
ಧರ್ಮೇಣ ಚತುರೋ ವರ್ಣಾನ್ ಪಾಲಯನ್ ಕ್ಲೇಶಮಾಪ್ನುಹಿ ॥ ೨
(ವಾ. ರಾ. ಅ. ಸರ್ಗ ೧೦

"ಪ್ರಭೋ! ಶ್ರೀರಾಮ! ಧರ್ಮದ ಪಾಲನೆಯಲ್ಲಿ ಕಷ್ಟವಾದ
ಒಳ್ಳೆಯದೆಂದು ನಿಮಗಿದ್ದರೆ ಅರಣ್ಯವಾಸ ಮಾಡಿಯೇ ಕಷ್ಟವನ್ನನುಭ
ಬೇಕೆಂದಿಲ್ಲ. ಧರ್ಮದಂತೆ ಚಾತುರ್ವರ್ಣ್ಯದ ಪರಿಪಾಲನೆ ಮಾಡಿದ
ಇಷ್ಟೇ ಕಷ್ಟವಾಗುತ್ತದೆ. ರಾಜನ ಧರ್ಮದ ಪ್ರಕಾರ ಇದನ್ನೇ ಮಾ
ವುದು ಒಳಿತಾಗುವುದಿಲ್ಲವೆ?"

ಹೀಗೆ ರಾಮನ ಅಚಲ ಮನಸ್ಸನ್ನು ತಿರುಗಿಸಲಾಗದೆ ಭರತ
ಸೋತುಹೋದಮೇಲೆ ಶ್ರೀರಾಮನನ್ನು ತಿರುಗಿಸಲು ಜಾಬಾಲಿ ಋಷಿಗ
ನಾಸ್ತಿಕವಾದವನ್ನು ಹೂಡಿದರೂ ಪ್ರಯೋಜನವಾಗಲಿಲ್ಲ. ಕಬ್ಬಿಣ
ಚಿನ್ನವಾಗುವುದಲ್ಲದೆ ಕಬ್ಬಿಣದ ಸಂಪರ್ಕದಿಂದ ಪರಸಗಲ್ಲೆಂದಿಗಾದ
ಕಬ್ಬಿಣವಾಗುವುದುಂಟೆ?

## ಶ್ರೀರಾಮನು ಜಾಬಾಲಿಗಳಿಗಿತ್ತ ಉತ್ತರ

ಈಗಿನ ಕಾಲದಲ್ಲಿ ಅತ್ಯವಶ್ಯಕವಾದುದರಿಂದ ಶ್ರೀರಾಮನು ಜಾಬಾ
ಋಷಿಗಳಿಗಿತ್ತ ಉತ್ತರವನ್ನು ನೋಡೋಣ! ಇದರಿಂದ ಕಲಿಯುವಂ
ಪಾಠವನ್ನು ಕಲಿಯೋಣ. ರಾಮರಾಜ್ಯದಲ್ಲಿ ರಾಮನ ಉಪದೇಶಕ್ಕೆ ಇದ
ಬೆಲೆ ಯಾವುದಕ್ಕೂ ಇಲ್ಲ.

ಭವಾನ್ ಮೇ ಪ್ರಿಯಕಾಮಾರ್ಥಂ ವಚನಂ ಯದಿಹೋಕ್ತವಾನ್ ।
ಅಕಾರ್ಯಂ ಕಾರ್ಯಸಂಕಾಶಮಪಥ್ಯಂ ಪಥ್ಯಸಂಮಿತಮ್ ॥ ೨
(ವಾ. ರಾ. ಅ. ಸರ್ಗ ೧೦೯

"ಜಾಬಾಲಿ ಮುನಿಗಳೇ! ನನಗೆ ಆಗುವ ಈ ವನವಾಸದ ದುಃಖವನ್ನು ತಪ್ಪಿಸಿ ಅಯೋಧ್ಯೆಯ ಸಿಂಹಾಸನದಲ್ಲಿ ಕುಳ್ಳಿರಿಸಬೇಕೆಂಬುದು ನನ್ನ ಈ ಸುಖದ ಉದ್ದೇಶದಿಂದ ಹೇಳಿದ ಈ ಮಾತು ಅಕರ್ತವ್ಯವಾದುದ್ದನ್ನು ಕರ್ತವ್ಯವೆಂತಲೂ, ಅಹಿತವಾದುದ್ದನ್ನು ಹಿತವೆಂತಲೂ ತೋರಿಸುತ್ತಿದೆ.

ನಿರ್ಮರ್ಯಾದಸ್ತು ಪುರುಷಃ ಪಾಪಾಚಾರ ಸಮನ್ವಿತಃ ।
ಮಾನಂ ನ ಲಭತೇ ಸತ್ಸು ಭಿನ್ನಚಾರಿತ್ರದರ್ಶನಃ ॥ ೩ ॥
(ವಾ. ರಾ. ಅ. ಸರ್ಗ ೧೦೯)

ವೈದಿಕಧರ್ಮಬಂಧನವಿಲ್ಲದವನು ಪಾಪಾಚರಣೆಗೆ ಬೀಳುವನು. ವೇದವಿರುದ್ಧ ಆಚಾರ ವಿಚಾರ ಬೋಧಿಸುವ ಅನ್ಯಮತಗಳ ಅನುಸರಣವೇ ಇದಕ್ಕೆ ಕಾರಣ. ಈ ಪ್ರಕಾರದ ಮನುಷ್ಯನು ಸಜ್ಜನರಿಗೆ ಮಾನ್ಯನಾಗನು. ಎಲ್ಲಾ ಕಡೆಗೂ ಈತನ ನಿಂದೆಯೇ ಆಗುವುದು.

ಕುಲೀನಮಕುಲೀನಂ ವಾ ವೀರಂ ಪುರುಷಮಾನಿನಂ ।
ಚಾರಿತ್ರಮೇವ ವ್ಯಾಖ್ಯಾತಿ ಶುಚಿಂ ವಾ ಯದಿ ವಾಽಶುಚಿಂ ॥ ೪ ॥
(ವಾ. ರಾ. ಅ. ಸರ್ಗ ೧೦೯)

ಸತ್ಕುಲಪ್ರಸೂತನೋ, ವೀರನೋ, ಹೇಡಿಯೋ, ಯೋಗ್ಯ ತಿಳಿವಳಿಕೆಯುಳ್ಳವನೋ ಅಲ್ಲವೋ, ಶುದ್ಧನೋ, ಭ್ರಷ್ಟನೋ ಎಂಬುದನ್ನು ಅವನವನ ಆಚಾರವೇ ತಿಳಿಯಪಡಿಸುವುದು.

ಅನಾರ್ಯಸ್ತ್ವಾರ್ಯ ಸಂಸ್ಥಾನಃ ಶೌಚಾಧೀನಸ್ತಥಾ ಶುಚಿಃ ।
ಲಕ್ಷಣ್ಯವದ ಲಕ್ಷಣ್ಯೋ ದುಃಶೀಲಃ ಶೀಲವಾನಿವ ॥ ೫ ॥

ಅಧರ್ಮಂ ಧರ್ಮವೇಷೇಣ ಯದಹಂ ಲೋಕಸಂಕರಂ ।
ಅಭಿಪತ್ಸ್ಯೇ ಶುಭಂ ಹಿತ್ವಾ ಕ್ರಿಯಾಂ ವಿಧಿ ವಿವರ್ಜಿತಾಮ್ ॥ ೬ ॥

ಕಶ್ಚೇತಯಾನಃ ಪುರುಷಃ ಕಾರ್ಯಾಕಾರ್ಯ ವಿಚಕ್ಷಣಃ ।
ಬಹುಮನ್ಯೇತ ಮಾಂ ಲೋಕೇ ದುರ್ವೃತ್ತಂ ಲೋಕದೂಷಣಮ್ ॥ ೭ ॥
(ವಾ. ರಾ. ಅ. ಸರ್ಗ ೧೦೯)

ಜಾಬಾಲಿಗಳೇ! ನೀವು ಹೇಳಿದ್ದೀರಲ್ಲವೇ, ಒಬ್ಬನೇ ಹುಟ್ಟಿ ಒಬ್ಬನೇ ಸಾಯುವುದೆಂದಾದಮೇಲೆ ಯಾರಿಂದ ಏನು ಆಗತಕ್ಕದ್ದಿದೆ? ತಾಯಿ, ತಂದೆ, ಗುರು, ದೇವರು, ಬಂಧು ಬಳಗ ಎಂದು ಇವರ ದಾಕ್ಷಿಣ್ಯ ಇಟ್ಟು

ಕೊಂಡಾದರೂ ಏನು ಪ್ರಯೋಜನ? ಯಾರಿಗೆ ಯಾರು? ತನಗೆ ತಾನೇ! ಗೋಡೆಗೆ ಮಣ್ಣೇ! ಆದುದರಿಂದ ತಾಯಿ, ತಂದೆ, ಗುರು, ದೇವರು ಎಂದು ಇಟ್ಟುಕೊಂಡು ರಾಜ್ಯಸುಖವನ್ನು ಬಿಟ್ಟು ಪಿತ್ರಾಜ್ಞೆ ಎಂದು ನಿನ್ನಂತೆ ಇಂಥ ವನವಾಸದ ಕಷ್ಟವನ್ನು ಅನುಭವಿಸುವವನು ಬರೀ ಹುಚ್ಚನೇ ಸರಿ. ಆತನ ತಲೆ ಸಮವಿಲ್ಲವೆಂದೇ ಭಾವಿಸಬೇಕು. ಹುಟ್ಟು ವಾಗಲೂ ಯಾರೂ ಇಲ್ಲ; ಸಾಯುವಾಗಲೂ ಯಾರೂ ಇಲ್ಲವೆಂದಾದಮೇಲೆ ಯಾರಿಗೆ ಯಾರು ಏನಾಗಬೇಕು? ತಂದೆ ತಾಯಿಗಳ ವಚನವನ್ನು ಸತ್ಯ ಮಾಡಬೇಕು, ಆಜ್ಞೆಯನ್ನು ಪರಿಪಾಲಿಸಬೇಕು ಎಂಬ ಹುಚ್ಚು ತಲೆಯಲ್ಲಿ ಇಟ್ಟುಕೊಂಡು ಸುಮ್ಮನೆ ದುಃಖವನ್ನನುಭವಿಸುವುದು ಒಂದು ಮರುಳಲ್ಲವೆ?

ಪ್ರವಾಸ ಮಾಡಬೇಕಾದರೆ ಎಲ್ಲೋ ಒಂದು ಕಡೆಗೆ ಧರ್ಮಶಾಲೆ ಯಲ್ಲಿ ಉಳಿದಾಗ ಅಲ್ಲಿ ಗಂಟುಬಿದ್ದ ಜನರಲ್ಲಿ ಒಂದು ರಾತ್ರಿ ಕಳೆದು ಬೆಳಗಾಗುವಾಗ ಅವರ ಸಂಬಂಧವನ್ನು ತೊರೆದು ಹೇಗೆ ಹೊರಟುಹೋಗು ವನೋ ಅಂತೆಯೇ ಪ್ರಾಯ ಬಂದಮೇಲೆ ತಾಯಿ ತಂದೆಗಳ ವಚನ, ಅವರ ಆಜ್ಞೆ, ಅವರ ಮನೆ, ಅವರ ಸ್ವತ್ತು, ಅವರ ರಾಜ್ಯ ಈ ಎಲ್ಲ ಭಾವನೆಗಳನ್ನೂ ಬಿಟ್ಟುಬಿಡಬೇಕು. ಮಗನಿಗೆ ಪ್ರಾಯ ಬಂದಮೇಲೆ ಆ ಎಲ್ಲ ಸ್ವತ್ತೂ ಮಗನಿಗೆ ಸಂಬಂಧಪಟ್ಟುದುದು. ಹೀಗಾಗುವಾಗ ರಾಜ್ಯ ವನ್ನೆಲ್ಲಾ ಬಿಟ್ಟು ಗೃಹಸ್ಥಾಶ್ರಮಕ್ಕೆ ಸಲ್ಲದ ಬಹು ಕಷ್ಟವಾಗಿರುವ ವಾನಪ್ರಸ್ಥಾಶ್ರಮದ ಆಚರಣೆ ಮಾಡುತ್ತಾ ಕಾಡಿನಲ್ಲಿರುವುದೇಕೆ?

ಎಲ್ಲಾ ವೈಭವಗಳಿಂದ ಸಮೃದ್ಧವಾದ ಅಯೋಧ್ಯೆಯ ಪಟ್ಟವನ್ನು ಮಾಡಿಕೊಂಡು ಸ್ವರ್ಗದಲ್ಲಿದ್ದ ಇಂದ್ರನ ಪರಿಯಲ್ಲಿ ಆನಂದದಿಂದಿರು. ನಿನಗೀಗ ದಶರಥನ ಯಾವ ಸಂಬಂಧವೂ ಇಲ್ಲ. ಅವನು ಬೇರೆ, ನೀನು ಬೇರೆ. ಅವನು ಮರಣವನ್ನು ಹೊಂದಿ ಎಲ್ಲಿಗೆ ಹೋಗಬೇಕೋ ಅಲ್ಲಿಗೆ ಹೋದನು. ಮರಣದ ನಂತರ ಅವನೇ ಇಲ್ಲವೆಂದಾದ ಮೇಲೆ ಅವನ ಸಂಬಂಧವೆಲ್ಲುಳಿಯಿತು? ಪಂಚಭೂತಗಳಿಂದ ಆದ ದೇಹ ಪಂಚಭೂತ ಗಳಲ್ಲಿ ಸೇರಿಹೋದಮೇಲೆ ಸತ್ತವನು ಉಳಿಯುವನೆಂಬುವ ಮಾತಿಗೆ ಅರ್ಥ ವಿದೆಯೆ? ಹೀಗೆ ಆತನೇ ಇಲ್ಲದಿರುವಲ್ಲಿ ಆತನು ತನ್ನ ಮಡದಿಗೆ ಕೊಟ್ಟ

ವಚನದ ಪಾಲನೆಯನ್ನು ನೀನು ಮಾಡದಿದ್ದರೆ ನರಕವಾಗುವುದೆಂತು? ಜನ್ಮಕ್ಕೆ ತಾಯಿ ತಂದೆಗಳೇ ಕಾರಣವಾದವರಲ್ಲವೆ? ಅವರ ಮಾತನ್ನು ಹೇಗೆ ತಾನೇ ಮೀರುವುದು ಎಂದೆನ್ನುವೆಯಾ? ರಜ ರೇತಸ್ಸಿನ ಮಿಶ್ರಣ ದಿಂದಲೇ ಗರ್ಭದಲ್ಲಿ ಜನ್ಮವಾಗುವುದಲ್ಲವೆ? ಇದಕ್ಕೆ ಕಾಮವೇ ಹೇತು. ಮುಂದೆ ಯಾವುದೋ ಮಹತ್ತರವಾದ ಸುಖ ಸಿಗುವುದು, ಅದಕ್ಕೆ ಧರ್ಮಾಚರಣೆಯೇ ಮುಖ್ಯ, ಇತ್ಯಾದಿ ಭಾವನೆಯನ್ನು ಮಾಡಿಕೊಂಡು, ಅದರ ಆಶೆಯಿಂದ ತಾನಾಗಿ ಒದಗಿಬಂದ ಸುಖವನ್ನು ತೊರೆದು, ವ್ಯರ್ಥ ವಾಗಿ ದುಃಖವನ್ನು ಅನುಭವಿಸುತ್ತ ವ್ಯರ್ಥವಾಗಿ ಸಾಯುವರು. ಇರು ವಾಗಲೇ ಸುಖವನ್ನನುಭವಿಸದವರು ಸತ್ತಮೇಲೆ (ಇದು ಯಾವುದೂ ಸುಖ ಸಾಧನೆ ಇರದಿರುವಾಗ) ಎಂತಹ ಸುಖವನ್ನು ಅನುಭವಿಸುವರು? ಅವರಿಗೆ ಇರುವಾಗಲೂ ದುಃಖವೇ; ಸತ್ತರೂ ದುಃಖವೇ. ಈ ಧರ್ಮ ಶಾಸ್ತ್ರದ ಮಾತು ಕಟ್ಟಿಕೊಂಡರೆ ಸುಮ್ಮನೆ ಒಂದು ಶ್ರಾದ್ಧದ ಉದಾಹರಣೆ ಯನ್ನು ಆಲೋಚಿಸಿದರೇ ಸಾಕು. ಮರಣಪಟ್ಟಮೇಲೆ ಅವನೇ ಉಳಿಯನು ಎಂಪಾಗುವಲ್ಲಿ, ಆತನಿಗೆ ಸಿಗಬೇಕೆಂದು ಈ ಬ್ರಾಹ್ಮಣರಿಗೆ ಊಟಹಾಕುವುದರಲ್ಲಿ ಏನು ಅರ್ಥವಿದೆ? ತಂದೆಗೂ ಮುಟ್ಟದೆಹೋಗು ವುದೆಂದಾದಮೇಲೆ ಬ್ರಾಹ್ಮಣರನ್ನು ಉಣಿಸಿ ತನ್ನ ಅನ್ನ ವ್ಯರ್ಥ ಖರ್ಚು ಮಾಡುವುದೆಂದರೆ ಇದು ಯಾವ ವ್ಯವಹಾರ ಚಾತುರ್ಯ? ಒಬ್ಬನು ಊಟಮಾಡಿದ್ದು ಇನ್ನೊಬ್ಬನಿಗೆ ಸಲ್ಲುವುದೆಂದರೆ, ಮರಣಪಟ್ಟಮೇಲೆ ಮಾಡುವ ಈ ಶ್ರಾದ್ಧವನ್ನು ಜೀವಿಸಿರುವಾಗಲೇ ಮಾಡಿದರೇನು? ದೂರ ಹೊರ ಊರಿನಲ್ಲಿದ್ದವನ ಹೆಸರಿನಿಂದ ಮನೆಯಲ್ಲಿ ಬೇರೆಯವರಿಗೆ ಉಣಿಸಿ ದರೆ ಆತನಿಗೆ ಅನಾಯಾಸವಾಗಿ ಲಭಿಸುವುದಲ್ಲವೆ? ಈ ಧರ್ಮಶಾಸ್ತ್ರದ ಮಾತುಗಳನ್ನು ಕಟ್ಟಿಕೊಂಡು ಏನು ಮಾಡುತ್ತೀಯೆ? ಈ ಎಲ್ಲಾ ದಾನ ಮಾನಾದಿ ವಿಧಾನಗಳಿಂದ ಧರ್ಮಶಾಸ್ತ್ರವೆಲ್ಲಾ ತಮ್ಮ ಜೀವನವು ಸುಖ ವಾಗಿ ಸಾಗಬೇಕೆಂದು ಬ್ರಾಹ್ಮಣರೇ ಮಾಡಿಟ್ಟದ್ದು.

'ಯಜ್ಞಮಾಡು,' 'ದಾನ ಕೊಡು,' 'ನೀನು ಕಷ್ಟಪಡು' ಇದೆಲ್ಲಾ ಬುದ್ಧಿವಂತರು ತಮ್ಮ ಸ್ವಾರ್ಥಕ್ಕಾಗಿ ಹೇಳುವ ಮಾತು. ಇದನ್ನೆಲ್ಲಾ ಕಟ್ಟಿಕೊಂಡುಹೋದರೆ ಪ್ರಯೋಜನವಿಲ್ಲ. ಪ್ರತ್ಯಕ್ಷವಾಗಿ ಇಲ್ಲಿ ಸಿಗುವ

ಸುಖವನ್ನು ಬಿಟ್ಟು, ಏನೋ ಈ ಕಷ್ಟವನ್ನನುಭವಿಸಿದರೆ ಮುಂದೆ ಸುಖ ಸಿಗುವುದೆಂದು ಭಾವಿಸುವುದು ಬೇಡ. ನಡೆ! ಅಯೋಧ್ಯೆಗೆ ಬಂದು ಸುಖವಾಗಿ ರಾಜ್ಯವನ್ನು ಮಾಡೆಂದು ಹೇಳುವ, ಜಾಬಾಲಿಗಳೇ! ಈ ನಿಮ್ಮ ಮಾತು ಬರಿಯ ನಾಸ್ತಿಕತನದ ಮಾತೇ ಸರಿ. ಈ ವರ್ತನಕ್ರಮವನ್ನು ಕೇಳುವಾಗ 'ಒಳ್ಳೆಯದು ಇದು' ಎಂದು ಕಂಡರೂ ವಿಷಮಿಶ್ರಿತವಾದ ಪಕ್ವಾನ್ನದಂತೆ ತ್ಯಾಜ್ಯವಾಗಿದೆ. ಅನಾರ್ಯರಾಗಿದ್ದು ಆರ್ಯರಂತೆಯೂ, ಅಶುದ್ಧರಾಗಿ ಶುದ್ಧರಂತೆಯೂ, ಅವಲಕ್ಷಣರಾದರೂ ಲಕ್ಷಣವಂತರಂತೆಯೂ, ದುಃಖಿಗಳಾದರೂ ಸುಖಿಗಳಂತೆಯೂ, ನಟನೆಮಾಡತಕ್ಕ ಜನರ ಹೇಳಿಕೆಯಿದು. ಇದಕ್ಕೆ ಸುಖವನ್ನುಂಟುಮಾಡಿ ಶಾಂತಿ ಕೊಡುವ ವೇದಶಾಸ್ತ್ರಗಳ ದಿವ್ಯ ಆಧಾರವಿಲ್ಲ.

## ಶ್ರುತಿಯು ಆಸ್ತಿಕ್ಯ ಉಪದೇಶ

'ಮಾತೃದೇವೋ ಭವ', 'ಪಿತೃದೇವೋ ಭವ', 'ಆಚಾರ್ಯದೇವೋ ಭವ' ಎಂದು ಶ್ರುತಿಯು ತಾಯಿ, ತಂದೆ, ಬ್ರಾಹ್ಮಣರಲ್ಲಿ ದೇವತಾಬುದ್ಧಿಯನ್ನುಂಟುಮಾಡುವುದು. 'ಸತ್ಯಂ ವದ', 'ಧರ್ಮಂಚರ' ಸತ್ಯವನ್ನು ನುಡಿ, ಧರ್ಮದಂತೆ ನಡೆದುಕೊ. 'ದೇವ ಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಂ' ಯಜ್ಞ ಹವನಗಳನ್ನು, ಶ್ರಾದ್ಧ ಪಕ್ಷಗಳನ್ನು ಬಿಡಬೇಡ ಎಂದು ವಿಧಿಸುವುದು.

## ನಾಸ್ತಿಕತೆಯ ದುಷ್ಪರಿಣಾಮ

ನಿಮ್ಮ ಈ ಮಾತನ್ನು ಕೇಳಿ ಅಧರ್ಮವಾದದ್ದನ್ನು ಧರ್ಮವೆಂದು ನಂಬಿ ಲೋಕಸಂಕರಕಾರಕವಾದ ವಿಧಿ, ಆಚಾರ ವಿರುದ್ಧವಾದದ್ದನ್ನು ಮಾಡಹೊರಟರೆ ಒಳ್ಳೆಯದನ್ನು ಬಿಟ್ಟು ತಿಳಿದೂ ತಿಳಿದೂ ಕೆಟ್ಟ ಅಶುಭ ದಾರಿಗೆ ಹೋದಂತೆಯೇ ಆಗುವುದು. ಅಂತಹ ಅಧರ್ಮದ ದಾರಿಯನ್ನು ಹಿಡಿದು, ಸಜ್ಜನರ ದೂಷಣಕ್ಕೆ ಪಾತ್ರನಾದ ನಾನು ಭ್ರಷ್ಟನಾಗುವೆನು; ದುಶ್ಶೀಲನಾಗುವೆನು. ತನ್ನ ಹಿತವನ್ನೂ ಕಳೆದು ಪರರಿಗೂ ಕಂಟಕಪ್ರಾಯನಾಗುವೆನು. ಶ್ರೀರಾಮನ ಪವಿತ್ರ ಜೀವನವೇ ಇದರಿಂದ ಹಾಳಾಗುವುದು. ವಿವೇಕ, ವಿಚಾರವಿದ್ದ ಯಾರೂ ನನ್ನನ್ನು ಅನಂತರ ಗೌರವಿಸ

ಲಿಕ್ಕಿಲ್ಲ. ನನ್ನ ಆಗಿನ ಆಚರಣವೂ ಕೂಡ ಜನರಿಗೆ ಕಾರಕವಾಗದೆ ಮಾರಕವಾಗುವುದು. ನಾನೂ ಹಾಳಾಗಿ ಬೇರೆಯವರನ್ನೂ ಕೆಡಿಸುವೆನು. ಇಲ್ಲಿಯೂ, ಮರಣಾಂತ್ಯದಲ್ಲಿಯೂ ನನಗೆ ನರಕ ಮತ್ತು ಅಪಕೀರ್ತಿಯು ತಪ್ಪಲಿಕ್ಕಿಲ್ಲ. ನೀವು ಹೇಳಿದಷ್ಟೂ ಅವಿಧಿಯಾಗಿದೆ.

## ನಿಷಿದ್ಧ ಕರ್ಮದಿಂದಾಗುವ ಕೇಡು

'ಅವಿಧಿಕೃನ್ನರಕ ಮಶ್ನುತೆ' ಅವಿಧಿಯಾಗಿ ನಡೆದುಕೊಂಡರೆ ನರಕವಾಗುವುದೆಂದು ಶ್ರುತಿಯು ಹೇಳಿಕೆಯಿದೆ. ನರಕಪ್ರಾಯವಾದ ನಿಷಿದ್ಧ ಭೋಗಗಳಲ್ಲಿಯೇ ಹೆಚ್ಚೆಚ್ಚು ಆಸಕ್ತಿಯುಂಟಾಗುವುದು ಅವಿಧಿ ವರ್ತನೆಯಿಂದಲೇ.

ಹುಲ್ಲಿನ ರಾಶಿಗೆ ಕೊಟ್ಟ ಬೆಂಕಿಯಂತೆ ನಿಷಿದ್ಧಕರ್ಮ ವಿಷಯೋಪ ಭೋಗದ ದಾಹವು ಯಾವಾಗಲೂ ಧಗಧಗಾಯಮಾನವಾಗಿ ಸುಡುವುದು. ಇಂದ್ರಿಯಗಳ ಹಿಡಿತ ತಪ್ಪುವಲ್ಲಿ ಸೊಕ್ಕಿದ ಕುದುರೆಗಳು ಕಡಿವಾಣವಿಲ್ಲದ ರಥವನ್ನು ಮನಬಂದ ಕಡೆಗೆ ಸೆಳೆದೊಯ್ಯುವಾಗ ಆಗುವ ಚಿಂತಾಜನಕ ಸ್ಥಿತಿಯೇ ತೋರಿಬರುವುದು. ಮಹಪ್ಪಯವು ಉಂಟಾಗುವುದು. ಅವಿಧಿ ವಿಷಯೋಪಭೋಗಗಳಿಂದ ಆರೋಗ್ಯವು ಕೆಡುವುದು. ಮನಸ್ಸಿನ ಶಾಂತಿಯು ಸಂಪೂರ್ಣ ನಷ್ಟವಾಗುವುದು. ವಿಷಯವಾಸನೆಯು ಮತ್ತಷ್ಟು ಹೆಚ್ಚುವುದು. ಮಾಡಿದ ಪಾಪಕೃತ್ಯಗಳೆಲ್ಲಾ ಉಮಿಯ ಬೆಂಕಿ ಯಂತೆ ಒಳಗಿಂದೊಳಗೇ ಸುಡುವುವು. ಖಗ್ರಾಸ ಗ್ರಹಣಹಿಡಿದ ಚಂದ್ರ ಬಿಂಬದಂತೆ ಈತನ ಬಾಳು ತೇಜೋಹೀನವಾಗುವುದು. ನಿರಾಶೆ ಮತ್ತು ದುಃಖವೇ ಈತನನ್ನು ಆವರಿಸುವುದು— ನಿಷಿದ್ಧ ಕರ್ಮಗಳಿಂದ ನಿಷಿದ್ಧ ವಾಸನೆ, ನಿಷಿದ್ಧ ಕಾಮೋಪಭೋಗಗಳು, ಸುಂಟರಗಾಳಿಯಂತೆ ಪರಮಾರ್ಥ ಸಾಧನೆಯ ದಿಕ್ಕು ಕಾಣಿಸವು. ಮುಳುಗುವವನ ಕಾಲು ಮತ್ತಷ್ಟು ತಗ್ಗಿಗೆ ಇಳಿದಂತೆ ಅವನಿಗಾಗುವುದು. ನೀತಿಭ್ರಷ್ಟನು ಮೊದಮೊದಲು ಹುಚ್ಚುಹಿಡಿದ ನಾಯಿಯಂತೆ ಕಂಡವರ ಮೈಮೇಲೆ ಹೋಗಿ ಹೊಡೆತ ತಿನ್ನುವನು. ಆಮೇಲೆ ಕ್ರಮೇಣ ಲೂತಿಹಿಡಿದ ನಾಯಿಯಂತೆ ಜನರು ಆತನನ್ನು ಇದ್ದಲ್ಲಿಂದ ಓಡಿಸುವರು. ತೊಳಲಿ, ಬಳಲಿ ಹೀಗೆ ಬಹು

ವಿಧವಾಗಿ ಇಲ್ಲಿ ಅನೇಕ ನರಕಯಾತನೆಯನ್ನು ಅನುಭವಿಸಿ, ಕೊನೆಯ
ಯಮಧರ್ಮನಿಂದ ವಿಧಿಸಿದ ಮಹಾ ನರಕವಾಸಕ್ಕೂ ಗುರಿಯಾಗುವನ್ನು

ಶ್ರೀರಾಮನು .ವನವಾಸದ ಪ್ರತಿಜ್ಞೆಯನ್ನು ಬಿಟ್ಟು ಅಯೋಧ್ಯೆ
ಸಿಂಹಾಸನವನ್ನೇರಿದವನಾದರೆ ಅವನು ಹೀನಪ್ರತಿಜ್ಞನಾಗುವುದಿಲ್ಲವೆ
ಅಪ್ರತ್ಯಕ್ಷ ಸುಖದ ಬರಿಯ ಬಯಲಾಶೆಯನ್ನು ಬಿಟ್ಟು ರಾಜ್ಯ ಭೋಗ
ಗಳ ಪ್ರತ್ಯಕ್ಷ ಸುಖವನ್ನನುಭವಿಸೆಂದು ನೀವು ಹೇಳಿದ ಮಾತನ್ನು ನಾ
ನಡೆಯಿಸಿದರೆ, ಜಾಬಾಲಿಗಳೇ! ನಾನು ದುರ್ವೃತ್ತನಾಗುವೆನು. ನಾನೆ
ಹೀನವೃತ್ತಿಯಿಂದಿರಬೇಕಾದರೆ ಪರರಿಗೆ ಏನು ತಾನೆ ನಾನು ಬೋಧಿಸಬೇಕು
ನಾನಾದರೂ ಯಾವುದರಿಂದ ಉತ್ತಮ ಗತಿಯನ್ನು ಪಡೆಯಬೇಕು?

## ರಾಜ್ಯಕರ್ತರ ಹೊಣೆಗಾರಿಕೆ

ಕಾಮವೃತ್ತಃ ಸ್ವಯಂ ಲೋಕಃ ಕೃತ್ಸ್ನಃ ಸಮುಪವರ್ತತೇ ।
ಯದ್ವೃತ್ತಾಸ್ಸಂತಿ ರಾಜಾನ ಸ್ತದ್ವೃತ್ತಾಃ ಸಂತಿ ಹಿ ಪ್ರಜಾಃ ॥ ೯
(ವಾ. ರಾ. ಅ. ಸರ್ಗ ೧೦೯

ಸ್ವಾಭಾವಿಕವಾಗಿಯೇ ಎಲ್ಲಾ ಜನರೂ ಸ್ವೇಚ್ಛಾಚಾರಿಗಳು. ರಾಜ
ಅಥವಾ ಮಂತ್ರಿಗಳು ತಮ್ಮ ಶಾಸನದಿಂದ ಅವರನ್ನು ದೇವ, ಧರ್ಮ
ನೀತಿ, ನ್ಯಾಯಪರರನ್ನಾಗಿ ಮಾಡತಕ್ಕದ್ದು. ಇಂತಿರುವಲ್ಲಿ ರಾಜನ
ಅಥವಾ ಮಂತ್ರಿಗಳೇ ದೇವ, ಧರ್ಮ, ನೀತಿ, ನ್ಯಾಯ ವರ್ಣೋಚಿ
ಕರ್ಮಗಳನ್ನು ಬಿಟ್ಟು ಸ್ವೇಚ್ಛಾಚಾರಿಗಳಾಗುವಲ್ಲಿ ಪ್ರಜೆಗೆ ಶಾಸನಮಾಡತಕ್ಕ
ವರೇ ಉಳಿಯರು. ರಾಜನು ಅಥವಾ ಮಂತ್ರಿಗಳು ಭ್ರಷ್ಟಾಚಾರದಿಂ
ನಡೆದುಕೊಳ್ಳುವಲ್ಲಿ ಅವರಂತೆಯೇ ಪ್ರಜೆಗಳು ನಡೆಯಹತ್ತುವ
ರಾಜನಂತೆ ಅಥವಾ ಮಂತ್ರಿಗಳಂತೆ ಪ್ರಜೆಯಾಗುವುದು. ಹೀಗೆಯೆ
ದುರ್ವೃತ್ತರಾಜನು ಅಥವಾ ದುರ್ವೃತ್ತ ಮಂತ್ರಿಗಳು ತಾವು ಕೆಟ್ಟದ್ದಲ್ಲ
ಪ್ರಜೆಯನ್ನೂ ಸಹ ಕೆಡಿಸುವರು.

## ಸತ್ಯ

ಸತ್ಯಮೇವಾನೃಶಂಸ್ಯಂಚ ರಾಜವೃತ್ತಂ ಸನಾತನಂ ।
ತಸ್ಮಾತ್ಸತ್ಯಾತ್ಮಕಂ ರಾಜ್ಯಂ ಸತ್ಯೇ ಲೋಕಃ ಪ್ರತಿಷ್ಠಿತಃ ॥ ೧೦
(ವಾ. ರಾ. ಅ. ಸರ್ಗ ೧೦೯

ವಂಚನೆ ಮತ್ತು ಹಿಂಸೆಗಳಿಂದ ರಹಿತವಾದ ಸತ್ಯವೇ ರಾಜನ ಪುರಾತನ ಧರ್ಮವು. ಸತ್ಯದಿಂದಲೇ ರಾಜ್ಯವು ರೂಪಗೊಂಡಿರಬೇಕು. ಸತ್ಯದ ತಳಹದಿಯ ಮೇಲೆ ಜಗತ್ತೆಲ್ಲಾ ನೆಲೆನಿಂತಿರುವುದು.

ಋಷಯಶ್ಚೈವ ದೇವಾಶ್ಚ ಸತ್ಯಮೇವ ಹಿ ಮೇನಿರೇ ।
ಸತ್ಯವಾದೀ ಚ ಲೋಕೇಸ್ಮಿನ್ ಪರಮಂ ಗಚ್ಛತಿ ಕ್ಷಯವರ್ ॥ ೧೧ ॥
(ವಾ. ರಾ. ಅ. ಸರ್ಗ ೧೦೯)

ಋಷಿಗಳು ಮತ್ತು ದೇವತೆಗಳು ಸತ್ಯವನ್ನೇ ಉತ್ಕೃಷ್ಟವೆಂದು ನಿಶ್ಚಯಿಸಿದರು. ಸತ್ಯದ ನಡೆನುಡಿಗಳಿಂದ ಯುಕ್ತನಾದವನು ಪರಂಧಾಮ ರೂಪವಾದ ಮೋಕ್ಷ ಹೊಂದುವನು. ಬ್ರಹ್ಮೈಕ್ಯರೂಪವಾದ ಮೋಕ್ಷದಲ್ಲಿ ಒಂದು ಆನಂದವೇ ಉಳಿದು ಅಲ್ಲಿ ಮಾಯಾ ಮತ್ತು ಮಾಯಾ ಕಾರ್ಯಗಳ ಸಂಪೂರ್ಣ ನಾಶವಾಗುವುದೆಂಬ ದೃಷ್ಟಿಯನ್ನು ಕೈಕೊಂಡು ಮೋಕ್ಷಕ್ಕೆ ಪರಮಕ್ಷಯವೆಂದು ಇಲ್ಲಿ ಹೇಳಿದೆ.

ಉದ್ವಿಜಂತೇ ಯಥಾ ಸರ್ಪಾನ್ನರಾದನೃತವಾದಿನಃ ।
ಧರ್ಮಃ ಸತ್ಯಂ ಪರೋ ಲೋಕೇ ಮೂಲಂ ಸರ್ವಸ್ಯ ಚೋಚ್ಯತೇ ॥ ೧೩ ॥
(ವಾ. ರಾ. ಅ. ಸರ್ಗ ೧೦೯)

ಸರ್ಪವನ್ನು ಕಾಣುವಂತೆ ಅಷ್ಟು ಚಿಹಾಸೆಯಿಂದ ಮಿಥ್ಯಾವಾದಿ ಯನ್ನು ಜನರು ಕಾಣುವರು. ಜಗತ್ತಿನಲ್ಲಿ ಸತ್ಯವೇ ಒಂದು ಧರ್ಮ; ಸತ್ಯವೇ ಸರ್ವಕ್ಕೂ ಮೂಲ.

ಸತ್ಯಮೇವೇಶ್ವರೋ ಲೋಕೇ ಸತ್ಯಂ ಪದ್ಮಾಶ್ರಿತಾ ಸದಾ ।
ಸತ್ಯಮೂಲಾನಿ ಸರ್ವಾಣಿ ಸತ್ಯಾನ್ನಾಸ್ತಿ ಪರಂ ಪದಮ್ ॥ ೧೩ ॥
(ವಾ. ರಾ. ಅ. ಸರ್ಗ ೧೦೯)

ಜಗತ್ತಿನಲ್ಲಿ ಸತ್ಯವೇ ಈಶ್ವರನು. ಸತ್ಯದ ಆಧಾರದ ಮೇಲೆಯೇ ಧರ್ಮವು ಸ್ಥಿತಿಗೊಂಡಿರುವುದು. ಲಕ್ಷ್ಮಿಯು ಸತ್ಯವನ್ನೇ ಆಶ್ರಯಿಸು ವಳು. ಎಲ್ಲಾ ಸತ್ಸಾಧನೆಗಳ ಮೂಲವೂ ಸತ್ಯವೇ. ಸತ್ಯಕ್ಕಿಂತಲೂ ಹೆಚ್ಚಿನ ಉತ್ತಮ ಗತಿಯು ಇಲ್ಲವೇ ಇಲ್ಲ.

ದತ್ತಮಿಷ್ಟಂ ಹುತಂ ಚೈವ ತಪ್ತಾನಿ ಚ ತಪಾಂಸಿ ಚ ।
ವೇದಾಸ್ಸತ್ಯ ಪ್ರತಿಷ್ಠಾನಾಸ್ತಸ್ಮಾತ್ಸತ್ಯಪರೋ ಭವೇತ್ ॥ ೧೪ ॥
(ವಾ. ರಾ. ಅ. ಸರ್ಗ ೧೦೯)

ದಾನ, ಯಜ್ಞ, ತಪಸ್ಸು, ಹೋಮ ಮತ್ತು ವೇದ ಇವೆಲ್ಲ
ಆಧಾರವೇ ಸತ್ಯವಾದುದರಿಂದ ಎಲ್ಲರೂ ಸತ್ಯಪರಾಯಣರಾಗಿರತಕ್ಕ
**ನುಡಿಯಂತೆ ನಡೆ.** ಇದು ಒಂದು ಶ್ರೀರಾಮನ ಚರಿತ್ರದ ಸಾರವಾ
ನಾನು ಹೇಳಿದ ಮಾತನ್ನು ಹಿಂದೆ ತೆಗೆದುಕೊಳ್ಳಲಾರೆ. ಅಸತ್ಯ
ನುಡಿಯಲಾರೆ.

## ಪುನರ್ಜನ್ಮ

ಜಾಬಾಲಿಗಳೇ! ದೇಹಪಾತದ ನಂತರ ಪೂರ್ವಜನ್ಮದ ವಾಸ
ಪ್ರಕಾರ ಪುನರ್ಜನ್ಮವಾಗದೆಂದಾದರೆ ವಾಮದೇವನು ಗರ್ಭದಲ್ಲಿ ಪೂ
ಸಂಸ್ಕಾರದ ಪ್ರಕಾರ '**ಅಹಂ ಮನುರಭವಂ ಸೂರ್ಯಶ್ಚ**' ಎ
ವುದಾಗಿ ಹೇಗೆ ತಾನೆ ಹೇಳುತ್ತಿದ್ದನು?

## ಪುನರ್ಜನ್ಮವು ಕರ್ಮಫಲರೂಪವು

ಜೀವನದಲ್ಲಿ ಕರ್ಮವನ್ನು ಮಾಡಿ ಅದರ ಫಲವನ್ನನುಭವಿಸು
ದುಂಟು. ಅನುಭವಿಸುವುದಷ್ಟೂ ಕರ್ಮಫಲವೇ ಸರಿ. ಯಾವ
ಪ್ರಾಪ್ತಿಯೂ ಕೂಡ ಕರ್ಮಫಲರೂಪವೆಂದಾಗುವಲ್ಲಿ ಜನ್ಮಪ್ರಾಪ್ತಿ
ಸಹ ಕರ್ಮಫಲವೆಂತಲೇ ಸ್ಪಷ್ಟವಾಗುವುದು. ಆಯಾ ಯೋನಿಯ
ಆಯಾ ಜಾತಿಯಲ್ಲಿ ಒಂದೊಂದು ವೈಶಿಷ್ಟ್ಯದಿಂದ ಪ್ರಾಪ್ತವಾಗುವ ಜನ್ಮ
ಈ ಜನ್ಮದಲ್ಲಿ ಜರಗಿದ ಕರ್ಮಫಲವಾಗದೆ, ಹಿಂದಿನ ಕರ್ಮಫಲ
ವಾದದ್ದೆಂದು ಸ್ಪಷ್ಟವಾಗುವುದು. ಜಗತ್ತಿನಲ್ಲಿ ತೋರಿಬರುವ ವಿವಿಧ
ಮತ್ತು ವೈಚಿತ್ರ್ಯಕ್ಕೆ ಅದರದರ ಹಿಂದಿನ ಭಿನ್ನಭಿನ್ನ ಕರ್ಮವೇ ಕಾ
ವೆಂದು ಹೇಳಬೇಕಾಗಿಬರುವುದು. ವಿವಿಧ ಜಾತಿಯ ಜನ್ಮದಂತೆ
ದಾರಭ್ಯ ಇದ್ದ ವೈಗುಣ್ಯಕ್ಕೂ, ವೈಶಿಷ್ಟ್ಯಕ್ಕೂ, ಜೀವನದಲ್ಲಿ ತೋ
ಬರುವ ಅಕಾರಣ ವೈರಕ್ಕೂ, ಅಕಾರಣ ಪ್ರೇಮಕ್ಕೂ, ಅಪ್ರಯತ್ನ
ಬರುವ ಸುಖದುಃಖಗಳಿಗೂ, ಹಾನಿ ಲಾಭಗಳಿಗೂ ಈ ಜನ್ಮ ಕರ್ಮ
ಕಾರಣವಾಗದಿರೋಣದರಿಂದ ಇಂತಹ ಅನುಭವಗಳಿಗೆ ಹಿಂದಿನ
ಕರ್ಮವೇ ಕಾರಣವೆಂದು ನಿಶ್ಚಯಿಸಬೇಕಾಗಿರುತ್ತದೆ. ಜನ್ಮವೆತ್ತಿದ
ಆದ ಕರ್ಮವು ಮುಂದಿನ ಜನ್ಮಕ್ಕೆ ಕಾರಣವಾಗುವಂತೆ ಪ್ರಕೃತ ಜನ

ಕಳೆದ ಜನ್ಮದ ಕರ್ಮವು ಕಾರಣವಾಗುವುದೆಂದು ಸ್ಪಷ್ಟವಾಗುವುದು. ಹಿಂದಿನ ಜನ್ಮದ ಕರ್ಮ ಈ ಜನ್ಮಕ್ಕೆ, ಈ ಜನ್ಮದ ಕರ್ಮ ಮುಂದಿನ ಜನ್ಮಕ್ಕೆ, ಆ ಜನ್ಮದಲ್ಲಿ ಆದ ಕರ್ಮ ಅದರ ಮುಂದಿನ ಜನ್ಮಕ್ಕೆ ಈ ಕ್ರಮದಂತೆ ಸ್ಪಷ್ಟವಾಗುವುದು. ಹೀಗೆ ಜನ್ಮಪರಂಪರೆ ತಪ್ಪದೆ ಉಂಟಾಗುವುದೆಂದು ವಿಶಿಷ್ಟ ಫಲವನ್ನನುಭವಿಸುವ ಇಚ್ಛೆಯಿಂದ ಎಷ್ಟರ ವರೆಗೆ ಆಯಾ ಕರ್ಮವನ್ನೆಸಗುವ ಪ್ರವೃತ್ತಿ ಇರುವುದೋ ಅಷ್ಟರವರೆಗೆ ಅದರ ಫಲವನ್ನನುಭವಿಸಲು ಜನ್ಮವು ತಪ್ಪುವಂತಿಲ್ಲವೆಂಬುದು ತಿಳಿದು ಬರುವುದು.

ಅನುಭವಿಸಿ ತೀರಿಹೋಗದ ಕರ್ಮವು ತನ್ನ ಫಲವನ್ನು ಕೊಟ್ಟೇ ಕೊಡುವುದೆಂದಾಗುವಲ್ಲಿ ಈ ಜನ್ಮದಲ್ಲಿ ಮಾಡಿದ, ಅನುಭವಿಸಿದ, ಕರ್ಮ ವನ್ನುಣ್ಣಲು ಬರುವ ಮುಂದಿನ ಜನ್ಮವು ಅಪರಿಹಾರ್ಯವಾಗುವುದು. ಬಯಸಿ ಮಾಡಿದ ಎಲ್ಲಾ ಕರ್ಮಗಳ ಫಲವು ಈ ಜನ್ಮದಲ್ಲಿಯೇ ಅನುಭವಿಸಲ್ಪಡು ವುದು ಎಂದಾಗುವಲ್ಲಿ ಅದನ್ನು ಅನುಭವಿಸಲು ಮುಂದಿನ ಜನ್ಮವನ್ನೆತ್ತಿಯೇ ತೀರಬೇಕಲ್ಲವೇ? ಬರೆಯುವುದು ಶೇಷವಾಗಿ ಉಳಿದರೆ ಮಲಗಿ ಎದ್ದಮೇಲೆ ಅದನ್ನು ಪೂರ್ತಿಮಾಡುವಂತೆ ನಿದ್ದೆಯ ರೂಪವಾದ ಮರಣದ ವಿಸ್ಮೃತಿ ಯಲ್ಲಿ ಕೆಲಕಾಲವನ್ನು ಕಳೆದು ಕಳೆದ ಜನ್ಮದ ಅಪೂರ್ಣ ವಾಸನೆಯ ಪೂರ್ತಿಗಾಗಿ ಮುಂದಿನ ಜನ್ಮದಲ್ಲಿ ಕರ್ಮಗಳನ್ನೆಸಗಿಯೇ ತೀರುವನು. ವಿಶಿಷ್ಟ ಫಲಕ್ಕಾಗಿ ಹೇಗೆ ವಿಶಿಷ್ಟ ಕರ್ಮವನ್ನು ಆಚರಿಸಬೇಕೋ ಹಾಗೆ ಆ ಕರ್ಮಫಲವನ್ನು ಉಣ್ಣಲೂ ಸಹ ವಿಶಿಷ್ಟ ಕರ್ಮವನ್ನೇ ಆಚರಿಸಬೇ ಕಾಗುತ್ತದೆ. ಸಾಧನವೂ ಕರ್ಮವೇ, ಫಲಭೋಗವೂ ಕರ್ಮವೇ, ಅನೇಕ ವಾಸನೆಗಳಿಂದ ಕರ್ಮಗಳನ್ನು ಮಾಡುತ್ತಲೇ ಜೀವಿಸುವ ಜೀವಿಗೆ ಕರ್ಮ ಫಲದ ವಾಸನೆಯು ತಪ್ಪುವವರೆಗೆ ಜನ್ಮವು ಹೇಗೆ ತಾನೆ ತಪ್ಪುವುದು? ಒಟ್ಟು ಬಾಹ್ಯ ಪದಾರ್ಥಗಳ ಸಂಗಡ ಇಂದ್ರಿಯಗಳ ಸಂಯೋಗವಾಗಿ ಆಗುವ ದೇಹಸುಖದ ವಾಸನೆಯಿಂದ ಮಾಡಿದ ಕರ್ಮಕ್ಕೆ ಫಲರೂಪವಾಗಿ ಈ ಜನ್ಮವು ಪ್ರಾಪ್ತಿಯಾಗಿರುವಂತೆ ಆ ವಾಸನೆ ಇರುವವರೆಗೂ ಒಂದು ಜನ್ಮ ಕಳೆದು ಮತ್ತೊಂದು ಜನ್ಮವನ್ನು ಪಡೆಯುತ್ತಲೇ ಇರಬೇಕಾಗಿ ಬರುವುದು.

## ಜನ್ಮಕ್ಕೆ ಕಾರಣ ವಾಸನೆ

ಹೀಗೆ ಜನ್ಮಕ್ಕೆ ಕಾರಣ ವಿಷಯ ವಾಸನೆಯೆಂದಾದಲ್ಲಿ ಆ ವಾಸ ಇರುವವರೆಗೆ ಜನ್ಮವು ಹೇಗೆತಾನೆ ತಪ್ಪುವುದು? ಪಂಚಭೂತಗಳ ದೇ ಪಂಚಭೂತಗಳಲ್ಲಿ ಕರಗಿಹೋದರೂ ವಾಸನೆ ಮತ್ತೊಂದು ದೇಹವ ಧರಿಸುವುದು. ಬಟ್ಟೆಯನ್ನು ಉಪಯೋಗಿಸಬೇಕೆಂದು ವಾಸನೆಯಿ ವರೆಗೆ ಹಳತಾದುದನ್ನು ಭೂಮಿಯಮೇಲೆ ಬಿಟ್ಟು ಹೊಸದಾದ ಬೇ ದನ್ನು ಉಪಯೋಗಿಸುವಂತೆ ದೇಹಸುಖವನ್ನೇ ಅನುಭವಿಸಬೇಕೆ ವಾಸನೆಯಿರುವವರೆಗೆ ಜೀರ್ಣದೇಹವನ್ನು ಬಿಟ್ಟು ಹೊಸದೊಂದನ್ನು ಯುವನು. ಮನಸ್ಸಿಗೆ ಬಾರದಿದ್ದರೆ ಮಾಡಿದ ಗೊಂಬೆಯನ್ನು ನಷ್ಟಪಡಿ ಮನವೊಪ್ಪುವ ಬೇರೊಂದನ್ನು ಆ ಮಣ್ಣಿನಿಂದ ಸಿದ್ಧಪಡಿಸುವಂತೆ ಪಂ ಭೂತದಲ್ಲಿ ಲೀನವಾದ ದೇಹವನ್ನು ಬಿಟ್ಟು ಇನ್ನೊಂದನ್ನು ಆ ಪಂಚಭೂ ಗಳಿಂದಲೇ ಸಿದ್ಧಪಡಿಸುವನು.

## ಪುನರ್ಜನ್ಮದ ವಿಷಯದಲ್ಲಿ ಶ್ರುತಿಪ್ರಮಾಣಗಳು

**"ತದ್ಯಥಾ ಪೇಶಸ್ಕಾರೀ ಪೇಶಸೋ ಮಾತ್ರಾಮುಪಾದಾ ಅನ್ಯನ್ನವತರಂ ಕಲ್ಯಾಣ ತರಂ ರೂಪಂ ತನುತೇ, ಏವಮೇವಾ ಮಾತ್ಮಾ ಇದಂ ಶರೀರಂ ನಿಹತ್ಯ, ಅವಿದ್ಯಾಂಗಮಯಿತ್ವಾ ಅನ್ಯನ್ನ ತರಂ ಕಲ್ಯಾಣತರಂ ರೂಪಂ ಕುರುತೇ, ಪಿತ್ರ್ಯಂ ವಾ ಗಾಂಧರ್ವ ವಾ ದೈವಂ ವಾ ಪ್ರಾಜಾಪತ್ಯಂ ವಾ ಬ್ರಾಹ್ಮಂ ವಾಽನ್ಯೇಷಾಂ ಭೂತಾನಾಂ"** (ಬೃ. ಅ. ೪, ಬ್ರಾ. ೪–೪).

ಸೊನಗಾರನು ಹೇಗೆ ಮೊದಲನೆಯ ದಾಗಿನಿಯ ಮಾಟವ ನಷ್ಟಪಡಿಸಿ, ಆ ಚಿನ್ನದಿಂದಲೇ ತನಗೆ ಇಷ್ಟವಾದ ಬೇರೊಂದನ್ನು ಹೊ ದಾಗಿ ಸಿದ್ಧಪಡಿಸುವನೋ, ಅಂತೆಯೇ ಹಳೆಯದಾದುದನ್ನು ನಷ್ಟಪಡಿ ಜೀವಿಯು, ನೂತನವಾದ, ಪಿತೃಗಳ, ಗಂಧರ್ವರ, ದೇವತೆ ಪ್ರಜಾಪತಿಯ, ಬ್ರಹ್ಮದೇವನ ಅಥವಾ ಅನ್ಯಾನ್ಯ ಪ್ರಾಣಿಗಳ ಸುಂದರವ ರೂಪವನ್ನು ನಿರ್ಮಿಸುವನು. **"ಅಥೋ ಖಲ್ವಾಹುಃ ಕಾಮಮ ಏವಾಯಂ ಪುರುಷ ಇತಿ" "ಸ ಯಥಾ ಕಾಮೋ ಭವತಿ ತತ್ಕ್ರ**

ರ್ಭವತಿ, ಯತ್ಕ್ರತುರ್ಭವತಿ, ತತ್ಕರ್ಮ ಕುರುತೇ, ಯತ್ಕರ್ಮ ಕುರುತೇ ತದಭಿಸಂಪದ್ಯತೇ" (ಬೃ. ಅ. ೪, ಬ್ರಾ. ೫).

ಜೀವಿಯು ವಾಸನಾಮಯವಿರುವುದು, ಸಂಸ್ಕಾರದ ಪ್ರಕಾರ ಆಯಾ ಸುಖದ ಭಾವನೆಯಲ್ಲಿ ನಿಶ್ಚಯವು ಹುಟ್ಟುವುದು. ಇದೇ ವಾಸನೆ ಎಂದು ಹೇಳಿಸಿಕೊಳ್ಳುವುದು. ಆ ವಾಸನೆಯಂತೆ ಅದರದರ ಪ್ರಾಪ್ತಿಗಾಗಿ ಆಯಾ ಕರ್ಮವನ್ನು ಅನುಷ್ಠಿಸುವನು. ಯಾವ ಕರ್ಮವನ್ನು ಮಾಡುವನೋ ಅದರ ಫಲವನ್ನು ಉಣ್ಣುವನು.

"ಯಥಾ ಕಾರೀ ಯಥಾ ಚಾರೀ ತಥಾ ಭವತಿ, ಸಾಧ್ಯುಕಾರೀ ಸಾಧುರ್ಭವತಿ, ಪಾಪಕಾರೀ ಪಾಪೋ ಭವತಿ, ಪುಣ್ಯಃ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನ," ಇತಿ. (ಬೃ. ಉ. ಅ. ೪, ಬ್ರಾಹ್ಮಣ ೪, ಮಂತ್ರ ೫). ತಾನು ಮಾಡಿದಂತೆ, ಆಚರಿಸಿದಂತೆ ಜೀವನು ಆಗುವನು. ಸತ್ಕರ್ಮಗಳನ್ನು ಮಾಡುವವನು ಸಚ್ಛೀಲ ಸಜ್ಜನ ನಾಗುವನು. ದುಷ್ಕರ್ಮಗಳನ್ನಾಚರಿಸುವವನು ದುಃಶೀಲ ದುರ್ಜನ ನಾಗುವನು. ಪುಣ್ಯಕರ್ಮಗಳಿಂದ ಪುಣ್ಯಾತ್ಮನಾಗುವನು, ಪಾಪಕೃತ್ಯ ಗಳಿಂದ ಪಾಪಾತ್ಮನಾಗುವನು.

"ತದೇವ ಸಕ್ತಃ ಸಹ ಕರ್ಮಣೈತಿ ಲಿಂಗಂ ಮನೋ ಯತ್ರ ನಿಷಕ್ತಮಸ್ಯ । ಪ್ರಾಪ್ಯಾಂತಂ ಕರ್ಮಣಸ್ತಸ್ಯ ಯತ್ಕಿಂಚೇಹ ಕರೋ ತ್ಯಯಂ । ತಸ್ಮಾಲ್ಲೋಕಾತ್ಪುನರೈತ್ಯಸ್ಮೈ ಲೋಕಾಯ ಕರ್ಮಣ ಇತಿ ನು ಕಾಮಯಮಾನಃ" ಇತಿ (ಬೃ. ಅ. ೪-೪-೬). ಆತನ ವಾಸನಾ ತ್ಮಕವಾದ ಮನಸ್ಸು ಅತ್ಯಂತ ಆಸಕ್ತಿಯನ್ನು ಹೊಂದಿದ ಕರ್ಮಫಲ ದಲ್ಲಿಯೇ ಆತನಿಗೆ ಅಭಿಲಾಷೆಯುಂಟಾಗಿ, ಆತನು ಆಯಾ ಸಂಸ್ಕಾರ ಸಮೇತ ಅದನ್ನೇ ಪಡೆಯುವನು. ಈ ಲೋಕದಲ್ಲಿ ಮಾಡಿದ ಕರ್ಮದ ಫಲವನ್ನು ಆಯಾ ಪ್ರಾಪ್ತವಾದ ಲೋಕದಲ್ಲಿ ಅದರದರ ತಕ್ಕ ದೇಹವನ್ನು ಧರಿಸಿ, ಅನುಭವಸಿ ತದನಂತರ, ಆ ಕರ್ಮಫಲವು ನಷ್ಟವಾದೊಡನೆ ಆ ಲೋಕದಿಂದ ಮತ್ತೂ ಕರ್ಮವನ್ನು ಮಾಡಲೋಸುಗ ಈ ಕರ್ಮ ಭೂಮಿಗೆ ಅಥವಾ ಈ ಮೃತ್ಯುಲೋಕಕ್ಕೆ ತನ್ನನ್ನು ಬರಮಾಡಿಕೊಳ್ಳು ವನು. ಇಲ್ಲಿ ಅವನವನ ಕರ್ಮಗಳಂತೆ, ನೀಚೋಚ್ಚ ಜಾತಿಯಲ್ಲಿಯೂ,

ನೀಚೋಚ್ಚ ಯೋನಿಗಳಲ್ಲಿಯೂ ಜನ್ಮವನ್ನೆತ್ತುವನು. ದೇಹಸುಖ ವಾಸನೆಯಿಂದ ಬಾಹ್ಯ ಪದಾರ್ಥೋಪಭೋಗಗಳ ಇಚ್ಛೆಯುಳ್ಳವನ ಮಾತ್ರ ಪುನರ್ಜನ್ಮವಾಗುವುದು.

## ನಿಷ್ಕಾಮನು ಬ್ರಹ್ಮೈಕ್ಯವನ್ನು ಪಡೆಯುವನು

"ಅಥಾ ಕಾಮಯಮಾನೋ ಯೋಽಕಾಮೋ ನಿಷ್ಕಾಮ ಆಪ್ತಕಾಮೋ ನ ತಸ್ಯ ಪ್ರಾಣಾ ಉತ್ಕ್ರಾಮನ್ತಿ ಬ್ರಹ್ಮೈವ ಸನ್ ಬ್ರಹ್ಮಾಽಪ್ಯೇತಿ" (ಬೃ. ೪-೪-೬). ಯಾವಾತನಿಗೆ ದೇಹವನ್ನು ಧ ಬಾಹ್ಯಾರ್ಥಗಳ ಸುಖವನ್ನು ಅನುಭವಿಸುವ ಇಚ್ಛೆಯಿರದೋ ಅ ಅಕಾಮ, ನಿಷ್ಕಾಮ, ಆಪ್ತಕಾಮ, ಆತ್ಮಕಾಮನ ಪ್ರಾಣಗಳು ದೇಹದಿ ಹೊರಹೊರಡದೆ, ಆ ಆತ್ಮಸುಖದಿಂದ ತೃಪ್ತಿಗೊಂಡವನು ಬ್ರಹ್ಮರೂಪನ ಆಗಿ, ದೇಹಪಾತದ ನಂತರ, ಇಲ್ಲಿಯೇ ಬ್ರಹ್ಮದಲ್ಲಿ ಏಕರೂಪನಾಗುವನು ಅರ್ಥಾತ್ ಬ್ರಹ್ಮವೇ ಆಗುವನೆಂದು ಬೃಹದಾರಣ್ಯಕ ಶ್ರುತಿಯು ಉ ದೇಶಿಸುವುದು.

## ಅವಿದ್ವಾಂಸರಿಗೇ ಪುನರ್ಜನ್ಮ

"ಅನಂದಾ ನಾಮ ತೇ ಲೋಕಾ ಅಂಧೇನ ತಮಸಾಽವೃತಾ ತಾಗ್ಂಸ್ತೇ ಪ್ರೇತ್ಯಾಭಿಗಚ್ಛಂತ್ಯ ವಿದ್ವಾಂಸೋಽಬುಧಾ ಜನಾಃ" (ಬೃ. ಅ. ೪, ಬ್ರಾ. ೪-೧೧). ಆತ್ಮಜ್ಞಾನವಿಲ್ಲದ ಅವಿದ್ವಾಂಸನಾ ಅನಾತ್ಮಸುಖದ ಇಚ್ಛೆಯುಳ್ಳ ಅಜ್ಞನು ಮಾತ್ರ, ಮರಣದನಂತರ ನಿ ವಾದ ಸುಖದಿಂದೊಡಗೂಡಿರದ ವಿಷಯೋಪಭೋಗಗಳಿಂದೊಡಗೂಡಿ ಈ ಆನಂದಶೂನ್ಯವಾದ ಅನಿತ್ಯವಾಗಿಯೂ, ದುಃಖರೂಪವಾಗಿಯೂ ಇದ್ದ ಮೃತ್ಯುವುಳ್ಳ ಲೋಕಗಳನ್ನು ಹೊಂದುವನು. ಅಲ್ಲಿ ಜನ್ಮವನ್ನೆತ್ತು ರೆಂಬುದಾಗಿ ತಿಳಿಸುತ್ತಿದೆ.

"ಅಸುರ್ಯಾ ನಾಮ ತೇ ಲೋಕಾ ಅಂಧೇನ ತಮಸಾ ಽಽವೃತಾಃ । ತಾಗ್ಂಸ್ತೇ ಪ್ರೇತ್ಯಾಭಿಗಚ್ಛಂತಿ ಯೇ ಕೇಚಾತ್ಮಹನೋ ಜನಾಃ ॥" (ಈ. ೩). ಎಂಬುದಾಗಿ ಈಶಾವಾಸ್ಯೋಪನಿಷತ್ತಿನಲ್ಲಿಯೂ ಈ ಅಭಿಪ್ರಾಯವನ್ನೇ ವ್ಯಕ್ತಪಡಿಸಿರುವುದು. ಆತ್ಮಜ್ಞಾನವನ್ನು ಪಡೆ

ನಿರ್ವಿಷಯ ಆತ್ಮಸುಖದ ನಿರವಧಿ ತೃಪ್ತಿಯನ್ನು ಹೊಂದಿ ಮುಕ್ತನಾಗದ, ಮರಳಿ ಜನ್ಮವನ್ನೆತ್ತುವ ಜೀವಿಗೆ ಅಜ್ಞನೆಂದೂ, ಆತ್ಮಹತ್ಯೆಯನ್ನು ಮಾಡಿಕೊಂಡವನೆಂದೂ ಸಂಬೋಧಿಸಿದೆ.

## ದೇಹವು ಆತ್ಮವಲ್ಲ

"ತತ್ಸೃಷ್ಟ್ವಾ ತದೇವಾನುಪ್ರಾವಿಶತ್" (ತೈ. ಉ.) "ಸ ಇಹ ಪ್ರವಿಷ್ಟಃ ಆನಖಾಗ್ರೇಭ್ಯಃ" (ಬೃ. ಉ.). ಇತ್ಯಾದಿ ಪ್ರವೇಶ ಶ್ರುತಿವಾಕ್ಯಗಳಿಂದ, ದೇಹದಲ್ಲಿ ಆತ್ಮನ ಪ್ರವೇಶವಾಗುವುದೆಂಬುದು ಸ್ಪಷ್ಟವಾಗುವುದು. ಕಠೋಪನಿಷತ್ತಿನಲ್ಲಿ ಈ ಆತ್ಮರೂಪವು ದೇಹ ಮನೋಬುದ್ಧಿಗಳಿಗಿಂತಲೂ ಭಿನ್ನವಾದುದೆಂಬುದನ್ನು ತಿಳಿಯಪಡಿಸಲು, ದೇಹಕ್ಕೆ ರಥದ ಉಪಮೆಯೂ, ಬುದ್ಧಿಗೆ ಸಾರಥಿಯ ಉಪಮೆಯೂ, ಮನಸ್ಸಿಗೆ ಕಡಿವಾಣದ ಉಪಮೆಯೂ, ಇಂದ್ರಿಯಗಳಿಗೆ ಕುದುರೆಗಳ ಉಪಮೆಯೂ ಕೊಟ್ಟಿರುವುದು. ಈ ಆತ್ಮನಿಗೆ ಇವುಗಳ ಸಂಗಸಂಬಂಧದಿಂದಲೇ ಶಬ್ದಾದಿ ವಿಷಯಗಳ ಮಾರ್ಗವಾಗಿ ಮೃತ್ಯುಲೋಕದ ಪ್ರವಾಸ ಕರ್ತೃತ್ವ ಭೋಕ್ತೃತ್ವಾದಿ ಆಗಂತುಕ ಲಕ್ಷಣ ವಿಶಿಷ್ಟೋಪಾಧಿಗಳು ಸಂಘಟಿಸುವುವೆಂದು ಬೋಧಿಸಿದೆ.

ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವತು ।
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹಮೇವ ಚ ॥

ಇಂದ್ರಿಯಾಣಿ ಹಯಾನಾಹುರ್ವಿಷಯಾಂಸ್ತೇಷು ಗೋಚರಾನ್ ।
ಆತ್ಮೇಂದ್ರಿಯ ಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ॥
(ಕ. ವ. ಅ. ೧-೩, ಮಂ. ೩-೪)

ಇವೇ ಆ ಮಂತ್ರಗಳು. ಇಲ್ಲಿಯೇ,

## ಸಂಸಾರ ಮತ್ತು ಮೋಕ್ಷ

ಯಸ್ತ್ವವಿಜ್ಞಾನವಾನ್ ಭವತ್ಯಮನಸ್ಕಃ ಸದಾಽಶುಚಿಃ ।
ನ ಸ ತತ್ಪದಮಾಪ್ನೋತಿ ಸಂಸಾರಂ ಚಾಧಿಗಚ್ಛತಿ ॥ (ಕ. ವ. ೧-೩-೭)

ಯಸ್ತು ವಿಜ್ಞಾನವಾನ್ ಭವತಿ ಸಮನಸ್ಕಃ ಸದಾ ಶುಚಿಃ ।
ಸ ತು ತತ್ಪದಮಾಪ್ನೋತಿಯಸ್ಮಾದ್ಭೂಯೋ ನ ಜಾಯತೇ ॥
(ಕ. ವ. ೧-೩-೮)

ಈ ಮಂತ್ರಗಳಿವೆ. ಯಾವಾತನು ತಾತ್ವಿಕ ಬುದ್ಧಿರಹಿತನೋ, ಮನೋ ನಿಗ್ರಹಶೂನ್ಯನೋ, ದೇಹಸುಖದ ವಾಸನೆಯಿಂದ ಅಪವಿತ್ರನೋ ಆತನು ಬ್ರಹ್ಮಪದವನ್ನು ಹೊಂದದೆ ಸಂಸಾರರೂಪವಾದ ಜನ್ಮ ಮರಣ ಪರಂಪರೆ ಯಲ್ಲಿ ಸಿಲುಕುವನು. ಇದರ ವಿರುದ್ಧ ಯಾವಾತನು ತಾತ್ವಿಕ ಬುದ್ಧಿ ಯುಳ್ಳವನೋ, ಮನೋನಿಗ್ರಹಶಾಲಿಯೋ, ದೇಹಸುಖದ ವಾಸನೆ ಇಲ್ಲ ದಿರುವುದರಿಂದ ಅತಿ ಪವಿತ್ರನೋ, ಆತನು ಮಾತ್ರ ಯಾವುದನ್ನು ಪಡೆ ಮಾತ್ರದಿಂದ ಮರಳಿ ಜನ್ಮಕ್ಕೆ ಬಾರನೋ ಅಂತಹ ಪರಾಕಾಷ್ಠೆಯ ಸುಖ ರೂಪವಾದ ಪದವನ್ನು ಎಂದರೆ ಬ್ರಹ್ಮಸ್ವರೂಪವನ್ನು ಪಡೆಯುವನು ಎಂಬುದಾಗಿ ಕಠೋಪನಿಷತ್ತಿನಲ್ಲಿ ಹೇಳಿರುವುದು. ಜನ್ಮ ಮರಣಗಳನ್ನು ತಪ್ಪಿಸಿಕೊಳ್ಳಲು, ವಿಷಯವಾಸನಾ ಶೂನ್ಯನಾಗುವುದೇ ಮುಖ್ಯ. ವಿಷಯ ವಾಸನೆಯಿರುವವರೆಗೆ ಹೇಗೂ ಜನ್ಮ ತಪ್ಪದು ಎಂಬುದಾಗಿ ತಿಳಿದು ಬರುವುದು.

ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿಶ್ರಿತಾಃ ।
ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥
(ಕಠ. ಅ. ೨, ವ. ೬, ಮಂತ್ರ ೧೪)

ಯದಾ ಸರ್ವೇ ಪ್ರಭಿದ್ಯಂತೇ ಹೃದಯಸ್ಯೇಹ ಗ್ರಂಥಯಃ ।
ಅಥ ಮರ್ತ್ಯೋಽಮೃತೋ ಭವತ್ಯೇತಾ ವದನುಶಾಸನಮ್ ॥
(ಕಠ. ಅ. ೨-೬-೧೫)

ಈ ಮಂತ್ರಗಳಲ್ಲಿ ಜೀವಿಯು ಸರ್ವವಿಷಯ ಕಾಮನಾ ಶೂನ್ಯನಾದಾಗಲೇ ಬ್ರಹ್ಮರೂಪವನ್ನು ಪಡೆದು ಅಮರನಾಗುವನೆಂದು ಹೇಳಿರುವುದು.

## ಈ ಜನ್ಮದಲ್ಲೇ ಮುಕ್ತನಾಗಬೇಕು

ಇಹಚೇದಶಕದ್ಬೋದ್ಧುಂ ಪ್ರಾಕ್ ಶರೀರಸ್ಯ ವಿಸ್ರಸಃ ।
ತತಃ ಸರ್ಗೇಷು ಲೋಕೇಷು ಶರೀರತ್ವಾಯ ಕಲ್ಪತೇ ॥
(ಕಠ. ಅ. ೨-೬-೪)

ದೇಹಪಾತವಾಗುವ ಮೊದಲೇ ಯಾವಾತನು ಈ ಬ್ರಹ್ಮಾತ್ಮೈಕ್ಯ ಸ್ವರೂಪವನ್ನು ತಿಳಿಯನೋ, ಆತನು ಮತ್ತೂ ಮರಳಿ ಅನೇಕ ಲೋ

ಗಳಲ್ಲಿ ಜನ್ಮವೆತ್ತುವನು ಎಂಬುದಾಗಿ ಈ ಮಂತ್ರದಿಂದ ಸ್ಪಷ್ಟವಾಗಿ ತಿಳಿದು ಬರುವುದು.

ಇಹಚೇದವೇದೀದಥ ಸತ್ಯಮಸ್ತಿ ।
ನ ಚೇದಿಹಾವೇದೀನ್ಮಹತೀ ವಿನಷ್ಟಿಃ ॥ (ಕೇ. ೨–೫)

ಇಲ್ಲಿಯೇ ಪರಮಾತ್ಮನನ್ನು ತಿಳಿದು ಸಾಕ್ಷಾತ್ಕರಿಸಿದರೆ ಸತ್ಯಸ್ವರೂಪವನ್ನು ಹೊಂದಿದಂತಾಗುವುದು. ಇಲ್ಲವಾದರೆ ವಿನಾಶಕ್ಕೆ ಗುರಿಯಾಗುವನು.

**"ತಮೇವ ವಿದಿತ್ವಾಽತಿ ಮೃತ್ಯುಮೇತಿ" "ತಮೇವಂ ವಿದ್ವಾನಮೃತ ಇಹ ಭವತಿ"** ಇತ್ಯಾದಿ ಶ್ರುತಿಗಳು ಪರಮಾತ್ಮ ಜ್ಞಾನದಿಂದಲೇ ಮುಕ್ತಿ ಎಂದು ಸಾರುವುವು.

ಯೇಯಂ ಪ್ರೇತೇ ವಿಚಿಕಿತ್ಸಾ ಮನುಷ್ಯೇ ಅಸ್ತೀತ್ಯೇಕೇ ನಾಯಮಸ್ತೀತಿ ಚೈಕೇ ।
ಏತದ್ವಿದ್ಯಾಮನುಶಿಷ್ಟಸ್ತ್ವಯಾಽಹಂ ವರಾಣಾಮೇಷ ವರಸ್ತೃತೀಯಃ ॥
(ಕಠ. ಅ. ೧, ವ. ೧–೨೦)

## ಯಮ ನಚಿಕೇತರ ಸಂವಾದ

ಹೋದಮೇಲೆ ವಾಸನೆಯಿಂದ ಜನ್ಮತಾಳುವ ಜೀವಿಯು ದೇಹದ ಹೊರತಾಗಿ ಒಬ್ಬನಿರುವನೋ? ಇರನೋ? ಈ ಪ್ರಶ್ನವನ್ನೇ ಕಠೋಪನಿಷತ್ತಿನಲ್ಲಿ ಯಮಧರ್ಮರಾಜನನ್ನು ಕುರಿತು ನಚಿಕೇತನು ಮಾಡಿರುವನು. ಯಮನು ಮೃತ್ಯುವಿನ ಅಧಿದೇವತೆಯು. ಈತನಿಗೆ ಮರಣೋತ್ತರ ಜೀವಿಯ ಅಸ್ತಿತ್ವ ನಾಸ್ತಿತ್ವದ ಬಗ್ಗೆ ಮಾಡಿರುವ ಪ್ರಶ್ನೆಯು ಅತಿ ಮಹತ್ವಪೂರ್ಣವಾಗಿರುವುದು.

ಹಂತ ತ ಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಂ ।
ಯಥಾ ಚ ಮರಣಂ ಪ್ರಾಪ್ಯ ಆತ್ಮಾ ಭವತಿ ಗೌತಮ ॥ (ಕಠ. ೨–೬–೬)

ಯೋನಿ ಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ ।
ಸ್ಥಾಣುಮನ್ಯೇಽನುಸಂಯಂತಿ ಯಥಾಕರ್ಮ ಯಥಾಶ್ರುತಂ ॥
(ಕಠ. ಪ. ೬–೭)

ಈ ಮಂತ್ರಗಳಲ್ಲಿ ನಚಿಕೇತನ ಪ್ರಶ್ನೆಗೆ ಯಮಧರ್ಮನ ಉತ್ತರವಿದೆ. ಇವುಗಳಲ್ಲಿ ಅವಿನಾಶಿ ಬ್ರಹ್ಮನೇ ತನ್ನ ಸ್ವರೂಪವೆಂದರಿತ ನಿಷ್ಕಾಮನಾದವನಿಗೆ ದೇಹಪಾತದ ನಂತರ ಜನ್ಮವು ಉಂಟಾಗದು. ಈ ಜ್ಞಾನವಿರ

ದಿದ್ದವನು ಮಾತ್ರ, ವಿಷಯಸುಖವನ್ನು ಬಯಸಿ ಮಾಡಿದ ಆಯಾ ಕರ್ಮಕ್ಕೆ ಅನುರೂಪವಾದ ಆಯಾ ಫಲವನ್ನು ಅನುಭವಿಸಲು ಆಯಾ ಸ್ಥಾವರಜಂಗಮಾತ್ಮಕ ಯೋನಿಗಳಲ್ಲಿ ಜನ್ಮವೆತ್ತುವನು. ಜನ್ಮಕ್ಕೆ ಅವನವನು ಮಾಡಿದ ಕರ್ಮ ಮತ್ತು ಪಡೆದ ಜ್ಞಾನವೇ ಕಾರಣ. "ಯಥಾ ಪ್ರಜ್ಞಂ ಹಿ ಸಂಭವಾಃ" ಜ್ಞಾನದ ತಾರತಮ್ಯ ಪ್ರಕಾರವೇ ಉಚ್ಚ ನೀಚ ಯೋನಿಗಳಲ್ಲಿ ಜನ್ಮ ಬರುವುದು, ಜ್ಞಾನದ ತಾರತಮ್ಯದ ಪ್ರಕಾರ ಕರ್ಮದ ತಾರತಮ್ಯವಿದೆ. ಕರ್ಮದ ತಾರತಮ್ಯದ ಪ್ರಕಾರವೇ ಜನ್ಮದ ತಾರತಮ್ಯ ತೋರಿಬರುವುದು. "ಅಥೈಕಯೋರ್ಧ್ವ ಉದಾನಃ ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಮುಭಾಭ್ಯಾಮೇವ ಮನುಷ್ಯಲೋಕಮ್" (ಪ್ರಶ್ನೋಪನಿಷತ್, ಪ್ರ. ೩-೭). ದೇಹ ಬಿದ್ದು ಹೋದಮೇಲೆ ಪಂಚಪ್ರಾಣಗಳಲ್ಲಿ ಒಂದು ಉದಾನವೇ ಪುಣ್ಯವಂತನನ್ನು ಪುಣ್ಯಲೋಕಕ್ಕೂ, ಪಾಪಿಯನ್ನು ಪಾಪಲೋಕಕ್ಕೂ, ಪುಣ್ಯಪಾಪಗಳು ಸಮವಾಗಿದ್ದರೆ ಆತನನ್ನು ಮನುಷ್ಯಲೋಕಕ್ಕೂ ಕೊಂಡೊಯ್ಯುವುದು ಎಂದು ಪ್ರಶ್ನೋಪನಿಷತ್ತಿನಲ್ಲಿ ಹೇಳಿರುವುದು.

"ನ ಸಾಂಪರಾಯಃ ಪ್ರತಿಭಾತಿ ಬಾಲಂ ಪ್ರಮಾದ್ಯಂತಂ ವಿತ್ತಮೋಹೇನ ಮೂಢಂ। ಅಯಂ ಲೋಕೋ ನಾಸ್ತಿ ಪರ ಇತಿ ಮಾನೀ ಪುನಃಪುನರ್ವಶಮಾಪದ್ಯತೇಮೇ ॥ ೬ ॥" (ಕಠ. ಅ. ೧-೨) ಹೆಣ್ಣು, ಹೊನ್ನು, ಮಣ್ಣು ಮುಂತಾದುವುಗಳಲ್ಲಿ ಆಸಕ್ತನಾಗಿರುವ ಬುದ್ಧಿಯವನಿಗೂ, ಕಾಮಾದಿ ವಿಕಾರಗಳಿಂದ ಬುದ್ಧಿಭ್ರಷ್ಟನಾದವನಿಗೂ, ವೈಭವದ ಲಾಲಸೆಯುಳ್ಳವನಿಗೂ ಮೋಕ್ಷಪ್ರಾಪ್ತಿಗೆ ಕಾರಣವಾದ ಶಾಸ್ತ್ರೀಯ ಹೆದ್ದಾರಿಯು ಗೋಚರವಾಗದು. ವೈರಾಗ್ಯ ಉಂಟಾಗದು. ಇಂತಹ ಈ ಲೋಕಸುಖವನ್ನೇ ನಂಬಿ ಪುಣ್ಯ ಪಾಪಗಳಿಗನುಸಾರವಾಗಿ ಸಿಗುವ ಬೇರೆ ಲೋಕಗಳೇ ಇಲ್ಲ ಎಂಬುದಾಗಿ ಭಾವಿಸುವನು. ಆತನು ಮೃತ್ಯುವಾದ ನನಗೆ ಪುನಃ ಪುನಃ ವಶನಾಗುವನು. ಜನ್ಮ ಮರಣಗಳ ಸುಳಿಯಲ್ಲಿ ಕೀಟದಂತೆ ಭ್ರಮಿಸುವನು ಎಂಬುದಾಗಿ ನಾಸ್ತಿಕರಿಗೆ ಸಿಗುವ ಫಲವನ್ನು ಶ್ರುತಿಯು ಯಮಧರ್ಮನ ಮುಖದಿಂದಲೇ ವಿಶ್ವಕ್ಕೆಲ್ಲಾ ತಿಳಿಹಿಸಿರುವುದು.

## ಲೋಕ ಮತ್ತು ಲೋಕಾಂತರ ಪ್ರಾಪ್ತಿ

ಮಾನವ ಸಮಾಜದಲ್ಲಿ ಕೆಲವರು ವಿರಕ್ತರಾಗಿರುತ್ತಾರೆ. ಕೆಲವರು ವಿಷಯಿಗಳಾಗಿರುತ್ತಾರೆ. ಕೆಲವರು ನೀತಿಮಂತರಾದರೆ ಕೆಲವರು ಅನೀತಿಮಂತರಾಗಿರುತ್ತಾರೆ. ಹೀಗೆ ಪುಣ್ಯವಂತರು, ಪಾಪಿಷ್ಠರು ಮುಂತಾದ ತಾರತಮ್ಯ ಕಂಡುಬರುವುದು. ಇವರಿವರ ವಾಸನಾ, ಕರ್ಮ, ಸಂಸ್ಕಾರ ಇವುಗಳ ವೈಚಿತ್ರ್ಯದಿಂದ, ವಿಭಿನ್ನತೆಯಿಂದ ಮರಣೋತ್ತರ ಇವರಿಗೆ ಆಗುವ ಸ್ಥಿತಿಯಲ್ಲಿಯೂ, ವೈಚಿತ್ರ್ಯ ಮತ್ತು ಭಿನ್ನತೆ ಸ್ವಾಭಾವಿಕವಾಗಿಯೇ ಇರಬೇಕಾಗಿ ಬರುವುದು. ತನ್ನ ತನ್ನ ಕರ್ಮದ ಹಂಬಲು ಅಥವಾ ನೆನಪು ಮರಣೋತ್ತರವಿರದೆಂದಾದಲ್ಲಿ ಅದನ್ನು ತಿಳಿದು ಅದರ ತಕ್ಕ ಫಲವನ್ನು ಕೊಡಲು ಯಾವನಾದರೂ ಸರ್ವಜ್ಞ ಪರಮಾತ್ಮನು ಇದ್ದೇ ತೀರಬೇಕು. ಒಂದು ರಾಜ್ಯದಲ್ಲಿ ರಾಜನು ಸ್ವಾಮಿಯಾದರೂ ಆಡಳಿತೆಯ ಭಿನ್ನ ಭಿನ್ನ ವಿಷಯ–ವಿಭಾಗಗಳ ಹೊಣೆಗಾರಿಕೆಯನ್ನು ವಹಿಸಿಕೊಂಡು, ಭಿನ್ನ ಭಿನ್ನ ಅಧಿಕಾರಿವರ್ಗವು ಅವನಿಂದಲೇ ನಿಯುಕ್ತವಾಗಿರುತ್ತದೆ. ಅಂತೆಯೇ ಎಲ್ಲಾ ಜಗತ್ತೂ ಯಾವಾತನ ಆಡಳಿತೆಯಲ್ಲಿರುವುದೋ ಆ ಪರಮಾತ್ಮನು ಅವನ ರಾಜ್ಯವಾಗಿರುವಂತಹ ಈ ಜಗತ್ತಿನ ಸ್ವಾಮಿಯಿದ್ದರೂ, ಭಿನ್ನ ಭಿನ್ನ ವಿಷಯ–ವಿಭಾಗಗಳ ಹೊಣೆಗಾರಿಕೆಯನ್ನು ವಹಿಸಿಕೊಂಡು ಅವನಿಂದ ನಿಯುಕ್ತವಾದ ಭಿನ್ನ ಭಿನ್ನ ಅಧಿಕಾರಿಗಳು ಅವನ ರಾಜ್ಯದಲ್ಲಿ ಇದ್ದೇ ತೀರಬೇಕು— ಇವರೇ ಬ್ರಹ್ಮ, ವಿಷ್ಣು, ರುದ್ರ ಮತ್ತು ಇಂದ್ರಾದಿ ದೇವತೆಗಳು— ಈ ಎಲ್ಲದರ ಮೇಲೆ ಮೇಲ್ವಿಚಾರಣೆ ಮಾಡುವಂತಹ ಅಧಿಕಾರ ಮಾತ್ರ ಆ ಪರಮಾತ್ಮನದೇ ಎಂಬುದಕ್ಕೆ ಸಂದೇಹವೇ ಇಲ್ಲ. "**ಯ ಏಕೋ ವಿಶ್ವಸ್ಯ ಭುವನಸ್ಯ ರಾಜಾ**" ಎಂಬುದಾಗಿ ಋಗ್ವೇದದಲ್ಲಿ ಬಂದಿರುವುದು.

ಒಂದು ರಾಜ್ಯದಲ್ಲಿ ತಮತಮಗೆ ಅವಶ್ಯಕವಾದ ಖಾತೆ–ಕಚೇರಿಗೆ ಹೋಗುವಂತೆ ಭಿನ್ನ ಭಿನ್ನ ಸಂಸ್ಕಾರದ ಭಿನ್ನ ಭಿನ್ನ ಕರ್ಮವನ್ನು ಆಚರಿಸಿದ ಜನರು ತಮ್ಮ ತಮ್ಮ ವಿಚಾರಣೆಗಾಗಿ ವಿಧಿಸಿದ ಆಯಾ ಸ್ಥಳಕ್ಕೆ ಹೋಗಿಯೇ ತೀರಬೇಕು. ಈ ದೃಷ್ಟಿಯಿಂದ ಸ್ವರ್ಗ ಕಾಮನೆಯಿಂದ ಕರ್ಮಾನುಷ್ಠಾನಮಾಡಿದ ಪುಣ್ಯವಂತರಿಗೆ ಸ್ವರ್ಗವೂ, ನಿಷ್ಕಾಮ ಕರ್ಮ

ಮಾಡಿದ ನಿರಕ್ತರಿಗೆ ಬ್ರಹ್ಮಲೋಕವೂ, ಐಹಿಕ ಸುಖದ ಲಾಲಸೆಯಿಂದ ಕರ್ಮಮಾಡಿದ ಜನರಿಗೆ ಈ ಮೃತ್ಯುಲೋಕವೂ ಮತ್ತು ನಿಂದ್ಯ-ನಿಷಿದ್ಧವಾದ ಕರ್ಮವನ್ನು ಮಾಡಿದ ಜನರಿಗೆ ನರಕವೂ ಅಪರಿಹಾರ್ಯವಾದವುಗಳು.

## ಪರಲೋಕದ ಮಾರ್ಗದ್ವಯ

"ಸಂವತ್ಸರೋ ವೈ ಪ್ರಜಾಪತಿಸ್ತಸ್ಯಾಯನೇ ದಕ್ಷಿಣಂ ಚೋತ್ತರಂಚ ತದ್ಯೇಹ ವೈ ತದಿಷ್ಟಾಪೂರ್ತೇ ಕೃತಮಿತ್ಯುಪಾಸತೇ ತೇ ಚಾಂದ್ರಮಸಮೇವ ಲೋಕಂ ಅಭಿಜಯಂತೇ ತ ಏವ ಪುನರಾವರ್ತಂತೇ ತಸ್ಮಾದೇತ ಋಷಯಃ ಪ್ರಜಾಕಾಮಾ ದಕ್ಷಿಣಂ ಪ್ರತಿಪದ್ಯಂತೇ ಏಷ ವೈರಯಿರ್ಯಃ ಪಿತೃಯಾಣಃ" (ಪ್ರಶ್ನೋಪನಿಷತ್, ಪ್ರಥಮ ಪ್ರಶ್ನ: ೯ನೇ ಮಂತ್ರ).

ಉತ್ತರಾಯಣ ಮತ್ತು ದಕ್ಷಿಣಾಯನ, ದೇವಯಾನ ಮತ್ತು ಪಿತೃಯಾಣ, ಅರ್ಚಿರಾದಿ-ಧೂಮಾದಿ ಮಾರ್ಗಗಳೂ, ಶುಕ್ಲ-ಕೃಷ್ಣ ಗತಿಗಳೂ, ದಕ್ಷಿಣೋತ್ತರ ಮಾರ್ಗಗಳೂ ಈ ಎಲ್ಲಾ ಶಬ್ದಗಳೂ ಏಕಾರ್ಥಕವಾಗಿರುವುವು. ಯಾರು 'ಇಷ್ಟಾ ಪೂರ್ತ' ಎಂದರೆ ದೇವತೆಗಳ ಮತ್ತು ಪಿತೃಗಳ ತೃಪ್ತಿಗಾಗಿ ಕರ್ಮಮಾಡುವರೋ ಅವರು ಚಂದ್ರಲೋಕಕ್ಕೆ ಹೋಗಿ ಮುಟ್ಟುವರು. ಚಂದ್ರಲೋಕದಿಂದಲೇ ಸ್ವರ್ಗದ ಮಾರ್ಗವಿರುವುದು. ಹೀಗೆ ಕಾಮ್ಯ ಕರ್ಮದ ಅನುಷ್ಠಾನವನ್ನು ಮಾಡಿ ಚಂದ್ರಲೋಕದ್ವಾರಾ ಸ್ವರ್ಗಲೋಕವನ್ನು ಪಡೆದವರು ಮರಳಿ ಜನ್ಮವನ್ನು ಎತ್ತುವರು. ಪ್ರಜೆಯನ್ನು ಇಚ್ಛಿಸಿದವರು ದಕ್ಷಿಣಮಾರ್ಗದವರು; ಇದಕ್ಕೆ 'ಪಿತೃಯಾಣ' ಎಂದು ಹೇಳುವರು.

## ಇಷ್ಟಾಪೂರ್ತ ಕರ್ಮ

ಅಗ್ನಿಹೋತ್ರಂ ತಪಸ್ಸತ್ಯಂ ವೇದಾನಾಂ ಚಾನುಪಾಲನಂ ।
ಆತಿಥ್ಯಂ ವೈಶ್ವದೇವಶ್ಚ ಇಷ್ಟಮಿತ್ಯಭಿಧೀಯತೇ ॥
ವಾಪೀ ಕೂಪತಟಾಕಾದಿ ದೇವತಾ ಯತನಾನಿ ಚ ।
ಅನ್ನಪ್ರದಾನಮಾರಾಮಃ ಪೂರ್ತಮಿತ್ಯಭಿಧೀಯತೇ ॥

ಅಗ್ನಿಹೋತ್ರ, ಕೃಚ್ಛ್ರ ಚಾಂದ್ರಾಯಣಾದಿ ತಪಸ್ಸು, ವೇದಗಳ ಅಧ್ಯಯನಗಳಿಂದ ವೇದ ರಕ್ಷಣೆ, ಆತಿಥ್ಯ ಮತ್ತು ವೈಶ್ವದೇವ ಇವುಗಳಿಗೆ

ಇಷ್ಟವೆಂದೂ, ಸಣ್ಣ-ದೊಡ್ಡ ಭಾವಿಗಳು, ಕೆರೆಗಳು, ದೇವಾಲಯಗಳು, ಅನ್ನದಾನ, ಹೂವಿನತೋಟ ಮುಂತಾದುವುಗಳನ್ನು ಏರ್ಪಡಿಸುವುದು 'ಪೂರ್ತ' ವೆಂದೂ ಹೇಳಿಸಿಕೊಳ್ಳುವುದು. ದಾನ ಮಾಡಿದ್ದಕ್ಕೆ 'ದತ್ತ' ಎನ್ನುವರು.

## ಬ್ರಹ್ಮಲೋಕ ಗಮನ

**"ಅಥೋತ್ತರೇಣ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ವಿದ್ಯಯಾತ್ಮಾನ ಮನ್ವಿಷ್ಯಾಽಽದಿತ್ಯಮಭಿಜಯಂತೇ ಏತದ್ವೈಪ್ರಾಣಾನಾಂ ಆಯತನಮೇತದಮೃತಮಭಯಮೇತತ್ ಪರಾಯಣ ಮೇತಸ್ಮಾನ್ನ ಪುನರಾವರ್ತಂತೇ"** (ಪ್ರಥಮ ಪ್ರಶ್ನ, ಮಂತ್ರ ೧೦).

ಅರಣ್ಯಾದಿ ಏಕಾಂತ ಸ್ಥಳಗಳಲ್ಲಿ ತಪಸ್ಸನ್ನು ಮಾಡುವುದರಿಂದಲೂ, ಇಂದ್ರಿಯ ಜಯದಿಂದಲೂ, ಬ್ರಹ್ಮಚರ್ಯದಿಂದಲೂ, ಮೋಕ್ಷದಲ್ಲಿಟ್ಟಿರುವ ಶ್ರದ್ಧೆಯಿಂದಲೂ, ಅಧ್ಯಾತ್ಮಶಾಸ್ತ್ರದ ಅಭ್ಯಾಸದಿಂದಲೂ ಆತ್ಮಪ್ರಾಪ್ತಿಯ ಮಾರ್ಗದಲ್ಲಿ ಇರುವವರೆಲ್ಲಾ ಆದಿತ್ಯಲೋಕಕ್ಕೆ ಹೋಗುವರು. ಇಲ್ಲಿಂದಲೇ ಬ್ರಹ್ಮಲೋಕಕ್ಕೆ ಹಾದಿಯಿರುವುದು. ಎಲ್ಲಾ ಪ್ರಾಣಿಗಳಿಗೂ ಆಧಾರ ನಾಗಿರುವ, ಅವಿನಾಶಿಯಾಗಿರುವ, ಭಯರಹಿತವಾದ ಈ ಬ್ರಹ್ಮಲೋಕ ವನ್ನು ಯಾವ ಸನ್ಯಾಸಿಗಳು ಹೊಂದುವರೋ ಅವರು ಮರಳಿ ಜನ್ಮಕ್ಕೆ ಬಾರರು. ಇಲ್ಲಿಯೇ ಬ್ರಹ್ಮೈಕ್ಯವನ್ನು ಪಡೆಯುವ ಸಿದ್ಧತೆಯಿಂದ ಇಂತಹ ವಿರಕ್ತರು ಬ್ರಹ್ಮಲೋಕವನ್ನು ಹೊಂದಿ ಉಳಿದಿರುವ ಅಭ್ಯಾಸ ವನ್ನು ಮಾಡಿ ಚತುರ್ಮುಖ ಬ್ರಹ್ಮನೊಡನೆ ಕಲ್ಪಾಂತ್ಯದಲ್ಲಿ ಇವರು ಮುಕ್ತರಾಗುವರು.

ವೇದಾಂತ ವಿಜ್ಞಾನ ಸುನಿಶ್ಚಿತಾರ್ಥಾಃ ।
ಸನ್ಯಾಸಯೋಗಾದ್ಯತಯಶ್ಶುದ್ಧಸತ್ವಾಃ ॥
ತೇ ಬ್ರಹ್ಮಲೋಕೇ ತು ಪರಾಂತಕಾಲೇ ।
ಪರಾಮೃತಾತ್ ಪರಿಮುಚ್ಯಂತಿಸರ್ವೇ ॥ (ಮ. ನಾ. ಉ.)

ಈ ಮಂತ್ರದ ಅಭಿಪ್ರಾಯವೂ ಇದೇ ಆಗಿರುವುದು. ಈ ವಿಷಯವೇ ಮುಂಡಕೋಪನಿಷತ್ತಿನ ಪ್ರಥಮ ಮುಂಡಕದ ೧೦-೧೧ನೆಯ ಮಂತ್ರ ಗಳಲ್ಲಿ ಬಂದಿರುವುದು.

ಬೃಹದಾರಣ್ಯಕದ ಷಷ್ಠಾಧ್ಯಾಯದ ಎರಡನೇ ಬ್ರಾಹ್ಮಣದಲ್ಲಿಯೂ ಇದೇ ವಿಷಯವು ಇರುವುದು.

ಛಾಂದೋಗ್ಯದ ಚತುರ್ಥಾಧ್ಯಾಯದ ಹತ್ತನೆಯ ಖಂಡದಲ್ಲಿಯೂ ಈ ವಿಷಯವೇ ಬಂದಿರುತ್ತದೆ. ಬೃಹದಾರಣ್ಯ ಮತ್ತು ಛಾಂದೋಗ್ಯದಲ್ಲಿ ಆಯಾ ಲೋಕಕ್ಕೆ ಹೋಗಬೇಕಾದರೆ, ಮರಳಿ ಜನ್ಮವನ್ನು ತಾಳಬೇಕಾದರೆ ಆಗುವ ಏರ್ಪಾಡು-ಮಾರ್ಪಾಡುಗಳನ್ನು ಕೂಡ ವಿವರಿಸಿದೆ.

**"ತಸ್ಯ ವಾ ಏತಸ್ಯ ಪುರುಷಸ್ಯ ದ್ವೇ ಏವ ಸ್ಥಾನೇ ಇದಂ ಚ ಪರಲೋಕಸ್ಥಾನಂ ಚ"** (ಶತಪಥ ಬ್ರಾಹ್ಮಣ ೧೪-೭-೧-೯). ಶತಪಥ ಬ್ರಾಹ್ಮಣದಲ್ಲಿ ಜೀವಿಗೆ ಇಹ, ಪರ ಎಂಬ ಎರಡು ಸ್ಥಾನಗಳು ಇರುವವೆಂದು ಹೇಳಿದೆ. ಈ ಪರಲೋಕದಲ್ಲಿ ಪಿತೃಲೋಕ, ಗಂಧರ್ವಲೋಕ, ದೇವಲೋಕ, ಇತ್ಯಾದಿ ಲೋಕಗಳ ಅಂತರ್ಭಾವವಾಗುವುದು. ಇಹಲೋಕ ಎಂದರೆ ಮನುಷ್ಯಲೋಕವು. ಶತಪಥ ಬ್ರಾಹ್ಮಣದ ೧೪-೭-೧-೩೩ ಇದರಲ್ಲಿ ದೇವಲೋಕದ ವರ್ಣನೆಯಿದೆ, ೧೭ ರಲ್ಲಿ ಗಂಧರ್ವಲೋಕದ ವರ್ಣನೆಯಿದೆ, ೧೪-೭-೧-೧೯ ರಲ್ಲಿ ಪಿತೃಲೋಕದ ವರ್ಣನೆಯಿದೆ ಮತ್ತು ೩-೭-೧-೨೫ ರಲ್ಲಿ ಮನುಷ್ಯಲೋಕದ ವರ್ಣನೆಯಿರುತ್ತದೆ. **"ಮಹ್ಯಂ ದತ್ವಾ ವ್ರಜತ ಬ್ರಹ್ಮಲೋಕಮ್"** ಈ ಅಥರ್ವ ಮಂತ್ರದಲ್ಲಿ ಬ್ರಹ್ಮಲೋಕದ ಉಲ್ಲೇಖ ಬಂದದ್ದಲ್ಲದೆ ಆಯಾದೇವತೆಗಳು ಹವಿರ್ಗ್ರಹಣಾನಂತರ ಮರಳಿ ಬ್ರಹ್ಮಲೋಕಕ್ಕೆ ಹೋಗುವರು ಎಂಬುದು ಸ್ಪಷ್ಟವಾಗುವುದು.

**"ತದ್ವಿಷ್ಣೋಃ ಪರಮಂ ಪದಂ"** ಈ ಮಂತ್ರದಲ್ಲಿ ವಿಷ್ಣುಲೋಕವೂ, **"ಊರ್ಧ್ವೋನಾಕಸ್ಯಾಧಿ ಲೋಹ ವಿಷ್ಟಪಂ ಸ್ವರ್ಗೋ ಲೋಕೋ ಇತಿ ಯಂ ವದಂತಿ"** (ಅಥರ್ವ ೧೧-೧-೭). ಈ ಅಥರ್ವವೇದದ ಮಂತ್ರದಲ್ಲಿ ಸ್ವರ್ಗಲೋಕವೂ, **"ಪಿತ್ರೂಣಾಂ ಲೋಕಮಪಿ ಗಚ್ಛಂತು ಯೇ ಮೃತಾಃ"** (ಅಥರ್ವ ೧೨-೨-೪೫). ಈ ಅಥರ್ವವೇದದ ಮಂತ್ರದಲ್ಲಿ ಪಿತೃಲೋಕವೂ ಉಲ್ಲೇಖಿತವಾಗಿರುವುದು. **"ಅಥಾಹುಃ ನಾರಕಂ ಲೋಕಮ್"** (೧೨-೪-೩೬). ಈ ಅಥರ್ವವೇದದ ಮಂತ್ರದಲ್ಲಿ ನರಕಲೋಕದ ಉಲ್ಲೇಖವಿದೆ.

"ಇದಂ ಯಮಸ್ಯ ಸಾಧನಮ್" (ಋಗ್ವೇದ ೧೦–೧೩೫–೭). ಈ ಋಗ್ವೇದದ ಮಂತ್ರದಲ್ಲಿ ಯಮಲೋಕದ ವರ್ಣನೆಯಿದೆ. ಈ ಎಲ್ಲಾ ಉಲ್ಲೇಖಗಳಿಂದ ಜೀವಿಗೆ ಮರಣೋತ್ತರ ಪ್ರಾಪ್ತವಾಗುವ ಲೋಕಗಳಲ್ಲಿ ವಿಶ್ವಾಸವು ಹುಟ್ಟುವುದು. ಕರ್ಮಾನುಸಾರ ಫಲವನ್ನು ಊಟಮಾಡಲು ಆಯಾ ಲೋಕದಲ್ಲಿ ಜೀವಿಗೆ ತೆರಳಬೇಕಾಗಿ ಬರುವುದು ಎಂಬುದರಲ್ಲಿ ವಿಶ್ವಾಸವಿಡತಕ್ಕವನೇ "ಆಸ್ತಿಕ". ಪರಲೋಕದಲ್ಲಿ ಮತ್ತು ಪರಮಾತ್ಮನ ಐಕ್ಯವೊದಗುವವರೆಗೆ ವಾಸನೆಯ ಪ್ರಕಾರ ಆಗುವ ಪುನರ್ಜನ್ಮದಲ್ಲಿ ವಿಶ್ವಾಸ ವಿಡದಿದ್ದವನು "ನಾಸ್ತಿಕ". ಈ ವಿಚಾರಗಳೆಲ್ಲಾ ಶ್ರುತಿಗಳಲ್ಲೇ ಕಂಡು ಬರುವುದರಿಂದ ಮೇಧಾವಿಗಳಾದ ಬ್ರಾಹ್ಮಣರು ತಮ್ಮ ಸ್ವಾರ್ಥಕ್ಕಾಗಿ ಇವನ್ನೆಲ್ಲಾ ಹೇಳಿರುವರೆಂಬ ಮಾತು ಸೂಕ್ತ ಮತ್ತು ಸಯುಕ್ತಿಕವಾಗದು; ಅನ್ಯರಿಗೆ ವಿಶ್ವಸನೀಯವೂ ಇರದು.

"ಸ್ವರ್ಗಕಾಮೋ ಜ್ಯೋತಿಷ್ಟೋಮೇನ ಯಜೇತಾ" ಸ್ವರ್ಗ ಕಾಮನಾದವನು ಜ್ಯೋತಿಷ್ಟೋಮಾದಿ ಯಜ್ಞವನ್ನು ಮಾಡಬೇಕು. ಇತ್ಯಾದಿ ಶ್ರುತಿಗಳಿಂದಲೂ ಜೀವಿಯ ಪರಲೋಕ ಗಮನವು ಸಿದ್ಧವಾಗು ವುದು. ದೇಹಕ್ಕಿಂತಲೂ ಆತನ ಸ್ವರೂಪ ವಿಲಕ್ಷಣವಾದದ್ದೆಂದು ಮನ ದಟ್ಟಾಗುವುದು. ವೇದಗಳಿಗೇ ನಾಶವಲ್ಲದೆ ಆತನಿಗೆ ನಾಶವಿಲ್ಲ ಎಂದು ಈವರೆಗಿನ್ನ ವಿಚಾರದಿಂದಲೂ ತಿಳಿದುಬರುವುದು. ಈತನ ಸಂಕಲ್ಪದಿಂದಲೇ ಈತನಿಗೆ ಜನ್ಮ ಬಂದು ಈತನು ನಿಸ್ಸಂಕಲ್ಪ ಮತ್ತು ನಿಷ್ಕಾಮನಾಗುತ್ತಿರ ಲಾಗಿ ಬ್ರಹ್ಮಸ್ವರೂಪವನ್ನು ಪಡೆದು ಮುಕ್ತನಾಗುವನು ಎಂದು ಸ್ಪಷ್ಟ ವಾಗುವುದು.

"ಭವೇ ಭವೇ ನಾತಿ ಭವೇ ಭವಸ್ವಮಾಮ್" (ಇತಿ ಕೈ. ಮ. ನಾ. ಉ.). ನನ್ನನ್ನು ಜನ್ಮ ಮರಣಗಳಲ್ಲಿ ಸಿಲುಕಿಸದೆ ಈ ಜನ್ಮ ಮರಣ ಗಳನ್ನು ಹೋಗಲಾಡಿಸುವನು ನೀನಾಗು ಎಂಬುದಾಗಿ ಯಜುರ್ವೇದದ ಮಹಾ ನಾರಾಯಣೋಪನಿಷತ್ತಿನಲ್ಲಿಯೂ ರುದ್ರನ ಪ್ರಾರ್ಥನೆಯ ಮೂಲಕ ವಿವರಿಸಿದೆ. ರುದ್ರನು ಲಯಕರ್ತನು. ದೇಹ ಬಿದ್ದನಂತರ ಏನು ಉಳಿಯುವುದೆಂಬುದನ್ನು ಕೇಳುವುದಾದರೆ ಯಮಧರ್ಮನಿಗೇ ಸರಿ. ಈ ಪ್ರಪಂಚವೆಲ್ಲಾ ಲಯಹೊಂದಿದ ಮೇಲೆ ಏನು ಉಳಿಯುವುದೆಂಬು

ದನ್ನು ಕೇಳುವುದಾದರೆ ಅದು ರುದ್ರನಿಗೆ ಅಥವಾ ಈಶ್ವರನಿಗೇ ಸರಿ. ಪಿಂಡ ಬ್ರಹ್ಮಾಂಡದ ಲಯವಾದ ಮೇಲೆ ಉಳಿಯುವಂತಹುದನ್ನು ಇವರು ತಿಳಿಸುವರು. ಈ ವಿಷಯದಲ್ಲಿ ಇವರು ಹೇಳಿದ್ದೇ ಪ್ರಮಾಣ.

ಯೋಽಸೌ ಸರ್ವೇಷು ವೇದೇಷು ಪಠ್ಯತೇ ಹ್ಯಯಮೀಶ್ವರಃ ।
ಅಕಾಯೋ ನಿರ್ಗುಣೋ ಹ್ಯಾತ್ಮಾ ತನ್ಮೇ ಮನಃ ಶಿವಸಂಕಲ್ಪಮಸ್ತು ॥
(ಮಹಾನ್ಯಾಸ ಶಿವಸಂಕಲ್ಪ ೨೩)

(“ಪಠ್ಯತೇಹ್ಯಜ ಈಶ್ವರಃ” ಇತಿ ಪಾಠ ಭೇದಃ)

ಎಲ್ಲಾ ವೇದಗಳಲ್ಲಿಯೂ ಯಾವ ಜನ್ಮರಹಿತ ಅವಿನಾಶಿ ಪರಮಾತ್ಮನು ಕೊಂಡಾಡಲ್ಪಟ್ಟಿರುವನೋ, ಯಾವಾತನು ನಿರ್ಗುಣನಿರಾಕಾರನಾಗಿರುವನೋ ಆ ಪರಮಾತ್ಮನ ಪರವಾಗಿಯೇ ನನ್ನ ಮನಸ್ಸು ಯಾವಾಗಲೂ ಇರಲಿ!

ದೇಹದಲ್ಲಿರುವ ನಾನೆಂಬೀ ಅರಿವು ದೇಹ, ಪ್ರಾಣ, ಮನ ಬುದ್ಧಿ, ಭೇದಗಳನ್ನು ಸಂಬಂಧಿಸದೇ ಕೇವಲ ಸಚ್ಚಿದಾನಂದ ರೂಪದಿಂದಿದ್ದು, ಅವಿದ್ಯೆಯಿಂದ ತೋರಿಸಿಕೊಳ್ಳುವ ವಾಸನೆಯ ಮೂಲಕ ಈ ಎಲ್ಲವುಗಳಿಂದ ಒಡಗೂಡಿ ವಿಷಯದ ಭ್ರಾಮಕ ಅನುಭವಕ್ಕಾಗಿ ದೇಹಪರಿಗ್ರಹರೂಪವಾದ ಜನ್ಮವನ್ನು ತಾಳುವುದು. ಅವಿದ್ಯೆಯು ಇರುವವರೆಗೆ ಒಂದು ದೇಹವನ್ನು ಬಿಟ್ಟರೂ ವಾಸನೆಯನ್ನು ವಹಿಸಿ ಅದನ್ನು ಒಡಗೂಡಿ ಬೇರೆ ದೇಹವನ್ನು ಧರಿಸುವುದು. ಹೀಗೆ ಅನೇಕ ಜನ್ಮಗಳಾದರೂ ನಾನೆಂಬೀ ಅರಿವಿನಿಂದ ಕೂಡಿದ್ದ ಸಚ್ಚಿದಾನಂದ ರೂಪವು ಇದ್ದೇ ತೀರುವುದು. ಮತ್ತು ಇದೇ ತಾನೆಂಬ ಜ್ಞಾನವಾಗಿ ಅವಿದ್ಯೆಯು ತನ್ನ ಪ್ರಾಪಂಚಿಕ ವಾಸನೆಯ ಸಮೇತ ನಷ್ಟವಾಗಲು ಈ ಜನ್ಮ ಮರಣ ಸುಳಿಯಿಂದ ತಪ್ಪಿ ಪರಮಾತ್ಮನ ಸಾಯುಜ್ಯ ಮುಕ್ತಿಯಾಗುವುದೆಂದು ಶ್ರುತಿಶಾಸ್ತ್ರದ ಅಭಿಪ್ರಾಯ.

ಜಾಬಾಲಿಗಳೇ! ಪಂಚಭೂತಗಳಿಂದಾದ ದೇಹ ಪಂಚಭೂತಗಳಲ್ಲಿ ಸೇರಿಹೋದಮೇಲೆ ಸತ್ತವನು ಉಳಿಯುವನೆಂಬುವ ಮಾತಿಗೆ ಅರ್ಥ ವಿದೆಯೆ? ಎಂಬ ಈ ನಿಮ್ಮ ಪ್ರಶ್ನಕ್ಕೆ ಪುನರ್ಜನ್ಮದ ವಿಷಯದಲ್ಲಿಯೂ, ಸ್ವರ್ಗ, ನರಕ, ಬ್ರಹ್ಮಲೋಕಾದಿ ವಿಷಯಗಳಲ್ಲೂ ವಿಚಾರಮಾಡಿದ್ದಾಯಿತು. ಈವಾಗ ನೀವು ಆಕ್ಷೇಪಿಸಿದ ಶ್ರಾದ್ಧ ವಿಷಯದ ವಿಚಾರಮಾಡೋಣ.

## ಶ್ರಾದ್ಧ

"ಶ್ರದ್ಧಯಾ ದತ್ತಂ ಶ್ರಾದ್ಧಂ", ಶ್ರಾದ್ಧ ಶಬ್ದದಲ್ಲಿ "ಶ್ರದ್ಧಾ" ಶಬ್ದವೇ ಮುಖ್ಯವಾದದ್ದು. ತನ್ನ ಜನ್ಮವು ಯಾವ ಕುಲದಲ್ಲಿ ಆಗಿರುವುದೋ ಆ ಕುಲದ ಮೃತ ಪೂರ್ವಜರ ತೃಪ್ತಿಗಾಗಿಯೂ, ಅವರ ತೃಪ್ತಿಯಿಂದ ಒದಗುವ ಸತ್ಸಂತತಿ ಮತ್ತು ಚಿರಸಂಪತ್ತಿಗಾಗಿಯೂ, ತಿಲ, ದರ್ಭ ಮಂತ್ರಗಳಿಂದ ಅನುಷ್ಠಾನಮಾಡಲ್ಪಡುವ ಅನ್ನೋದಕ ದಾನರೂಪವಾದ ಪಿತೃಯಜ್ಞಕ್ಕೆ ಶ್ರಾದ್ಧವೆಂದು ಕರೆಯುವರು. ಇದೇ ಪಿತೃಕಾರ್ಯವು.

## ಶ್ರಾದ್ಧದ ಉದ್ದೇಶ್ಯ

ಅರ್ಥದಿಂದ ಸ್ವಪರ ಕುಟುಂಬ ಪೋಷಣವನ್ನೂ, ಕಾಮದಿಂದ ಸತ್ಪ್ರಜೋತ್ಪಾದನವನ್ನೂ, ಅದರ ಮೂಲಕವಾಗಿ ಸ್ವಪರ ಉದ್ಧಾರವನ್ನೂ ಸಾಧಿಸಿ ಗೃಹಸ್ಥ ಧರ್ಮದ ಅನುಷ್ಠಾನವನ್ನು ಪೂರ್ಣಪಡಿಸಿದ ಪಿತೃಗಳ ಆಶೀರ್ವಾದ ಅವರ ವಂಶಜರಿಗೂ ಈ ಕಾರ್ಯದ ಪೂರ್ತಿಗಾಗಿ ಅವಶ್ಯವಾದುದು. ಅದಕ್ಕಾಗಿ ಇರುವವರಿಗೆ ಕೃತಜ್ಞತೆಯಿಂದಲೂ, ಪಿತ್ರಾರ್ಜಿತದ ಸ್ವತ್ತಿನ ಪ್ರಾಪ್ತಿಗಾಗಿಯೂ, ಅವರ ಸೇವೆ ಮಾಡುವಂತೆ ಮರಣೋತ್ತರವೂ ಅವರ ಅರ್ಯಮಾದಿ ಪಿತೃದೇವತೆಗಳ ಮತ್ತು ಸ್ಥಿತಿಸ್ಥಾಪಕ, ಪಾಲನ ಕರ್ತೃ ವಿಷ್ಣುವಿನ ಪ್ರೀತ್ಯರ್ಥವಾಗಿಯೂ, ಅವರ ಕೃಪೆಯಿಂದ ಒದಗುವ ಸತ್ಸಂತತಿ ಹಾಗೂ ಚಿರಸಂಪತ್ತಿಗಳ ಲಾಭದಿಂದ ಪೂರ್ಣವಾಗುವ ಗೃಹಸ್ಥ ಧರ್ಮಕಾರ್ಯಕ್ಕಾಗಿಯೂ, ಶ್ರಾದ್ಧದ ಅನುಷ್ಠಾನವನ್ನು ಮಾಡಲು ವೇದವು ವಿಧಿಸುವುದು.

## ಪಿತೃಲೋಕ

"ಅಥಾಮೃತಾಃ ಪಿತೃಷು ಸಂಭವಂತು" (ಅಥರ್ವ. ೧೮–೪–೪೮). "ಪಿತ್ರೂಣಾಂ ಲೋಕಮಪಿಗಚ್ಛಂತು ಯೇ ಮೃತಾಃ" (ಅಥರ್ವ. ೧೨–೩–೪೫). ಈ ವೇದಾಧಾರಗಳಿಂದ ಬ್ರಹ್ಮಭೂತರಾಗದ ಮೃತ ಸತ್ಪಾತ್ರ ಪಿತೃಗಳು ಪಿತೃಲೋಕದಲ್ಲಿ ಅರ್ಯಮಾದಿ ಪಿತೃದೇವತೆಗಳೊಡನೆ ವಾಸವಾಗಿರುತ್ತಾರೆಂದು ಸ್ಪಷ್ಟವಾಗುವುದು.

## ದೇವ, ಪಿತೃ ಯಜ್ಞ

ಸ್ವರ್ಗಲೋಕದಲ್ಲಿ ಇರುವ ದೇವತೆಗಳನ್ನು ವೇದಮಂತ್ರಗಳಿಂದ ಕರೆದು ಮಳೆಬೆಳೆಗಾಗಿ ಮತ್ತು ಆರೋಗ್ಯಕ್ಕಾಗಿ ಆಹುತಿ ಮತ್ತು ಬ್ರಾಹ್ಮಣ ಭೋಜನ ಮೂಲಕ ತೃಪ್ತಿಪಡಿಸುವ ಕರ್ಮವಿಶೇಷಕ್ಕೆ ದೇವಯಜ್ಞ, ದೇವಕಾರ್ಯವೆನ್ನುವಂತೆ ಪಿತೃಲೋಕದಲ್ಲಿರುವ ಪಿತೃಗಳನ್ನು ವೇದಮಂತ್ರ ಗಳಿಂದ ಕರೆದು ಸತ್ಸಂತತಿ ಮತ್ತು ಸ್ಥಿರಸಂಪತ್ತಿಗಾಗಿ ಪಿಂಡ ಮತ್ತು ಬ್ರಾಹ್ಮಣ ಭೋಜನ ಮೂಲಕ ತೃಪ್ತಿಪಡಿಸುವ ಕರ್ಮವಿಶೇಷಕ್ಕೆ ಪಿತೃ ಯಜ್ಞ, ಪಿತೃಕಾರ್ಯ ಅಥವಾ ಶ್ರಾದ್ಧವೆನ್ನುವರು.

## ಅಗ್ನಿಯು ದೇವತೆಗಳ ಮುಖ

"ಅಗ್ನಿರ್ಹಿ ದೇವಾನಾಂ ಮುಖವ್" (ಶತಪಥ ಬ್ರಾ. ೩-೭). ಅಗ್ನಿಯಲ್ಲಿ ಆಹುತಿಯನ್ನು ಹಾಕಿದರೆ ದೇವತೆಗಳ ತೃಪ್ತಿಯಾಗುವುದು. ಅಗ್ನಿಯು ದೇವತೆಗಳ ಮುಖವೇ ಸರಿ ಎಂದು ವೇದವೂ ಸಾರುವುದು. "ಹಸಿವು ಆಗುವುದು, ತಿಂದ ಅನ್ನ ಪಚನವಾಗುವುದು ಅಗ್ನಿ ಯಿಂದಲೇ" ಎಂದಾಗುವಲ್ಲಿ ಬಾಹ್ಯಾಗ್ನಿಯಲ್ಲಿ ಹೋಮಿಸಿದುದು ಆಧಿ ದೈವಿಕದೃಷ್ಟಿಯಿಂದ ಎಲ್ಲಾ ದೇವತೆಗಳಿಗೆ ಮುಟ್ಟುವುದು. ಎಲ್ಲರ ಉದರಾಗ್ನಿ ಅಥವಾ ಜಠರಾಗ್ನಿಯು ಈ ಬಾಹ್ಯಾಗ್ನಿಯ ಅಂಶವೇ ಸರಿ. ಮೂಲಕ್ಕೆ ನೀರನ್ನೆರದರೆ ಎಲ್ಲಾ ಶಾಖೋಪಶಾಖೆಗಳಿಗೂ ಮುಟ್ಟುವಂತೆ, ಬಾಹ್ಯಾಗ್ನಿಯಲ್ಲಿ ಹೋಮಿಸಿದುದು ಎಲ್ಲರ ಜಠರಾಗ್ನಿಗಳಿಗೂ ಮುಟ್ಟುವುದು. ಆಯಾ ದೇಹದಲ್ಲಿ ಆಯಾ ದೇಹಿಯ ಅಭಿನಿವೇಶವಿರುವುದರಿಂದ (ಅಥವಾ ಅಭಿಮಾನವಿರುವುದರಿಂದ) ಆಯಾ ದೇಹದ ಹೆಸರಿನಿಂದ ಅಗ್ನಿಯಲ್ಲಿ ಸಮರ್ಪಿಸಿದ ಆಹುತಿಗಳಿಂದ ಆಯಾ ದೇಹದಲ್ಲಿರುವ ಜಠರಾಗ್ನಿಗೆ ತೃಪ್ತಿ ಯಾಗುವುದು. ಇನ್ನೊಂದು ವಾಯುರೂಪ ಸೂಕ್ಷ್ಮ ಶರೀರದಿಂದಿರುವ ದೇವತೆಗಳೂ, ಪಿತೃಗಳೂ ಕುಂಡಗತ ಅಗ್ನಿಯಲ್ಲಿ ಆವಿರ್ಭವಿಸಿ ಹವ್ಯ ಕವ್ಯ ಗಳನ್ನು ಸ್ವೀಕರಿಸುವರು.

## ಹವ್ಯ ಕವ್ಯ

"ಯೇ ನಿಖಾತಾ ಯೇ ಪರೋಪ್ತಾ ಯೇ ದಗ್ಧಾ ಯೇ ಚೋದ್ಧಿತಾಃ। ಸರ್ವಾಂಸ್ತಾನಗ್ನ ಆವಹ ಪಿತೄನ್ ಹವಿಷೇ ಅತ್ತವೇ"

(ಅಥರ್ವ. ೧೮–೨–೩೪). ಹೂಳಿದ, ಸುಟ್ಟ, ಭ್ರಾಂತರಾಗಿ ಸತ್ತ ಆ ಎಲ್ಲಾ ಪಿತೃಗಳನ್ನೂ ಈ ಕವ್ಯದಿಂದ ತೃಪ್ತರಾಗಲು ಹೇ ಅಗ್ನಿಯೇ! ನೀನು ಕರೆ! ಎಂಬುದಾಗಿ ಈ ಮಂತ್ರದ ಭಾವಾರ್ಥವಿದೆ. ದೇವತೆಗಳ ಪ್ರೀತ್ಯರ್ಥವಾದುದಕ್ಕೆ ಹವ್ಯ ಮತ್ತು ಪಿತೃಗಳ ಪ್ರೀತ್ಯರ್ಥವಾದುದಕ್ಕೆ ಕವ್ಯ ಎಂದು ಹೇಳುವರೆಂದು ಎಲ್ಲರಿಗೂ ಗೊತ್ತಿದ್ದುದೇ ಸರಿ.

## ಪರಮಾತ್ಮನ ಮುಖ

"ಮುಖಾದಿಂದ್ರಶ್ಚಾಗ್ನಿಶ್ಚ" ಪರಮಾತ್ಮನ ಮುಖದಿಂದ ಆದ ಅಗ್ನಿಯು ಪರಮಾತ್ಮನ ಮುಖವೆಂದು ಹೇಳಲ್ಪಟ್ಟಂತೆ "ಬ್ರಾಹ್ಮಣೋಽಸ್ಯ ಮುಖಮಾಸೀತ್" ಬ್ರಾಹ್ಮಣರು ಪರಮಾತ್ಮನ ಮುಖದಿಂದ ಆದುದರಿಂದ ಅವರು ಪರಮಾತ್ಮನ ಮುಖವೆಂತಲೇ ಕರೆಯಲ್ಪಡುವರು.

## ಬ್ರಾಹ್ಮಣ ಭೋಜನ

ಆಯಾ ದೇವ ಪಿತೃಗಳ ಉದ್ದೇಶದಿಂದ ಬ್ರಾಹ್ಮಣರಿಗೆ ಊಟವನ್ನು ಹಾಕುವುದೆಂದರೆ ಆಧಿಭೌತಿಕ ದೃಷ್ಟಿಯಿಂದ ಸರ್ವಾತ್ಮಕನಾದ ಪರಮಾತ್ಮನ ಮುಖದಲ್ಲಿ ಆಯಾ ದೇವ ಪಿತೃಗಳ ತೃಪ್ತಿಗಾಗಿ ಹವ್ಯ ಕವ್ಯಗಳನ್ನು ಸಮರ್ಪಿಸುವುದೇ ಸರಿ ಅಲ್ಲವೆ? ಅಗ್ನಿ, ಇಂದ್ರ, ಬ್ರಾಹ್ಮಣ ಈ ಮೂವರೂ ಪರಮಾತ್ಮನ ಮುಖರೂಪವಾದವರೆಂದು ಎನ್ನುವುದರಿಂದ ಬ್ರಾಹ್ಮಣ ಭೋಜನದಿಂದ ಪರಮಾತ್ಮನು, ಅಗ್ನಿ, ಅಗ್ನಿಮುಖರಾದ ದೇವತೆಗಳು ಮತ್ತು ಇಂದ್ರ ಇವರೆಲ್ಲ ತೃಪ್ತರಾಗುವುದರಲ್ಲಿ ಸಂದೇಹವಿಲ್ಲ. ವಿಪ್ರ ಮುಖವೂ ಕೂಡ ಅಗ್ನಿಯೇ ಸರಿ. ಇಲ್ಲಿ ಸಮರ್ಪಿಸಿದ ಹವ್ಯ ಕವ್ಯಗಳು ದೇವ ಪಿತೃಗಳಿಗೆ ಮುಟ್ಟುವುವು.

## ಬ್ರಾಹ್ಮಣ ಭೋಜನದ ಪ್ರಯೋಜನ

ವಿದ್ಯಾತಪಃ ಸಮೃದ್ಧೇಷು ಹುತಂ ವಿಪ್ರಮುಖಾಗ್ನಿಷು ।
ನಿಸ್ತಾರಯತಿ ದುರ್ಗಾಚ್ಚ ಮಹತಶ್ಚೈವ ಕಿಲ್ಬಿಷಾತ್ ॥
(ಮನು ಅ. ೩–೯೮)

ವಿದ್ಯೆ, ತಪಸ್ಸುಗಳಿಂದ ಸಮೃದ್ಧರಾದ ಬ್ರಾಹ್ಮಣರ ಮುಖಾಗ್ನಿಯಲ್ಲಿ ಸಮರ್ಪಿಸಿದ ಅನ್ನವು ಹವ್ಯಕವ್ಯವಾಗಿ ಯಜಮಾನನನ್ನು ಎಲ್ಲಾ ಕಷ್ಟ

ಸಂಕಟಗಳಿಂದಲೂ, ಎಲ್ಲಾ ಪಾಪ ತಾಪಗಳಿಂದಲೂ, ಮರಣೋತ್ತರ ಪ್ರಾಪ್ತವಾಗುವ ನರಕದಿಂದಲೂ ಮುಕ್ತನನ್ನಾಗಿ ಮಾಡುವುದಷ್ಟೇ ಅಲ್ಲ; ನರಕದಲ್ಲಿ ಬಿದ್ದ ಪಿತೃಗಳನ್ನೂ ಸಹ ಉದ್ಧರಿಸುವುದು. ಜಾಬಾಲಿಗಳೇ! ಮನುಮಹಾರಾಜನು ಹೇಳಿದ ಮಾತಿದು. ತನ್ನ ಸ್ವಾರ್ಥಕ್ಕಾಗಿ ಬ್ರಾಹ್ಮಣರು ಹೇಳಿದ್ದಲ್ಲ ಅಲ್ಲವೇ?

ಮನುಷ್ಯ ಸ್ಥೂಲದೇಹವು ಅನ್ನಮಯವಾದಕಾರಣ ದೇಹವಿರುವ ವರೆಗೆ ಅನ್ನ, ಆಹಾರ ಬೇಕಾಗುವುದು. ದೇಹವು ಬಿದ್ದುಹೋದ ನಂತರ ಈ ದೇಹ ಇರದು. ಆಗ್ಗೆ ಇದಕ್ಕೆ ಮೊದಲು ಬೇಕಾಗುವ ಅನ್ನವು ಬೇಕಾಗುವುದಿಲ್ಲ. ಆದರೆ ಆ ವಾಸನೆ ಇದ್ದ ಕಾರಣ ಸಂಕಲ್ಪದಿಂದ ಕೊಟ್ಟ ಕವ್ಯದಿಂದ ತೃಪ್ತರಾಗುವರು. ದೇಹಪಾತದ ನಂತರ ಸೂಕ್ಷ್ಮದೇಹದ ಪ್ರಾಧಾನ್ಯವಿರುವುದು. ಈ ಸೂಕ್ಷ್ಮದೇಹವು ವಾಸನಾಮಯವಾದುದು. "ವಾಸನಾತ್ಮಕಂ ಮನಃ" ವಾಸನೆ ಮನೋಹರವಾಗಿರುವುದು ಎಂದರೆ ಸ್ಥೂಲದೇಹ ನಷ್ಟವಾದ ನಂತರ ಬರುವ ದೇಹ ಕೇವಲ ಮನೋಮಯ ವಾಗಿರುವುದು.

## ಸಂಕಲ್ಪದಿಂದ ಕೊಟ್ಟದ್ದು ಮುಟ್ಟುವುದು

"ಸಂಕಲ್ಪಾತ್ಮಕಂ ಮನಃ" ಮನಸ್ಸು ಸಂಕಲ್ಪರೂಪವಾದುದು. ಮನೋಮಯ ಸೂಕ್ಷ್ಮದೇಹವು ಸಂಕಲ್ಪರೂಪವಾದುದರಿಂದ 'ಸೂಕ್ಷ್ಮ ದೇಹದಿಂದ ಜೀವಿಸುವ ಪಿತೃಗಳಿಗೆ ಅವರ ಹೆಸರಿನಿಂದ ಸಂಕಲ್ಪಿಸಿ ಕೊಟ್ಟ ಕವ್ಯಧಿಂದ ತೃಪ್ತಿಯಾಗುವುದು. ಇಲ್ಲಿ ಕೊಟ್ಟ ಆಹಾರ ಅವರ ಆಹಾರ ವಾಗಿ ಪರಿಣಮಿಸುವುದು. ದೇಹ ಬಿದ್ದುಹೋದಮೇಲೆ ಆ ದೇಹದ ಭಾವನೆ ಮಾತ್ರ ಅವರಿಗೆ ಇರುವುದರಿಂದ ಅವರ ಭಾವನೆಯಿಂದ ಕೊಟ್ಟ ವಸ್ತು ಅವರಿಗೆ ಸಲ್ಲುವುದು. ಅದರಿಂದ ತೃಪ್ತಿಯಾಗುವುದು. "ತಮಗಾಗಿ ಆತನು ಅನ್ನವನ್ನು ಕೊಟ್ಟನು" ಇಷ್ಟು ಅವರಿಗೆ ತಿಳಿದ ಮಾತ್ರಕ್ಕೆ ಪಿತೃಗಳು ತೃಪ್ತರಾಗುವರು. ಸ್ಥೂಲದೇಹವುಳ್ಳವರ ವಿಷಯದಲ್ಲಿ ಒಬ್ಬನ ಸಂಕಲ್ಪ ದಿಂದ ಬೇರೆಯವರಿಗೆ ಕೊಟ್ಟ ಆಹಾರವು ಆತನಿಗೆ ಸಲ್ಲದು. ಅದರಿಂದ ಆತನಿಗೆ ತೃಪ್ತಿಯಾಗದು ಎಂಬ ಈ ಉದಾಹರಣೆಯನ್ನು ಆಧಾರಕ್ಕೆ ಇಟ್ಟು

ಪಿತೃಗಳ ಸಂಕಲ್ಪದಿಂದ ಬ್ರಾಹ್ಮಣರಿಗೆ ಕೊಟ್ಟರೆ, 'ಅದು ಅವರಿಗೆ ಹೇಗೆ ಮುಟ್ಟುತ್ತದೆ?' ಎಂದು ಹೇಳಲಾಗದು.

## ಮನೋಭಾವನೆ

ಅನ್ನವನ್ನು ಊಟಮಾಡಿದರೆ ತೃಪ್ತಿಯಾಗುವುದು ಮನಸ್ಸಿಗೇ ಸರಿ. ಮನಸ್ಸು ಅತಿ ಸೂಕ್ಷ್ಮವಾದುದು. ದೇಹದ ಮತ್ತು ದೇಹಪೋಷಣೆಗೆ ಬೇಕಾದ ಅನ್ನೋಪಭೋಗಗಳ ಸಾಕ್ಷಾತ್ಸಂಬಂಧವು ಈ ಮನಸ್ಸಿಗೆ ಏನೂ ಇರದಿದ್ದರೂ ಕೇವಲ ಅದರ ಅಭ್ಯಾಸದಿಂದಲೇ, ಅದರ ಅನುಕೂಲ ಪ್ರತಿಕೂಲತೆಯ ಭಾವನೆಯಿಂದಲೇ ಸುಖದುಃಖವನ್ನು ಹೊಂದುವುದು. ಮನಸ್ಸು ಆಹಾರಾದಿ ಪದಾರ್ಥಗಳನ್ನು ಕೋರುವುದು—ಲಭಿಸುವಲ್ಲಿ ಸಂತುಷ್ಟವಾಗುವುದು—ಮನುಷ್ಯರಿಗೂ ಇದು ಸಾಮಾನ್ಯವೆಂದಾಗುವಲ್ಲಿ ಸ್ಥೂಲದೇಹದ ಸಂಬಂಧವಿರದವರ ವಿಷಯದಲ್ಲಿ ಮತ್ತೇನು ಹೇಳುವುದು.

## ಎಲ್ಲಾ ಮನೋಮಯ

"ಸ ಯದಾ ಮನಸಾ ಮನಸ್ಯತಿ ಮಂತ್ರಾನಧೀಯೀಯೇತ್ಯಥಾಧೀತೇ ಕರ್ಮಾಣಿ ಕುರ್ವೀಯೇತ್ಯಥ ಕುರುತೇ ಪುತ್ರಾꣳಶ್ಚ ಪಶೂꣳಶ್ಚೇಚ್ಛೇಯೇತ್ಯಥೇಚ್ಛತ ಇಮಂ ಚ ಲೋಕಮಮುಂ ಚೇಚ್ಛೇಯೇತ್ಯಥೇಚ್ಛತೇ ಮನೋಹಿ ಲೋಕಃ ॥"

(ಛಾಂ. ಉ. ಅ. ೭, ಖಂ. ૩)

ಮಂತ್ರಗಳನ್ನು ಉಚ್ಚರಿಸಬೇಕೆಂದು ಮನಸ್ಸಿನಿಂದ ಸಂಕಲ್ಪಿಸಿದಾಗ ಮಂತ್ರಗಳನ್ನು ಉಚ್ಚರಿಸುವನು. ಅಧ್ಯಯನವನ್ನು ಮಾಡುವನು. ಕರ್ಮಗಳನ್ನು ಮಾಡಬೇಕೆಂದಾಗ ಕರ್ಮಗಳನ್ನು ಮಾಡುವನು. ಪುತ್ರ, ಪಶ್ವಾದಿಗಳನ್ನು ಇಚ್ಛಿಸಬೇಕೆಂದು ಮನಸ್ಸಿನಿಂದ ಸಂಕಲ್ಪಿಸಿದಾಗ ಅವುಗಳನ್ನು ಇಚ್ಛಿಸುವನು. ಈ ಲೋಕದ ಮತ್ತು ಪರಲೋಕದ ಇಚ್ಛೆಯ ಸಂಕಲ್ಪ ಮಾಡಿದಾಗ ಅವುಗಳನ್ನು ಇಚ್ಛಿಸುವನು. ಒಟ್ಟು ಮನಸ್ಸೇ ಈ ಎಲ್ಲ ಲೋಕವೂ ಆಗಿರುವುದು. ಈ ಎಲ್ಲದಕ್ಕೂ ಮನಸ್ಸೇ ಕಾರಣ. ಎಲ್ಲಾ ವ್ಯವಹಾರವೂ ಮನೋಮಯವಾದುದು. ಪರಮಾತ್ಮನ ಮನಸ್ಸಿನ ಸಂಕಲ್ಪದಿಂದ ಈ ಸೃಷ್ಟಿಯಾಯಿತು. ಮನೋಮಯವೇ ಎಲ್ಲಾ

ಸೃಷ್ಟಿಯು. ಮನಸ್ಸಿನ ಸಂಕಲ್ಪವೇ ಜಗದಾಕಾರವಾಗಿ ಮೂಡಿರುವುದು. ಎಲ್ಲಾ ಪ್ರಪಂಚವೇ ಮನೋಮಯವೆಂದಾಗ ಮನಸ್ಸಿನ ಕಲ್ಪನೆಗಳೇ ಪದಾರ್ಥಗಳು; ಮನಸ್ಸಿನ ಕಲ್ಪನೆಯೇ ಎಲ್ಲಾ ವ್ಯವಹಾರ. ಇಲ್ಲಿ ಮತ್ತೇನು ಉಳಿಯಿತು? ಮನೋಮಯ ಸ್ವಪ್ನಸೃಷ್ಟಿಯಂತೆ ಜಾಗ್ರತಿಯ ಸೃಷ್ಟಿ ವ್ಯವಹಾರ, ಆಯಾ ಮನಸ್ಸಿನ ಸಂಕಲ್ಪದಿಂದ ಆಯಾ ಪದಾರ್ಥಗಳು, ಆಯಾ ಜಾತಿಗಳು, ಆಯಾ ಜಾತಿಸ್ವಭಾವಗಳು, ಆಯಾ ಜಾತಿ ಗುಣ ಧರ್ಮದ ಪ್ರಕಾರ ಆಯಾ ಜಾತಿಯ ವ್ಯವಹಾರ, ಆಯಾ ಜಾತಿಯ ಸಂಗಡ ವ್ಯವಹಾರ ಹೀಗೆ ಎಲ್ಲಾ ತೋರುವಿಕೆ, ಎಲ್ಲಾ ವ್ಯವಹಾರವೂ ಕೂಡ ಜೀವೇಶರ ಮನಸ್ಸಿನ ಸಂಕಲ್ಪದ ಒಂದೇ ಬಿಂದುವಿನಲ್ಲಿ ಅಳಿಯು ತ್ತಿರುವುದಲ್ಲದೆ ಮತ್ತೇನು?

## ಅಪರಿಹಾರ್ಯ ಈಶಸೃಷ್ಟಿ

ಎಲ್ಲವೂ ಮನೋಮಯವಾದರೂ ಆಯಾ ಮನಸ್ಸಿನ ಸಂಕಲ್ಪದ ಪ್ರಕಾರ ಪ್ರತಿ ಪ್ರಾಣಿ, ಪದಾರ್ಥಗಳಿಗೆ ಒಂದು ಸ್ವರೂಪ ಪ್ರಾಪ್ತವಾಗಿರುವುದು. ಅದಕ್ಕನುಗುಣವಾಗಿ ಆ ಸತ್ತೆಯ ಪ್ರಕಾರ ಅದಕ್ಕೆ ಸತ್ಯತ್ವವೊದಗಿ ಜಗತ್ತಿನ ವ್ಯವಹಾರ ಯಥೋಕ್ತವಾಗಿ ನಡೆಯುತ್ತಲಿರುವುದು. ಇದನ್ನು ಅನ್ಯಥಾ ಮಾಡಲು ಸಾಧ್ಯವಿಲ್ಲ. ವಿಪರೀತ ಭಾವನೆಗೂ ಅವಕಾಶವಿಲ್ಲ. ಎರಡು ಎರಡು ನಾಲ್ಕು ಎಂತಲೇ ಹೇಳಬೇಕು. ಮನೋಮಯವೆಂದು ಆರು ಹೇಳಲು ಸಾಧ್ಯವಾಗದು. ಈಶಸೃಷ್ಟಿಯ ನಿಯಮಗಳನ್ನು ಮೀರಿ ಹೋಗಲು ಯಾರಿಂದಲೂ ಸಾಧ್ಯವಿಲ್ಲ.

ಶ್ರುತಿ ಶಾಸ್ತ್ರಗಳ ಮಾತು ಹಿತವಾದುದು. ಅದರಲ್ಲಿ ಹೇಳಿರುವ ಗ್ರಾಹ್ಯಾಗ್ರಾಹ್ಯದ, ತ್ಯಾಗಾತ್ಯಾಗದ ವಿಚಾರವನ್ನು ಅನುಸರಿಸಬೇಕು.

## ಶ್ರುತಿ ಸ್ಮೃತಿ ವಚನ

"ಶ್ರುತಿ ಸ್ಮೃತ್ಯುದಿತೋ ಧರ್ಮೋ ಹ್ಯಧರ್ಮಸ್ತದ್ವಿಪರ್ಯಯಃ" ಶ್ರುತಿ ಸ್ಮೃತಿಗಳಿಂದ ನಿರ್ದೇಶಿಸಲ್ಪಟ್ಟದ್ದೇ ಧರ್ಮವು ಮತ್ತು ನಿಷೇಧಿಸಲ್ಪಟ್ಟದ್ದೇ ಅಧರ್ಮವು.

ಶ್ರುತಿ ಸ್ಮೃತಿತ್ಯುದಿತಂ ಧರ್ಮಮನುತಿಷ್ಠನ್ಹಿ ಮಾನವಃ ।
ಇಹಕೀರ್ತಿಮವಾಪ್ನೋತಿ ಪ್ರೇತ್ಯಚಾನುತ್ತಮಂ ಸುಖಮ್ ॥

(ಮನು ಅ. ೨–೯)

ಶ್ರುತಿ ಸ್ಮೃತಿಗಳಿಂದ ವಿಧಿಸಿದ ಧರ್ಮವನ್ನನುಷ್ಠಿಸಿದರೆ ಈ ಲೋಕದಲ್ಲಿ ಸತ್ಕೀರ್ತಿಯನ್ನು ಪಡೆದು, ಚೆನ್ನಾಗಿ ಬಾಳಿ, ಬದುಕಿ ದೇಹಾಂತ್ಯದಲ್ಲಿ ಆ ಪರಿಶುದ್ಧವಾದ ಪರಮಾತ್ಮನ ಅನಂತ ಆನಂದಸ್ವರೂಪದಲ್ಲಿ ಏಕನಾಗಿ ಮೋಕ್ಷ ಪಡೆಯುವನು. ವೇದದಲ್ಲಿ ದೇವ ಪಿತೃಗಳ ಕಾರ್ಯಗಳಿಗೆ ವಿಶೇಷ ಮಹತ್ವವನ್ನು ಕೊಟ್ಟಿದೆ. ಯಜ್ಞದಿಂದ ದೇವತೆಗಳ ತೃಪ್ತಿ ಮತ್ತು ಶ್ರಾದ್ಧಾದಿಗಳಿಂದ ಪಿತೃಗಳ ತೃಪ್ತಿಯಾಗಿ ಜಗತ್ತಿನಲ್ಲಿ ಮಳೆ-ಬೆಳೆ, ಧನ-ಧಾನ್ಯ, ಸತ್ಪ್ರಜೆ, ಸುಖ-ಸಮಾಧಾನ ಒದಗಿ ದಿವ್ಯ ಜೀವನವಾಗುತ್ತದೆ.

"**ಯಜ್ಞೋ ವಿಶ್ವಸ್ಯ ಭುವನಸ್ಯ ನಾಭಿಃ**" ಯಜ್ಞ ವಿಶ್ವದ ಸ್ಥಿತಿಗೆ ಕಾರಣವಾದುದು. "**ಇಚ್ಛಂತಿ ದೇವಾಃ ಸುನ್ವಂತಂ ನ ಸ್ವಪ್ನಾಯ ಸ್ಪೃಹಯಂತಿ**" (ಋ. ೮–೨–೧೮). ದೇವತೆಗಳು ಯಜ್ಞಕರ್ತೃ, ಸದಾಚಾರ ಸಂಪನ್ನ, ಪುರುಷಾರ್ಥ ಶೀಲ, ಆಸ್ತಿಕಭಾವನಾ ಸಂಪನ್ನ ಭಕ್ತರ ಮೇಲೆ ಪ್ರೀತಿಮಾಡುತ್ತಾರೆ. ಸೋಮಾರಿ, ನಾಸ್ತಿಕ ಜನರ ಮೇಲೆ ಅವರಿಗೆ ಪ್ರೀತಿಯಿರುವುದಿಲ್ಲ. "**ಶುದ್ಧಾಃ ಪೂತಾಭವತ ಯಜ್ಞಿಯಾ ಸಃ**" (ಋ. ೫–೫೧–೧). ಶುದ್ಧರಾಗಿ, ಪವಿತ್ರರಾಗಿ, ಆಸ್ತಿಕರಾಗಿ, ಯಾಜ್ಞಿಕರಾಗಿ, ಸಂಘಟಿತರಾಗಿ, ಭಕ್ತರಾಗಿ, ಪರೋಪಕಾರಿಗಳಾಗಿರಿ ಎಂದು ಶ್ರುತಿಯು ಬೋಧಿಸುವುದು. "**ಋತಸ್ಯ ಪಥಾ ಪ್ರೇತ**" (ಯಜು. ೭–೪೫) ಸತ್ಯ ಮಾರ್ಗದ ಅನುಸರಣೆಯನ್ನು ಮಾಡಿ ಎಂದು ಶ್ರುತಿಯು ಜೀವನದ ರಾಜ ಮಾರ್ಗವನ್ನು ಕಾಣಿಸುವುದು. "**ಸತ್ಯಸ್ಯ ನಾವಃ ಸುಕೃತಮಪೀ ಪರನ್**" (ಋ. ೯–೭೩–೧) ಸುಕೃತಿಯನ್ನು ಅಥವಾ ಧರ್ಮನಿಷ್ಠನನ್ನು ಸತ್ಯದ ನಾವೆಯು ಭವಸಾಗರದಿಂದ ಪಾರುಮಾಡುವುದು. "**ಸಂಶ್ರುತೇನ ಗಮೇಮಹಿ**" (ಅಥರ್ವ. ೧–೧–೪) ನಾವು ವೇದದ ಉಪದೇಶದ ಪ್ರಕಾರ ನಡೆಯೋಣ. "**ತದ್ ಯದ್ ಇದಮಾಹುಃ ಅಮುಂ ಯಜ ಅಮುಂ ಯಜ–ಇತಿ ಏಕೈಕಂ ದೇವಂ ಏತಸ್ಯೈವ ಸಾ ವಿಸೃಷ್ಟಿಃ ಏಷ ಉಹ್ಯೇವ ಸರ್ವೇ ದೇವಾಃ**" (ಶತಪಥ ಬ್ರಾ. ೧೪–೪–೨–೧೨).

## ಶ್ರುತಿಯ ಏಕಾತ್ಮ ಉಪದೇಶ

ಈತ ಈತನನ್ನು ಆರಾಧಿಸಿರಿ, ಈತ ಈತನಿಗಾಗಿ ಯಜ್ಞಮಾಡಿರಿ ಎಂದು ಅನೇಕ ವಿಧಾನಗಳನ್ನು ತಿಳಿಸಿ ಅದರಿಂದ ಶ್ರುತಿಯು ಎಲ್ಲರಲ್ಲಿಯೂ ಏಕಾತ್ಮಭಾವವನ್ನುಂಟುಮಾಡಿ ಎಲ್ಲರ ನಿರ್ವಾಹವಾಗುವ ಮಾರ್ಗವನ್ನು ಬೋಧಿಸುವುದು. ಒಬ್ಬ ಪರಮಾತ್ಮನೇ ಎಲ್ಲರಲ್ಲಿರುವನು. ಆತನಿಂದಲೇ ಈ ಎಲ್ಲವೂ ಆಯಿತು. ಆತನೇ ಎಲ್ಲಾ ದೇವತೆಗಳ ಸ್ವರೂಪನು. ಆದ ಕಾರ್ಯದ ನಿರ್ವಾಹಕ್ಕಾಗಿ ಯಜ್ಞಾದಿ ಅನುಷ್ಠಾನಗಳು ಅವಶ್ಯವಾಗಿವೆ ಯೆಂದು ಶ್ರುತಿಯ ಉಪದೇಶವಿದೆ. 'ಸ್ವಸ್ತಿ ಪಂಥಾಮನುಚರೇಮ' ನಾವೆಲ್ಲರೂ ವೇದ ಪ್ರತಿಪಾದಿತ ಸನ್ಮಾರ್ಗವರ್ತಿಗಳಾಗೋಣ.

## ಯಜ್ಞ, ದಾನ, ತಪಸ್ಸು

"ತ್ರಯೋ ಧರ್ಮಸ್ಕಂಧಾ ಯಜ್ಞೋಽಧ್ಯಯನಂ ದಾನಮಿತಿ ಪ್ರಥಮಸ್ತಪ ಏವ ದ್ವಿತೀಯೋ ಬ್ರಹ್ಮಚಾರ್ಯಾಚಾರ್ಯಕುಲ ವಾಸೀ ತೃತೀಯೋಽತ್ಯಂತಮಾತ್ಮಾನಮಾಚಾರ್ಯಕುಲೇಽವಸಾದ ಯನ್ಸರ್ವ ಏ ತೇ ಪುಣ್ಯಲೋಕಾ ಭವಂತಿ ಬ್ರಹ್ಮಸಂಸ್ಥೋಽಮೃತತ್ವ ಮೇತಿ" (ಛಾಂ. ಅ. ೨, ಖಂ. ೨೩).

ಧರ್ಮದಲ್ಲಿ ಮೂರು ವಿಭಾಗಗಳಿರುವುವು: ಯಜ್ಞ, ಅಧ್ಯಯನ, ದಾನ ಇದು ಮೊದಲನೆಯ ವಿಭಾಗ. ತಪಸ್ಸು ಎರಡನೆಯ ವಿಭಾಗ. ಆಚಾರ್ಯನು ಅಧ್ಯಾಪಿಸುವುದು ಮತ್ತು ಬ್ರಹ್ಮಚಾರಿಗಳು ಶರೀರ ಕಷ್ಟ ವನ್ನು ಸಹನಮಾಡಿ ಅಧ್ಯಯನ ಮಾಡುವುದು ಮೂರನೆಯ ವಿಭಾಗ. ಇವರೆಲ್ಲರೂ ಪುಣ್ಯಭಾಗಿಗಳಾಗುವರು. ಈ ವಿಧವಾಗಿ ಶಾಸ್ತ್ರೀಯ ಮಾರ್ಗ ದಿಂದ ಅನುಷ್ಠಾನವನ್ನು ನಡೆಸಿ ಬ್ರಹ್ಮಸ್ವರೂಪದಲ್ಲಿ ನೆಲಗೊಂಡವನು ಅಮೃತತ್ವವನ್ನು ಪಡೆಯುವನು.

"ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ । ತೇ ಹನಾಕಂ ಮಹಿಮಾನಃ ಸಚಂತೇ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥" (ಪು. ಸೂ.)

ಪರಮಾತ್ಮನ ಸೇವೆಯೆಂದು ಭಕ್ತಿಯಿಂದ ಧರ್ಮರೂಪವಾದ ಯಜ್ಞವನ್ನು ಮಾಡಿ ಪೂರ್ವಿಕರು ದೇವತೆಗಳ ಸ್ವರ್ಗವನ್ನೈದಿದರು, ಮಹಿಮೆಯನ್ನು ಪಡೆದರು. ಅವರು ಅನುಷ್ಠಿಸಿದ ಆ ಯಜ್ಞಗಳೇ ಪ್ರಥಮ ಧರ್ಮಗಳಾದುವು ಎಂಬುವುದಕ್ಕೆ ಈ ಮಂತ್ರವು ಆಧಾರವಾಗಿದೆ.

## ಯಜ್ಞದ ಮಹತ್ವ

"ಯಜ್ಞ ಇತಿ ಯಜ್ಞೇನ ಹಿ ದೇವಾ ದಿವಂಗತಾ ಯಜ್ಞೇನಾ ಸುರಾನಪಾನುದಂತ ಯಜ್ಞೇನದ್ವಿಷಂತೋ ಮಿತ್ರಾ ಭವಂತಿ ಯಜ್ಞೇ ಸರ್ವಂ ಪ್ರತಿಷ್ಠಿತಂ ತಸ್ಮಾದ್ಯಜ್ಞಂ ಪರಮಂ ವದಂತಿ" (ಮ. ನಾ. ಉ. ೭೯).

ಯಜ್ಞದಿಂದಲೇ ಮನುಷ್ಯರು ದೇವತೆಗಳಾಗಿ ಸ್ವರ್ಗಕ್ಕೆ ಹೋದರು. ಯಜ್ಞದ ಬಲದಿಂದಲೇ ಅಸುರರ ನಾಶವನ್ನು ಮಾಡಿದರು. ಯಜ್ಞದಿಂದ ದ್ವೇಷಿಗಳೂ ಸಹ ಮಿತ್ರರಾಗುವರು. ಯಜ್ಞದಲ್ಲಿಯೇ ಎಲ್ಲಾ ಪ್ರತಿಷ್ಠಿತವಾದುದು. ಆದುದರಿಂದ ಯಜ್ಞವು ಶ್ರೇಷ್ಠವೆಂದು ಹೇಳುವರು. ಕಾಮ್ಯವಾದ ದ್ರವ್ಯ ಯಜ್ಞದಿಂದ ಸ್ವರ್ಗ, ನಿಷ್ಕಾಮವಾದ ದ್ರವ್ಯ ಯಜ್ಞದಿಂದ ಚಿತ್ತಶುದ್ಧಿ ಮತ್ತು ಜ್ಞಾನ ಯಜ್ಞದಿಂದ ಮುಕ್ತಿಯಾಗುವುದು.

ಶತಂ ಕ್ರತೂನಾಮಾಹೃತ್ಯ ದೇವರಾಟ್ ತ್ರಿದಿವಂ ಗತಃ ।
ತಪಾಂಸ್ಯುಗ್ರಾಣಿ ಚಾಸ್ಥಾಯ ದಿವಂ ಪ್ರಾಪ್ತಾ ಮಹರ್ಷಯಃ ॥ ೨೯ ॥
(ವಾ. ರಾ. ಅ. ಸರ್ಗ ೧೦೯)

ನೂರು ಅಶ್ವಮೇಧ ಯಜ್ಞಗಳನ್ನು ಸಾಂಗವಾಗಿ ಪೂರ್ಣಪಡಿಸಿದರೆ ಆತನು ಇಂದ್ರನಾಗುತ್ತಾನೆಂದು ಸರ್ವಶ್ರುತವಾದ ಶಾಸ್ತ್ರ ಪ್ರಸಿದ್ಧ ಮಾತು. ಈ ನೂರು ಯಜ್ಞಗಳನ್ನು ಮಾಡಿ ಮನುಷ್ಯನು ಇಂದ್ರನಾದನು. ಇಂದ್ರನಿಗೆ 'ಶತಕ್ರತುಃ' ಎಂದು ಹೆಸರಿರುತ್ತೆ. ಈ ಉದಾಹರಣೆ ಯಜ್ಞದ ಫಲವನ್ನು ಪ್ರಕಟಪಡಿಸುವುದಲ್ಲವೆ! ಉಗ್ರವಾದ ತಪಸ್ಸನ್ನು ಆಚರಿಸಿ ಮಹರ್ಷಿಗಳೆಲ್ಲ ಸ್ವರ್ಗವನ್ನು ಹೊಂದಿದರೆಂಬೀ ಉದಾಹರಣೆಯಿಂದ ತಪಸ್ಸಿನ ಮಹತ್ವವನ್ನು ತಿಳಿಯಬಹುದಲ್ಲವೆ !

## ತಪಸ್ಸಿನ ಮಹತ್ವ–ತಪಸ್ಸು

"ಋತಂ ತಪಃ ಸತ್ಯಂ ತಪಃ ಶ್ರುತಂ ತಪಃ ಶಾಂತಂ ತಪೋ ದಮಸ್ತಪಃ ಶಮಸ್ತಪೋ ದಾನಂ ತಪೋ ಯಜ್ಞಂ ತಪೋ ಭೂರ್ಭುವಸ್ಸುವರ್ಬ್ರಹ್ಮೈತ ದುಪಾಸ್ಯೈತ ತತ್ತಪಃ ॥" (ಮ. ನಾ. ಉ. ೧/೧೦).

ಪಾರಮಾರ್ಥಿಕ ಸತ್ಯವನ್ನೇ ನುಡಿಯುವುದೂ (ಬ್ರಹ್ಮನಿರೂಪಣ ವನ್ನು ಮಾಡುವುದೂ) ವ್ಯಾವಹಾರಿಕ ಸತ್ಯವನ್ನು ನುಡಿಯುವುದೂ (ವ್ಯವ ಹಾರದಲ್ಲಿ ಗೊತ್ತಾದಂತೆ ನುಡಿಯುವುದೂ) ಶ್ರೀ ಗುರುಮುಖದಿಂದ ಶ್ರವಣ ಮಾಡುವುದೂ ಎಂಥಾ ಪ್ರಸಂಗದಲ್ಲಿಯೂ ಶಾಂತನಾಗಿರುವುದೂ, ದೇಹೇಂದ್ರಿಯ ನಿಗ್ರಹ ಮಾಡುವುದೂ, ಮನೋ ನಿಗ್ರಹ ಮಾಡುವುದೂ, ಸತ್ಪಾತ್ರದಲ್ಲಿ ಯಥಾಶಕ್ತಿ ದಾನಮಾಡುವುದೂ, ಹೋಮಹವನಾದಿಗಳನ್ನು ಮಾಡುವುದೂ (ದೇವ ಪೂಜೆಯನ್ನು ಮಾಡುವುದೂ, ಜನರಲ್ಲಿ ಐಕ್ಯ ವನ್ನುಂಟುಮಾಡುವುದೂ) ಸಚ್ಚಿದಾನಂದಾತ್ಮಕವಾದ ಬ್ರಹ್ಮಸ್ವರೂಪದ ಉಪಾಸನೆಯನ್ನು ನಡೆಯಿಸುವುದೂ ಇವೆಲ್ಲಾ ತಪಸ್ಸೇ ಸರಿ.

ವಿದ್ಯಾಭ್ಯಾಸ, ಗುರುಶುಶ್ರೂಷೆ, ಬ್ರಹ್ಮಚರ್ಯ ಇವು ಬ್ರಹ್ಮ ಚರ್ಯಾಶ್ರಮದ ತಪಸ್ಸು; ದಾನ, ದಯೆ, ವಿಧ್ಯುಕ್ತಕರ್ಮ ಮತ್ತು ಉಪಾಸನೆ; ಪಾತಿವ್ರತ್ಯ, ಏಕಪತ್ನಿ ವ್ರತಾದಿಗಳು ಗೃಹಸ್ಥರ ತಪಸ್ಸು; ದೇಹದಂಡನಾ ಪೂರ್ವಕವಾಗಿ ಮುಕ್ತನಾಗಲು ಕರ್ಮ ಉಪಾಸನೆಯನ್ನು ನಡೆಸಿ ಜ್ಞಾನ ವಿಚಾರ ಮಾಡುವುದು ವಾನಪ್ರಸ್ಥರ ತಪಸ್ಸು; ಸರ್ವತ್ಯಾಗ ಪುರಸ್ಸರವಾಗಿ ಕೇವಲ ಬ್ರಹ್ಮಾನುಸಂಧಾನಪರನಾಗಿರುವುದು ಸನ್ಯಾಸಿಗಳ ತಪಸ್ಸು.

ಬ್ರಾಹ್ಮಣಸ್ಯ ತಪೋಜ್ಞಾನಂ ತಪಃ ಕ್ಷತ್ರಸ್ಯ ರಕ್ಷಣಂ ।
ವೈಶ್ಯಸ್ಯ ತು ತಪೋ ವಾರ್ತಾ ತಪಃ ಶೂದ್ರಸ್ಯ ಸೇವನಂ ॥ ೨೩ ॥

ಜ್ಞಾನವೇ ಬ್ರಾಹ್ಮಣರ ತಪಸ್ಸು, ರಕ್ಷಣವೇ ಕ್ಷತ್ರಿಯರ ತಪಸ್ಸು; ಧನಾರ್ಜನೆಯೇ ವೈಶ್ಯರ ತಪಸ್ಸು, ಸೇವೆಯೇ ಶೂದ್ರರ ತಪಸ್ಸು.

ಋಷಯಃ ಸಂಯತಾತ್ಮಾನಃ ಫಲಮೂಲಾ ನಿಲಾಶನಾಃ ।
ತಪಸೈವ ಪ್ರಪಶ್ಯಂತಿ ತ್ರೈಲೋಕ್ಯಂ ಸಚರಾಚರಂ ॥ ೨೪ ॥

ಔಷಧಾನ್ಯಗದೋ ವಿದ್ಯಾ ದೈವೀ ಚ ವಿವಿಧಾಸ್ಥಿತಿಃ ।
ತಪಸೈವ ಪ್ರಸಿಧ್ಯಂತಿ ತಪಸ್ತೇಷಾಂ ಹಿ ಸಾಧನಂ ॥ ೨೩೭ ॥

ಯದ್ದುಸ್ತರಂ ಯದ್ದುರಾಪಂ ಯದ್ದುರ್ಗಂ ಯಚ್ಚ ದುಷ್ಕರಂ ।
ಸರ್ವಂ ತತ್ತಪಸಾ ಸಾಧ್ಯಂ ತಪೋ ಹಿ ದುರತಿಕ್ರಮಂ ॥ ೨೩೮ ॥
(ಮನುಧರ್ಮ ಅ. ೧೧)

ದೇಹ, ವಾಕ್ಕು, ಮನಸ್ಸುಗಳನ್ನು ತಮ್ಮ ವಶದಲ್ಲಿಟ್ಟು ಸವಿತ್ರಾಂತಃ ಕರಣದ, ಫಲಮೂಲ ಮತ್ತು ವಾಯುವಿನ ಆಹಾರವುಳ್ಳ ಋಷಿಗಳು ತಪೋಬಲದಿಂದ ಕುಳಿತ ಸ್ಥಳದಿಂದಲೇ ಮೂರು ಲೋಕದ ಚರಾಚರ ಪ್ರಾಣಿಗಳನ್ನು ಅನಾಯಾಸವಾಗಿ ಕಾಣುತ್ತಿದ್ದರು.

ಔಷಧಿಗಳ ಜ್ಞಾನ, ಆರೋಗ್ಯ, ಎಲ್ಲಾ ವಿದ್ಯೆ, ಎಲ್ಲಾ ವೇದಶಾಸ್ತ್ರ ಗಳ ಪ್ರಾವೀಣ್ಯ, ಸ್ವರ್ಗವಾಸ ಮುಂತಾದವುಗಳನ್ನೆಲ್ಲಾ ತಪಸ್ಸಿನಿಂದಲೇ ಪಡೆಯುತ್ತಿದ್ದರು.

ತಪಸ್ಸೇ ಒಂದು ಅವರ ಸಾಧನವಾಗಿತ್ತು. ಯಾವುದು ದಾಟಿ ಹೋಗಲು ಬಹುಮಟ್ಟಿಗೆ ಕಷ್ಟವಾದುದೋ ಅಂಥಾ ಸಂಸಾರ ಸಮುದ್ರವು, ಹೊಂದಲು ಅಸಾಧ್ಯವಾದ ಬ್ರಹ್ಮಪದವು, ಸಾಗಿಸಲು ಅತಿ ಕಷ್ಟವಾದ ಸಂಸಾರ ಯಾತ್ರೆಯು, ಮಾಡಲು ಅತಿ ಕಠಿನವಾದ ಮೋಕ್ಷಸಾಧನವು, ಎಲ್ಲವೂ ತಪಸ್ಸಿನಿಂದಲೇ ಸಾಧ್ಯ. ತಪಶ್ಶಕ್ತಿಯು ಅತಿ ದುರ್ದಮ್ಯವಾದುದು.

"**ತಪಸಾ ಚೀಯತೇ ಬ್ರಹ್ಮ ।**" (ಮುಂಡಕ. ೧–೮) ತಪಸ್ಸಿನಿಂದಲೇ ಬ್ರಹ್ಮವು ವಿಕಾಸಗೊಳ್ಳುವುದು. "**ಸತ್ಯೇನ ಲಭ್ಯಸ್ತಪಸಾಹ್ಯೇಷ ಆತ್ಮಾಸಮ್ಯಗ್ಜ್ಞಾನೇನ ಬ್ರಹ್ಮಚರ್ಯೇಣ ನಿತ್ಯಂ ॥**" (ಮುಂಡಕ. ೩–೧–೫). ಬ್ರಹ್ಮಪ್ರತಿಪಾದಕ ಸತ್ಯ ಭಾಷಣದಿಂದಲೂ, ಉಪನಿಷದ್ವಿಚಾರ, ಇಂದ್ರಿಯ ಮನಸ್ಸುಗಳ ಏಕಾಗ್ರತೆ, ಶ್ರುತ್ಯುಕ್ತ ಆತ್ಮಲಕ್ಷಣಗಳ ಅನುಸಂಧಾನ, ಅಹಂವೃತ್ತಿ ಶೂನ್ಯನಾಗುವಿಕೆ ಮುಂತಾದ ತಪಸ್ಸಿನಿಂದಲೂ, ಅಸಂಗ ಅದ್ವಿತೀಯ ಜ್ಞಾನದಿಂದಲೂ, ನಿತ್ಯಬ್ರಹ್ಮಚರ್ಯ ದಿಂದಲೂ, ಆತ್ಮರೂಪದ ಜ್ಞಾನವಾಗುವುದು.

ತೈತ್ತರೀಯ ಭೃಗುವಲ್ಲಿಯಲ್ಲಿ "**ತಪಸಾ ಬ್ರಹ್ಮ ವಿಜಿಜ್ಞಾಸಸ್ವ**" ತಪಸ್ಸಿನಿಂದಲೇ ಬ್ರಹ್ಮವನ್ನು ತಿಳಿದುಕೊ. ತಪಸ್ಸಿನಿಂದಲೇ ಬ್ರಹ್ಮವು

ತಿಳಿಯಲ್ಪಡುವುದು. ಆದಕಾರಣ ಔಪಚಾರಿಕವಾಗಿ ತಪಸ್ಸೇ ಬ್ರಹ್ಮ ವೆಂದು ಇಲ್ಲಿ ಹೇಳಿರುವುದು. ಬ್ರಹ್ಮಸ್ವರೂಪವನ್ನು ತಿಳಿಯಲು ಅವಶ್ಯ ವಾದ ತಪಸ್ಸಿನ ಲಕ್ಷಣವನ್ನೂ ಸಹ ಇಲ್ಲಿಯೇ ಹೇಳಿದೆ. "ಯತೋ ವಾ ಇಮಾನಿ ಭೂತಾನಿ ಜಾಯಂತೇ। ಯೇನ ಜಾತಾನಿ ಜೀವಂತಿ। ಯತ್ಪ್ರಯಂತ್ಯಭಿ ವಿಶಂ ವಿಶಂತಿ। ತದ್ವಿಜಿಜ್ಞಾಸಸ್ವ ತದ್ಬ್ರಹ್ಮೇತಿ॥" ಯಾವುದರಿಂದ, ಚತುರ್ಮುಖ ಬ್ರಹ್ಮನಿಂದ ಪ್ರಾರಂಭಿಸಿ ಇರುವೆ ವರೆಗಿನ ಎಲ್ಲಾ ಭೂತಗಳೂ ಉಂಟಾಗುವುವೋ, ಯಾವುದರಿಂದ ಉತ್ಪನ್ನವಾದ ಎಲ್ಲಾ ಭೂತಗಳೂ ಜೀವಿಸುವುವೋ, ಕೊನೆಯಲ್ಲಿ ಈ ಎಲ್ಲಾ ಪ್ರಾಣಿಗಳು ಯಾವುದರಲ್ಲಿ ಲಯಿಸಿ, ಅದರೊಡನೆ ಒಂದಾಗಿ ಹೋಗುವುವೋ, ತಮ್ಮ ಉತ್ಪತ್ತಿ ಸ್ಥಿತಿ ಲಯ ಕಾಲದಲ್ಲಿ ಎಲ್ಲಾ ಪ್ರಾಣಿ ಪದಾರ್ಥಗಳು ಯಾವ ಸ್ವರೂಪವನ್ನು ಬಿಟ್ಟಿರವೋ ಅದೇ ಬ್ರಹ್ಮ. ಅದರ ಪ್ರಾಪ್ತಿ ಮೇಲ್ಕಂಡ ವಿಚಾರದಿಂದ ಆಗುವುದು. ಇದೇ ಆತ್ಮಪ್ರಾಪ್ತಿಗಾಗಿ ಹೇಳಿದ ತಪಸ್ಸೆಂದು ಇಲ್ಲಿ ಅಭಿಪ್ರಾಯವಾಗುವುದು. ಪಿತಾ ಪುತ್ರರಾದ ವರುಣ-ಭೃಗು ಸಂವಾದ ರೂಪ ಐತಿಹ್ಯವಿದು. ಹೀಗೆ ವಿಚಾರಮಾಡುತ್ತ ಹೋದಾಗ ಈತನಿಗೆ ಆನಂದಸ್ವರೂಪ ಸಾಕ್ಷಾತ್ಕಾರವಾದುದೂ ಇಲ್ಲಿ ಕಂಡುಬರುವುದು. "ತಪಃಪ್ರಭಾವಾದ್ದೇವಪ್ರಸಾದಾಚ್ಚ ಬ್ರಹ್ಮ ಹ ಶ್ವೇತಾಶ್ವತರೋಽಥ ವಿದ್ವಾನ್" (ಶ್ವೇತಾಶ್ವೇತೋಪನಿಷತ್ತಿನ ಕೊನೆ) 'ತಪಃಪ್ರಭಾವ ದಿಂದಲೂ, ಈಶ್ವರ ಪ್ರಸಾದದಿಂದಲೂ ಶ್ವೇತಾಶ್ವೇತರನಿಗೆ ಜ್ಞಾನ ವಾಯಿತು' ಎಂದು ಒಂದು ಐತಿಹ್ಯವಿದೆ. ಜಾಬಾಲಿಗಳೇ! ನೀವು ಹೂಡಿದ ನಾಸ್ತಿಕವಾದದ ದುಷ್ಪರಿಣಾಮವು ಜನರ ಮನಸ್ಸಿನಮೇಲೆ ಉಂಟಾಗಬಾರದೆಂದು ನೀವು ಹೇಳಿದ ಒಂದೊಂದು ವಿಷಯದ ನಿರಾಕರಣೆ ಯನ್ನು ಮಾಡುತ್ತಿರುವೆನು. ಈವರೆಗೆ ಸತ್ಯದ ಪಾಲನೆ, ಸದಾಚಾರ ತಾಯಿತಂದೆ ಗುರುಹಿರಿಯರಲ್ಲಿ ವಿಶ್ವಾಸ ಅವರ ಆಜ್ಞೆಯ ಪರಿಪಾಲನೆ, ಪಿತೃಯಜ್ಞ, ದೇವಯಜ್ಞ, "ದೇಹೋಮ್ರಿಯತೇ ನ ಜೀವ ಇತಿ" ಜೀವನ ಅನಶ್ವರತ್ವ, ದೇಹದ ನಶ್ವರತ್ವ, ತಪಸ್ಸು, ಇವುಗಳ ವಿಷಯದಲ್ಲಿ ಶ್ರುತಿಯುಕ್ತಿಗಳಿಂದ ಮನ ಒಪ್ಪುವಂತೆ ಸ್ವಲ್ಪದಲ್ಲಿ ಹೇಳಿದ್ದಾಗಿದೆ. ಈಗ ದಾನ ಮತ್ತು ತ್ಯಾಗದ ವಿಷಯವನ್ನು ಆಲೋಚಿಸೋಣ.

ಋಗ್ವೇದದ ೧೦-೧೧೭ರಲ್ಲಿ ಧನಾನ್ನದಾನ ಸೂಕ್ತವು ಬಂದಿರುವುದು :—

ನ ವಾ ಉ ದೇವಾಃ ಕ್ಷುಧಮಿದ್ವಧಂ
ದದುರುತಾಶಿತಮುಪ ಗಚ್ಛಂತಿ ಮೃತ್ಯವಃ ।
ಉತೋ ರಯಿಃ ಪೃಣತೋ ನೋಪ ದಸ್ಯ-
ತ್ಯುತಾಪೃಣನ್ ಮರ್ಡಿತಾರಂ ನ ವಿಂದತೇ ॥

ಯ ಆಧ್ರಾಯ ಚಕಮಾನಾಯ ಪಿತ್ವೋಽನ್ನ-
ವಾನ್ತ್ಸನ್ರಫಿತಾಯೋಪಜಗ್ಮುಷೇ ।
ಸ್ಥಿರಂ ಮನಃ ಕೃಣುತೇ ಸೇವತೇ ಪುರೋತೋ
ಚಿತ್ ಸಮರ್ಡಿತಾರಂ ನ ವಿಂದತೇ ॥

ಒಳ್ಳೆಯ ಹಸಿವಾಗಿರುವ ಸಮಯದಲ್ಲಿ ಪ್ರಾಣಾಂತಿಕ ವೇದನೆಯಂತೆ (ಹಸಿವನ್ನು) ತಾಳಲು ಅಶಕ್ಯವಾಗುವುದು. ಹಸಿವೆಯ ಸಮಯವೆಂದರೆ ಪ್ರಳಯ ಕಾಲವಿದ್ದಂತೆಯೇ ಸರಿ. ಹಸಿವೆಯನ್ನು ಕೊಟ್ಟು ಪರಮಾತ್ಮನು ಪ್ರಾಣಿಗಳಿಗೆ ಪ್ರಾಣಾಂತಿಕ ವೇದನೆಯ ಪರಿಚಯ ಮಾಡಿಕೊಟ್ಟಿರುವನು. ಸಮಯದಲ್ಲಿ ಅನ್ನವು ಸಿಕ್ಕದಿದ್ದರೆ ಪ್ರಾಣಿಗಳು ಸತ್ತು ಹೋಗುವುದೂ ಉಂಟು. ಮನೆಯ ಬಾಗಿಲಿಗೆ ಬಂದವನಿಗೆ ಅನ್ನವನ್ನಿಕ್ಕಿ ಈ ಕ್ಷುಧೆಯ ಜ್ವಾಲೆಯನ್ನು ಯಾವಾತನು ಶಾಂತ ಪಡಿಸುವನೋ ಆತನೇ ನಿಜವಾದ ದಾತನು. ಅಸಹಾಯ ದೀನಜನರ ಕ್ಷುದ್ವ್ಯಾಧೆಯ ಭಾವನೆಯನ್ನು ಮನಸ್ಸಿಗೆ ತಂದುಕೊಳ್ಳದೆ ದೀನನಾಗಿ ಅನ್ನದ ಯಾಚನೆಯನ್ನು ಮಾಡ ತಕ್ಕವನನ್ನು ಯಾವಾತನು ಬೇಕಾದ ಹಾಗೆ ಅನುಕೂಲವಿದ್ದರೂ ಸಹ, ಹಸಿದ ಹುಲಿಯಂತೆ ಯಾಚಕನ ಮೇಲೆ ಬೀಳುವನೋ, ಬೈದು ಬಿರುನುಡಿ ಗಳಿಂದ ವಿಮುಖವಾಗಿ ಹೊರ ಹಾಕುವನೋ, ಇಂತಹ ಯಾಚಕರ ಮತ್ತು ಬಡಬಗ್ಗರ ಕುರಿತು ಯಾವಾತನು ತನ್ನ ಹೃದಯವನ್ನು ಪಾಷಾಣದಂತೆ ಕಠೋರಮಾಡುವನೋ, ಮನೆಗೆ ಬಂದ ಹಸಿದಿರುವ ಅತಿಥಿಯನ್ನು ಊಟಕ್ಕೆ ಕರೆಯದೆ ತಾನು ಮಾತ್ರ ಚೆನ್ನಾಗಿ ಮಿಷ್ಟಾನ್ನವನ್ನು ಊಟ ಮಾಡುವನೋ, ಆತನಿಗೆ ಅಂತಕನು ಈ ಕ್ಷುಧ್ವ್ಯಥೆಯ ಪರಿಚಯವನ್ನು ಅಂತ್ಯಕಾಲಕ್ಕೆ ಪ್ರಾಣಾಂತವೇದನೆಯ ಮೂಲಕ ಮಾಡಿಕೊಟ್ಟು.

ಕ್ಷುತ್ಪೀಡಿತ ಅತಿಥಿಗೆ ಅನ್ನವನ್ನು ಕೊಡದಿದ್ದಕ್ಕೆ ಹೀಯಾಳಿಸುವನು. ಅನ್ನದಾತನ ಅನ್ನವಾಗಲೀ ಧನದಾತನ ಧನವಾಗಲೀ ದಾನಮಾಡುವುದ ರಿಂದ ಕಡಿಮೆಯಾಗದು. ಆತನಿಗೆ ಪರಮಾತ್ಮನು ಮತ್ತಷ್ಟು ಕೊಡುವನು. 'ಕೊಟ್ಟು ತೆಗೆದುಕೊಳ್ಳಬೇಕೆಂಬ' ನ್ಯಾಯಪ್ರಧಾನವಾದ ಈ ಜಗತ್ತಿನಲ್ಲಿ, ಕೃಪಣನಿಗೆ ಅವನ ಕಷ್ಟಕಾಲದಲ್ಲಿ ಸುಖದಾತನೇ ಸಿಗನು, ಎಂಬುದಾಗಿ ಈ ಎರಡು ಮಂತ್ರದ ಅಭಿಪ್ರಾಯವಿದೆ.

ಸ ಇದ್ ಭೋಜೋ ಯೋ ಗೃಹವೇ
ದದಾತ್ಯನ್ನಕಾಮಾಯ ಚರತೇ ಕೃಶಾಯ ।
ಅರಮಸ್ಮೈ ಭವತಿಯಾಮಹೂತಾ
ಉತಾಪರೀಷು ಕೃಣುತೇ ಸಖಾಯಮ್ ॥

(ಋ. ಧ. ಸೂ.)

ಯಾವಾತನು ಕ್ಷುಧೆಯಿಂದ ಬಳಲುತ್ತಿರುವ, ಕೃಶನಾದ ಮನೆಯ ಬಾಗಿಲಲ್ಲಿರುವ ಅತಿಥಿಯನ್ನು ಮೃದುಮಧುರ ನುಡಿಗಳಿಂದ ಗೌರವಿಸಿ ಅನ್ನದಿಂದ ತೃಪ್ತಿಪಡಿಸುವನೋ ಆತನೇ **ದಾತನು.** ಆತನಿಗೆ ಯಜ್ಞದ ಸಂಪೂರ್ಣ ಫಲವು ದೊರಕುವುದು. ಆತನು ತನ್ನ ಶತ್ರುಗಳನ್ನು ಸಹ ಮಿತ್ರರನ್ನಾಗಿ ಮಾಡಬಲ್ಲನು.

ಮೋಘಮನ್ನಂ ವಿಂದತೇ ಅಪ್ರಚೇತಾಃ
ಸತ್ಯಂ ಬ್ರವೀಮಿ ವಧ ಇತ್ ಸ ತಸ್ಯ ।
ನಾರ್ಯಮಣಂ ಪುಷ್ಯತಿ ನೋ ಸಖಾಯಮ್
ಕೇವಲಾಘೋ ಭವತಿ ಕೇವಲಾದೀ ॥

(ಋ. ಧ. ಸೂ.)

ಈ ವಿಧವಾಗಿ ಯಾವಾತನ ಮನಸ್ಸು ಉದಾರವಾಗಿರದೋ ಆತನು ವ್ಯರ್ಥವಾಗಿ ಧನ ಧಾನ್ಯವನ್ನು ಪಡೆಯುವನು. ಇಂಥವನು ಕೂಡಿ ಹಾಕಿದ ಧನಧಾನ್ಯಗಳು ವ್ಯರ್ಥವೇ ಸರಿ. ಆ ಧನಧಾನ್ಯದ ಸಂಗ್ರಹವು ನಿಜ ವಾಗಿಯೂ ಹೇಳಬೇಕಾದರೆ ಆತನಿಗೆ ಮೃತ್ಯು ರೂಪವಾಗುವುದು. ಯಾವಾತನು ತನ್ನ ಧನ ಧಾನ್ಯಗಳಿಂದ ದೇವ, ಪಿತೃ, ಇಷ್ಟ, ಮಿತ್ರ,

ಅತಿಥಿಗಳನ್ನು ತೃಪ್ತಿಪಡಿಸನೋ ತನ್ನ ಪುಟ್ಟಗೆ ಅನ್ನವನ್ನು ಬೇಯಿಸು ವನೋ ಆತನು ಕೇವಲ ಪಾಪವನ್ನೇ ಊಟಮಾಡುವನು.

ಪೃಣೀಯಾದಿನ್ನಾಧಮಾನಾಯ ತವ್ಯಾನ್
ದ್ರಾಘೀಯಾಂಸಮನು ಪಶ್ಯೇತ ಪಂಥಾಮ್ ॥
ಓ ಹಿ ವರ್ತಂತೇ ರಥ್ಯೇವ
ಚಕ್ರಾsನ್ಯಮನ್ಯಮುಪ ತಿಷ್ಠಂತ ರಾಯಃ ॥
(ಋ. ಧನಾನ್ನಸೂಕ್ತ)

ಧನಾಢ್ಯನು ಯಾಚಕರಿಗೆ ಧನದಾನವನ್ನು ಅವಶ್ಯವಾಗಿ ಮಾಡ ತಕ್ಕದ್ದು. ಧನಧಾನ್ಯ ದಾತನಿಗೆ ತಾನಾಗಿ ಮೋಕ್ಷದ ಶ್ರೇಷ್ಠ ಶುಭ ಮಾರ್ಗವು ಕಾಣಿಸಿಕೊಳ್ಳುವುದು. ಓಡುವ ರಥದ ತಿರುಗುವ ಚಕ್ರಗಳಂತೆ ಧನಧಾನ್ಯ ಸಂಪತ್ತಿಯು ಒಂದು ಕಾಲದಲ್ಲಿ ಒಂದೆಡೆ ಇದ್ದರೆ ಅದೇ ಇನ್ನೊಂದು ಕಾಲದಲ್ಲಿ ಮತ್ತೊಂದೆಡೆಗೆ ಹೋಗುವುದು. ಆದುದರಿಂದ "ಗಾಳಿ ಬಂದಾಗ ತೂರಿಕೊ" ಎಂಬ ಗಾದೆಯಂತೆ, ಅನುಕೂಲವಿರು ವಾಗ ದಾನಧರ್ಮಗಳನ್ನು ಮಾಡಿ ತನ್ನ ಜನ್ಮವನ್ನು ಸಾರ್ಥಕಪಡಿಸಿಕೊಳ್ಳ ಬೇಕು.

ತೈತ್ತಿರೀಯ ಭೃಗುವಲ್ಲಿಯಲ್ಲಿಯೂ ಅನ್ನ ಮತ್ತು ಅನ್ನದಾನದ ಮಹತ್ವವು ತೋರಿಬರುವುದು. "ಅನ್ನಂ ನ ನಿಂದ್ಯಾತ್" ಅನ್ನವನ್ನು ನಿಂದಿಸಬಾರದು. "ಅನ್ನಂ ನ ಪರಿಚಕ್ಷೀತ" ಅನ್ನವನ್ನು ತಿರಸ್ಕರಿಸ ಬಾರದು. "ಅನ್ನಂ ಬಹು ಕುರ್ವೀತ" ಬಹಳವಾಗಿ ಅನ್ನದ ಸಂಗ್ರಹ ಮಾಡಬೇಕು. ಅನ್ನ ಎಂದರೆ ಧಾನ್ಯ. "ನ ಕಂಚನ ವಸತೌ ಪ್ರತ್ಯಾ ಚಕ್ಷೀತ । ತದ್ವ್ರತಮ್ । ತಸ್ಮಾದ್ಯಯಾ ಕಯಾ ಚ ವಿಧಯಾ ಬಹ್ವನ್ನಂ ಪ್ರಾಪ್ನುಯಾತ್ । ಅರಾಧ್ಯಸ್ಮಾ ಅನ್ನಮಿತ್ಯಾಚಕ್ಷತೇ ॥" (ತೈ. ಉ. ೧೦).

ಪರಸ್ಥಳದವರು ವಸತಿಮಾಡಲು ಮನೆಗೆ ಬಂದರೆ ಅವರ ಕುಲ ಶೀಲಗಳನ್ನು ಪರೀಕ್ಷಿಸಿ ಸ್ಥಳವನ್ನು ಕೊಡಬೇಕು. ಒಮ್ಮೆಲೆ ಇಲ್ಲವೆಂದು ಹೇಳಬಾರದು. ಇದೊಂದು ಗೃಹಸ್ಥರಿಗೆ ವ್ರತವೇ ಸರಿ. ಉಳಿದು ಕೊಳ್ಳಲು ಸ್ಥಳವನ್ನು ಕೊಟ್ಟಮೇಲೆ ಅವರ ಭೋಜನದ ವ್ಯವಸ್ಥೆಯನ್ನೂ

ಮನೆಯಲ್ಲಿಯೇ ಮಾಡಬೇಕು. ಹೀಗೆ ಬಂದ ಅತಿಥಿಗಳಿಗೆ ಮತ್ತು ಬಡ ಬಗ್ಗರಿಗೆ ಅನ್ನವನ್ನು ಇಡಬೇಕಾಗುವುದೆಂದು ಗೃಹಸ್ಥನಾದವನು ಹಲವು ಬಗೆಯಿಂದ ಅನ್ನದ ಸಂಗ್ರಹವನ್ನು ಮಾಡಬೇಕು. ಬಂದವರನ್ನು ಸತ್ಕರಿಸಿ ಸವಿನುಡಿಗಳಿಂದ 'ಎಲ್ಲವೂ ಸಿದ್ಧವಿದೆ. ಭೋಜನ ಮಾಡಿ ಹೋಗಬೇಕು' ಎಂದು ಪ್ರಾರ್ಥಿಸಬೇಕು.

ಏತದ್ವೈ ಮುಖತೋಽನ್ನಂ ರಾದ್ಧಮ್ । ಮುಖತೋಽಸ್ಮಾ ಅನ್ನಂ ರಾಧ್ಯತೇ । ಏತದ್ವೈ ಮಧ್ಯತೋಽನ್ನಂ ರಾದ್ಧಮ್ । ಮಧ್ಯತೋಽಸ್ಮಾ ಅನ್ನಂ ರಾಧ್ಯತೇ । ಏತದ್ವಾ ಅಂತತೋಽನ್ನಂ ರಾದ್ಧಮ್ । ಅಂತತೋಽಸ್ಮಾ ಅನ್ನಂ ರಾಧ್ಯತೇ ॥ (ತೈ. ಭೃ. ೧೦). ಸಿದ್ಧಪಡಿಸಿದ ಅನ್ನವನ್ನು ಯೋಗ್ಯ ಸತ್ಕಾರದಿಂದ ನೀಡಬೇಕು. ತನ್ನ ಮನೆಗೆ ಬಂದಾಗ ಯಾವಾತನು ಯೋಗ್ಯ ಸತ್ಕಾರದಿಂದ ಅನ್ನವನ್ನು ನೀಡುವನೋ, ಆತನಿಗೆ ಹೋದಲ್ಲಿ ಬೇರೆಯವರೂ ಅಷ್ಟೇ ಸತ್ಕಾರ ಪುರಸ್ಸರವಾಗಿ ಅನ್ನವನ್ನು ನೀಡುವರು. ಅಂತೆಯೇ ಮಧ್ಯಮ ಸತ್ಕಾರದಿಂದ ನೀಡಿರುವ ಪಕ್ಷದಲ್ಲಿ ಆತನಿಗೂ ಸಹ ಮಧ್ಯಮ ಸತ್ಕಾರವಾಗಿಯೇ ಅನ್ನವು ನೀಡಲ್ಪಡುವುದು. ಅತಿ ನಿಕೃಷ್ಟವಾಗಿ ಅನ್ನವನ್ನು ನೀಡಿದರೆ ಪರರೂ ಸಹ ಆತನು ಹೋದಲ್ಲಿ ಅಷ್ಟೇ ನಿಕೃಷ್ಟತೆಯಿಂದ ಆತನಿಗೆ ಅನ್ನವನ್ನು ನೀಡುವರು.

'ಪರರಿಗೆ ಮಾಡಿದಂತೆ ತನಗಾಗುವುದು' ಎಂಬುದನ್ನು ಯಾರೂ ಮರೆಯಕೂಡದು. ಎಲ್ಲಾ ದಾನಗಳಲ್ಲಿ ಅನ್ನದಾನದ ಮಹತ್ವವು ಅತಿ ಹೆಚ್ಚಿನದಾಗಿರುವುದು. ಸಮಯದಲ್ಲಿ ಅನ್ನವನ್ನು ನೀಡುವುದೆಂದರೆ ಒಬ್ಬನ ಪ್ರಾಣ ಉಳಿಸುವುದೇ ಸರಿ. ಅನ್ನಮಯ ಪ್ರಾಣವಾಗುವುದರಿಂದ ಇದಕ್ಕಿಂತಲೂ ಹೆಚ್ಚಿನ ದಾನ ಇಲ್ಲವೆಂಬುದು ದಿಟವೇ ಸರಿ.

"ಸ್ವರ್ಣಕಂ ಪ್ರಾಣರೂಪಕಂ" ಅನ್ನಕ್ಕೆ ಎರಡನೆಯದು ದ್ರವ್ಯದಾನವು. ಇದೂ ಕೂಡ ಪ್ರಾಣರೂಪವೆಂತಲೇ ಹೇಳಲ್ಪಟ್ಟಿದೆ. "ದಕ್ಷಿಣಾವಂತೋಽಮೃತತ್ವಂ ಭಜಂತೇ" (ಋ. ೧-೧೨೫-೬) ಋಗ್ವೇದದಲ್ಲಿ ಬ್ರಾಹ್ಮಣನನ್ನು ದಾನದಕ್ಷಿಣೆ ಕೊಟ್ಟು ಸತ್ಕರಿಸುವವರು ಅಮೃತತ್ವವನ್ನು ಪ್ರಾಪ್ತಮಾಡಿಕೊಳ್ಳುತ್ತಾರೆ ಎಂದು ಹೇಳಿದೆ. ಗೃಹಸ್ಥನಿಗಂತೂ ದಾನವೇ ಒಂದು ಮುಖ್ಯ ತಪಸ್ಸು. ಏತತ್ ಖಲುವಾವ ತಪ

ಇಕ್ಷ್ವಾಹುರ್ಯಃ ಸ್ವಂ ದದಾತೀತಿ (ತೈ. ಸಂ. ಕಾಂ. ೫) ತನ್ನದಾಗಿರುವ ವಸ್ತುಗಳನ್ನು ದೇಶ, ಕಾಲ ಮತ್ತು ಪಾತ್ರವನ್ನು ನೋಡಿ ಪರರಿಗೆ ಸತ್ಕಾರ ಮತ್ತು ಶ್ರದ್ಧಾ ಭಕ್ತಿ ಪುರಸ್ಸರವಾಗಿ ಧರ್ಮ ಬುದ್ಧಿಯಿಂದ ಸಮರ್ಪಿಸು ವುದೇ ದಾನವೆಂದೆನಿಸಿಕೊಳ್ಳುವುದು—ಇದೇ ಗೃಹಸ್ಥರಿಗೆ ದೊಡ್ಡ ತಪಸ್ಸೆಂದು ಈ ಮಂತ್ರದ ಅರ್ಥ. **ಸತ್ಯಂ ಬೃಹದೃತ ಮುಗ್ರಂ ದೀಕ್ಷಾ ತಪೋ ಬ್ರಹ್ಮ ಯಜ್ಞಃ ಪೃಥಿವೀಂ ಧಾರಯಂತಿ ।** (ಅಥ.) ಹೆಚ್ಚಿನದಾದ ಪಾರ ಮಾರ್ಥಿಕ ಸತ್ಯ, ವ್ಯಾವಹಾರಿಕ ಸತ್ಯ, ಉಗ್ರತಪಸ್ಸು, ಸದ್ವ್ರತಗಳ ದೀಕ್ಷೆ, ಬ್ರಹ್ಮ ಮತ್ತು ಯಜ್ಞ ಧರಿತ್ರಿಯನ್ನು ಧರಿಸುವುವು ಎಂದು ಅಥರ್ವವೇದದ ೧೨ನೆಯ ಕಾಂಡದಲ್ಲಿರುವ ಪೃಥಿವೀಸೂಕ್ತದಲ್ಲಿ ಹೇಳಿರು ವುದು. ಜಗತ್ತಿನ ಸ್ಥಿತಿಗೆ ಸತ್ಯಾದಿ ಈ ಸಾಧನೆಗಳು ಎಷ್ಟು ಅವಶ್ಯಕ ವಾದುವುಗಳೆಂದು ಈ ಮಂತ್ರದ ಮೂಲಕ ತಿಳಿದು ಬರುವಂತಿದೆ. ಜಾಬಾಲಿಗಳೇ! ಬ್ರಾಹ್ಮಣರೇ ತಮ್ಮ ಚರಿತಾರ್ಥಕ್ಕಾಗಿ ಮಾಡಿಟ್ಟ ಅಥವಾ ರಚಿಸಿದ ವಾಕ್ಯಗಳಿವಲ್ಲ ಎಂದು ಶ್ರುತಿ ಆಧಾರಗಳಿಂದ ಸಿದ್ಧವಾಗಿದೆ.

ಜಾಬಾಲಿಗಳೇ! ನಿಮ್ಮೆಲ್ಲಾ ಪ್ರಶ್ನೆಗಳಿಗೆ ಉತ್ತರ ಕೊಡಲು ಪ್ರಾರಂಭಿ ಸಿರುವ ಈ ಪ್ರಯತ್ನವೆಂದರೆ ಎಲ್ಲವನ್ನೂ ತಿಳಿದ ನಿಮಗಾಗಿ ಅಲ್ಲ. ಹೇಗಾ ದರೂ ಮಾಡಿ ನನ್ನನ್ನು ಅಯೋಧ್ಯೆಯ ಸಿಂಹಾಸನದ ಮೇಲೆ ಕುಳ್ಳಿರಿಸಿ ಆನಂದದಿಂದ ನಾನು ಧರ್ಮಾನ್ವಿತ ನಡೆಯಿಸುವ ರಾಜ್ಯಭಾರವನ್ನು ಕಣ್ಣಾರೆ ಕಂಡು ಸುಖಿಸಬೇಕೆಂಬ ನಿಮ್ಮ ಸದುದ್ದೇಶವಿದ್ದರೂ ಈ ನೀವು ಹೂಡಿದ ನಾಸ್ತಿಕವಾದವು ಮುಂದಿನ ಜನರಿಗೆ ಯಾವ ವಿಧದಿಂದಲೂ ಅನುಕರ ಣೀಯವಾಗಬಾರದೆಂಬ ಉದ್ದೇಶದಿಂದಲೇ ಇದನ್ನು ಖಂಡಿಸುವ ಈ ಉಪ ಕ್ರಮವನ್ನು ಮಾಡಿರುವೆನು. ತ್ಯಾಗದ ಅನಾವಶ್ಯಕತೆಯ ಬಗ್ಗೆ ನೀವು ಮಾಡಿದ ವಿಧಾನದ ವಿಚಾರ ಮಾಡೋಣ! ಆದ ಕಾರ್ಯಕ್ಕೆಲ್ಲಾ ಕಾರಣ ವಾಗಿರುವ ಆನಂದಘನ ಪರಮಾತ್ಮ ಸ್ವರೂಪವು ಸ್ವತಃ ಪೂರ್ಣವಾಗಿರು ವುದು. ಆ ಸ್ವತಃ ಪೂರ್ಣವಾಗಿರುವಂತಹ ಕಾರಣಕ್ಕೆ ಕಾರ್ಯದಿಂದ ಯಾವ ಪ್ರಯೋಜನವೂ ತೋರದು. ಕಾರ್ಯವು ಕಾರಣ ದೃಷ್ಟಿಯಿಂದ ನಿಷ್ಪ್ರಯೋಜಕವಾಗುವುದು. ಇಂತಹ ನಿಷ್ಪ್ರಯೋಜಕವಾದ ಕಾರ್ಯದ ಊರ್ವದಲ್ಲಿರುವ ಕಾರ್ಯಶೂನ್ಯವಾದ ಕಾರಣದಲ್ಲಿ ಕಾರ್ಯದ ಅಸ್ತಿತ್ವವು

ತೋರಿಬರದೆಂದಾಗುವಲ್ಲಿ ಆ ಕಾರಣರೂಪವಾದ ಆನಂದದ ಪ್ರಾಪ್ತಿಗಾಗಿ ನಿಷ್ಪ್ರಯೋಜಕ ಆನಂದಸಾಧಕವಾದ ಕಾರ್ಯದ ತ್ಯಾಗವೇ ನಿಜವಾದ ಆನಂದದ ಪ್ರಾಪ್ತಿಯ ಮುಖ್ಯ ಸಾಧನವಾಗುವುದು. "ಪ್ರಪಂಚಾ ಪ್ರವರ್ತಕಂ ಲಯೋನ್ಮುಖೀಕರಣಂ ಸಾಧನಮ್" ಭ್ರಾಮಕ ಪ್ರಪಂಚದ ಕಡೆಗೆ ಮನಸ್ಸು ಪ್ರವೃತ್ತವಾಗಗೊಡದೆ ಅದನ್ನು ಕಾರಣದ ಸತತ ವಿಚಾರದಿಂದ ನಿಷ್ಪ್ರಪಂಚ ಬ್ರಹ್ಮಸ್ವರೂಪದಲ್ಲಿ, ಆ ನಿರತಿಶಯಾನಂದ ದಲ್ಲಿ ಲಯಿಸುತ್ತಾ ಇರುವುದೇ ಮೋಕ್ಷದ ಒಂದು ಸಾಧನೆ.

"ತಾನಿವಾ ಏತಾನ್ಯವರಾಣಿ ಪರಾಂಸಿ ನ್ಯಾಸ ಏವಾತ್ಯ ರೇಚಯತ್। ತಸ್ಮಾನ್ನ್ಯಾಸಮೇಷಾಂ ತಪಸಾಂ ಅತಿರಿಕ್ತಮಾಹುಃ॥" (ಮ. ನಾ. ಉ.) ಎಲ್ಲಾ ಸಾಧನೆಗಳನ್ನೂ ಹೇಳಿ, ಎಲ್ಲಾ ತಪಸ್ಸುಗಳನ್ನೂ ಹೇಳಿ ಕಟ್ಟಕಡೆಯಲ್ಲಿ ತ್ಯಾಗವೇ—ನ್ಯಾಸವೇ ಎಲ್ಲದರಲ್ಲಿಯೂ ಶ್ರೇಷ್ಠವಾದು ದೆಂದು ಯಜುರ್ವೇದದ ಆರಣ್ಯಕದಲ್ಲಿ ನಿರ್ಧರಿಸಿ ಹೇಳಿರುವುದು.

"ನ ಕರ್ಮಣಾ ನ ಪ್ರಜಯಾ......ವಿಶಂತಿ।" ಕರ್ಮ ದಿಂದಲೂ, ಪ್ರಜೆಯಿಂದಲೂ, ಸಂಪತ್ತಿನಿಂದಲೂ ಮೋಕ್ಷವನ್ನು ಪಡೆಯದೇ ತ್ಯಾಗವೊಂದರಿಂದಲೇ ಮೋಕ್ಷವನ್ನು ಪಡೆದರು.

"ತಮಾತ್ಮಾನಂ ವಿದಿತ್ವಾ ಬ್ರಾಹ್ಮಣಾಃ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ ಲೋಕೈಷಣಾಯಾಶ್ಚ ವ್ಯುತ್ಥಾಯಾಥ ಭಿಕ್ಷಾ ಚರ್ಯಂ ಚರಂತಿ" (ಬೃ. ಉ. ಅ. ೩, ಬ್ರಾ. ೫) ಈ ಆತ್ಮಸ್ವರೂಪವನ್ನು ತಿಳಿದು ಬ್ರಾಹ್ಮಣರು ಸಂತತಿಯ ಇಚ್ಛೆ, ಸಂಪತ್ತಿಯ ಇಚ್ಛೆ, ಎಲ್ಲಾ ಲೋಕದ ಸುಖದ ಇಚ್ಛೆಗಳಿಂದ ಅಂದರೆ ಹೆಣ್ಣು, ಹೊನ್ನು, ಮಣ್ಣು ಮತ್ತು ಮಕ್ಕಳುಗಳ ಆಸೆಯಿಂದ ಮುಕ್ತರಾಗಿ ತ್ಯಾಗದಿಂದ ಭಿಕ್ಷಾಟನೆಯನ್ನು ಮಾಡಿ ಜೀವಿಸುವರು ಮತ್ತು ಒಂದು ಕಡೆ ನಿಲ್ಲದೆ ಅಸಂಗವಾಗಿ ಎಲ್ಲಾ ಕಡೆಗೆ ಚರಿಸುವರು ಎಂಬುದಾಗಿ ಆತ್ಮಸ್ವರೂಪ ಪರಿಜ್ಞಾನದಿಂದ ಅನಾಯಾಸವಾಗಿ ವಿರಕ್ತಿಯುಂಟಾಗುವುದು. ವಿರಕ್ತಿಯೇ ಆತ್ಮಜ್ಞಾನದ ಒಂದು ಗುರುತೆಂದು ಈ ಮಂತ್ರದ ಅರ್ಥವು. ಬೃಹದಾರಣ್ಯಕದ ೪ನೆಯ ಅಧ್ಯಾಯದ ೪ನೆಯ ಬ್ರಾಹ್ಮಣದಲ್ಲಿಯೂ ಇದೇ ವಿಷಯವು ಬಂದಿರುವುದು.

"ಅಯಂ ಲೋಕಃ ಪುತ್ರೇಣೈವ ಜೇಯಃ ನಾऽನ್ಯೇನ ಆತ್ಮಾವೈ ಪುತ್ರನಾಮಾಸಿ" 'ಪುತ್ರೋತ್ಸವದ ಸುಖದಿಂದ ಈ ಎಲ್ಲಾ ಸುಖವೂ ಜಯಿಸಲ್ಪಡುವುದು ಎಂದರೆ ಲೋಕದಲ್ಲಿರುವ ಎಲ್ಲಾ ಸುಖಗಳಿಗಿಂತಲೂ ಪುತ್ರಪ್ರಾಪ್ತಿಯಿಂದಾಗುವ ಸುಖ ಮತ್ತು ಅದರಿಂದ ಲಕ್ಷಿತವಾದ ಸಂಭೋಗದ ಸುಖವು ಹೆಚ್ಚಿನದು; ಪುತ್ರನೇ ಆತ್ಮನು' ಎಂಬ ಆಯಾ ಅಧಿಕಾರಿಗಳನ್ನು ಕುರಿತು ಹೇಳಿದ ಗೌಣ ಶ್ರುತಿವಾಕ್ಯಗಳಲ್ಲಿ ವಿವೇಕಸಂಪನ್ನರಾದ ಸನ್ಯಾಸಿಗಳಿಗೆ ಯಾವ ಸಾರಾಂಶವೂ ಕಾಣುವುದಿಲ್ಲ.

"ಏತಮೇವ ಪ್ರವ್ರಾಜಿನೋ ಲೋಕಮಿಚ್ಛಂತಃ ಪ್ರವ್ರಜಂತಿ ಏತದ್ಧಸ್ಮ ವೈ ತತ್ಪೂರ್ವೇ ವಿದ್ವಾಂಸಃ ಪ್ರಜಾಂ ನ ಕಾಮಯಂತೇ ಕಿಂ ಪ್ರಜಯಾ ಕರಿಷ್ಯಾಮೋ ಯೇಷಾಂ ನೋऽಯಮಾತ್ಮಾऽಯಂ ಲೋಕ ಇತಿ । ತೇ ಹ ಸ್ಮ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ ಲೋಕೈಷಣಾಯಾಶ್ಚ ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರಂತಿ ಯಾ ಹ್ಯೇವ ಪುತ್ರೈಷಣಾ ಸಾ ವಿತ್ತೈಷಣಾ ಯಾ ವಿತ್ತೈಷಣಾ ಸಾ ಲೋಕೈಷಣೋಭೇ ಹ್ಯೇ ತೇ ಏಷಣೇ ಏವ ಭವತಃ ॥" (ಬೃ. ಅ. ೪, ಬ್ರಾ. ೪, ೨೨-೨೩).

ಇನ್ನೊಂದಿರದಿದ್ದ ಕೇವಲ ಆನಂದ ಘನವಾದ ಆತ್ಮಪ್ರಾಪ್ತಿಯನ್ನು ಕೋರಿ, ಆ ಕೇವಲ ಆನಂದದಲ್ಲಿಯೇ ಮೈಮರೆತು ಇರುವುದಕ್ಕಾಗಿ, ಭ್ರಾಂತಿ ಸುಖದ ಸಾಧನವಾಗಿ ಕೊನೆಯಲ್ಲಿ ದುಃಖವಾಗಿ ಪರಿಣಮಿಸುವ ಹೆಣ್ಣು, ಹೊನ್ನು, ಮಣ್ಣು, ಮಕ್ಕಳಿಂದ ಒಡಗೂಡಿ ಭಿನ್ನಪದಾರ್ಥಗಳ ಸುಖದ ದೃಷ್ಟಿಯನ್ನುಂಟುಮಾಡುವ ಅಂತ್ಯದಲ್ಲಿ ನಿಷ್ಪ್ರಯೋಜಕವಾಗಿಯೂ ನಿಸ್ಸಾರವಾಗಿಯೂ ಕಂಡು ಬರುವ ಈ ಲೋಕದ ಸುಖವನ್ನು ನೀಗಿ ವಿವೇಕ-ವಿರಕ್ತಿಯಿಂದ ಸನ್ಯಾಸವನ್ನು ಕೈಕೊಳ್ಳುವರು.

ನಿರುಪದ್ರವಿ ಮತ್ತು ನಿರ್ದೋಷಿಯಾದ ಜನಹಿತದ ಜೀವನವನ್ನು ಸಾಧಿಸುತ್ತಾ ನಿಸ್ವಾರ್ಥತೆಯಿಂದ ಕಾಯಕ್ಲೇಶವನ್ನು ಸಹನ ಮಾಡಿ ಅವ್ಯಾಹತವಾಗಿ ಸ್ವಪರ ಪರಮಾತ್ಮ ಪ್ರಾಪ್ತಿಗಾಗಿ ಜೀವಿಸುತ್ತಿರುವ ಬಡ ಬ್ರಾಹ್ಮಣರ ಮೇಳೆ ಸುಮ್ಮನೆ ಎಲ್ಲರೂ ಮುರಿದು ಬೀಳುವುದೇಕೆ?

ದಾನಸಂವನನಾ ಹ್ಯೇತೇ ಗ್ರಂಥಾ ಮೇಧಾವಿಭಿಃ ಕೃತಾಃ ।
ಯಜಸ್ವ ದೇಹಿ ದೀಕ್ಷಸ್ವ ತಪಸ್ತಪ್ಯಸ್ವ ಸಂತ್ಯಜ ॥ ೧೬ ॥
(ವಾ. ರಾ. ಅ. ಸರ್ಗ ೧೦೯)

ಈ ನಿಮ್ಮ ವಾಕ್ಯವು ಎಷ್ಟು ಸಾಧಾರವಾಗಿದೆಯೆಂದು ನೀವೇ ನೋಡಿ.

**ತಸ್ಯೈ ತಪೋದಮಃ ಕರ್ಮೇತಿ ಪ್ರತಿಷ್ಠಾ ವೇದಾಃ ಸರ್ವಾಂಗಾನಿ ಸತ್ಯಮಾಯತನಂ ॥** (ಕೇನೋಪನಿಷತ್ತು ಖಂ. ೪, ೮ ನೇ ಮಂತ್ರ). ತಪಸ್ಸು, ಇಂದ್ರಿಯ ಜಯ, ಅಗ್ನಿಹೋತ್ರಾದಿ ಕರ್ಮಗಳು, ಚಿತ್ತಶುದ್ಧಿ ದ್ವಾರಾ ಉಪನಿಷತ್ತಿನಲ್ಲಿ ಹೇಳಿರುವ ಆತ್ಮಸಾಕ್ಷಾತ್ಕಾರಕ್ಕಾಗಿ ಕಾರಣ ವಾಗುವುವು. ಇದಕ್ಕೆ ವೇದ ವೇದಾಂಗಗಳ ಅವಶ್ಯಕತೆಯೂ ಇದೆ. ಸತ್ಯ ಧರ್ಮಾದಿಗಳ ಆಚರಣೆಗಳೂ ಬೇಕು.

**ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಶಂತಿ ಯಜ್ಞೇನ ದಾನೇನ ತಪಸಾ ಅನಾಶಕೇನ ॥** ಈ ಉಪನಿಷತ್ತಿನ ಪ್ರತಿಪಾದ್ಯವಾದ ಪುರುಷನನ್ನು ಬ್ರಾಹ್ಮಣರು ವೇದ ಪ್ರಮಾಣದಿಂದಲೂ, ವೈದಿಕ ಯಜ್ಞ, ದಾನ, ತಪಸ್ಸು ಮತ್ತು ರಾಗದ್ವೇಷರಹಿತವಾದ ನಿಷ್ಕಾಮ ಕರ್ಮದಿಂದಲೂ ತಿಳಿಯಲು ಅಪೇಕ್ಷಿಸುವರು. ಈ ಮಂತ್ರಗಳಿಂದ ಬ್ರಾಹ್ಮಣರ ಆಚಾರ-ವಿಚಾರ-ಉಚ್ಚಾರಗಳಿಗೆಲ್ಲಾ ವೇದ ಪ್ರಮಾಣವೇ ಒಂದು ಆಧಾರವೆಂದು ಸ್ಪಷ್ಟವಾಗುವುದು. ಬ್ರಾಹ್ಮಣರ ಉತ್ಪತ್ತಿಯು ಪರಮಾತ್ಮನ ಮುಖದಿಂದ ಆದುದರಿಂದ ಸ್ವಭಾವತಃ ಧರ್ಮ ಕರ್ಮ ರೂಪವಾಗಿ ಒದಗುವ ಉಪದೇಶದ, ಅಧ್ಯಾಪಕತ್ವದ, ಗುರುತ್ವದ ಅಧಿಕಾರವು ನಡೆಯಬೇಕಾದರೆ ಅವರು ಮಾಡಿರುವ ವಿಧಾನಗಳಿಗೆಲ್ಲಾ ವೇದವೇ ಆಧಾರವಿರುವುದಲ್ಲದೇ, ಅದು ಬ್ರಾಹ್ಮಣರ ಸ್ವಕಪೋಲ ಕಲ್ಪಿತ ವಾಗಿರದು.

ಸತ್ಯಂ ಚ ಧರ್ಮಂ ಚ ಪರಾಕ್ರಮಂ ಚ
ಭೂತಾನುಕಂಪಾಂ ಪ್ರಿಯವಾದಿತಾಂ ಚ
ದ್ವಿಜಾತಿದೇವಾತಿಥಿ ಪೂಜನಂ ಚ ।
ಪಂಥಾನಮಾಹುಸ್ತ್ರಿದಿವಸ್ಯ ಸಂತಃ ॥ ೩೦ ॥
(ವಾ. ರಾ. ಅ. ಸರ್ಗ ೧೦೯)

ಸತ್ಯ, ಧರ್ಮ, ದುಷ್ಟದಂಡನೆ, ಭೂತದಯೆ, ಸವಿನುಡಿ, ದೇವ, ಬ್ರಾಹ್ಮಣ, ಅತಿಥಿಗಳ ಪೂಜೆ ಇವುಗಳನ್ನು ಸ್ವರ್ಗದ ಹೆದ್ದಾರಿಯೆಂದು ಸಾಧುಸಂತರು ಕೊಂಡಾಡುವರು. ಈ ಶ್ರೀರಾಮನ ವಾಕ್ಯವು ನಾಸ್ತಿಕ ವಾದವನ್ನು ಹೂಡಿದ ಜಾಬಾಲಿಗಳ ಸಂಗಡ ಮಾಡಿರುವ ಬುದ್ಧಿವಾದದ ಕೊನೆಯ ನಿರ್ಣಯರೂಪವಾಗಿರುವುದು.

ನ ನಾಸ್ತಿಕಾನಾಂ ವಚನಂ ಬ್ರವೀಮ್ಯಹಂ
ನ ನಾಸ್ತಿಕೋಽಹಂ ನ ಚ ನಾಸ್ತಿ ಕಿಂಚನ ॥ ೩೮ ॥
ನಿವರ್ತನಾರ್ಥಂ ತವ ರಾಮ ಕಾರಣಾತ್
ಪ್ರಸಾದನಾರ್ಥಂ ಚ ಮಯೈತದೀರಿತಮ್ ॥ ೩೯ ॥

(ವಾ. ರಾ. ಅ. ಸರ್ಗ ೧೦೯)

'ರಾಮಾ! ನಾಸ್ತಿಕರ ಪಕ್ಷವನ್ನು ನಾನು ಮಂಡಿಸುವವನಲ್ಲ, ನಾಸ್ತಿಕನೂ ನಾನಲ್ಲ. ನಿನ್ನನ್ನು ಅಯೋಧ್ಯೆಗೆ ಹಿಂದಿರುಗಿಸುವುದಕ್ಕಾಗಿ ಹೇಳಿದ ಈ ಮಾತು ನಿನ್ನ ಸುಖಕ್ಕಾಗಿಯೇ ಅಲ್ಲದೆ ಮತ್ತಾವ ಕಾರಣ ದಿಂದಲೂ ಹೇಳಿದ್ದಲ್ಲ.' ಈ ಜಾಬಾಲಿಗಳ ವಚನದಿಂದ ಅವರ ಹೃದಯವು ಬಿಚ್ಚಿ ತೋರಿಸಲ್ಪಟ್ಟಿರುವುದು. ಈ ಸಂವಾದದಿಂದ ಶ್ರೀರಾಮನ ಹೃದಯದ ಸಾಕ್ಷಾತ್ಕಾರವೂ ಆಗುವುದು. ಧರ್ಮಪರನಾಗಿರುವ ಮನುಷ್ಯನನ್ನು ಆದರಿಂದ ಪೊರಮೊಡಿಸಲು ಪ್ರಯತ್ನಿಸುವ ಕಷ್ಟಕರವಾದ ಜೀವನದೊಡನೆ ಒದಗುವ ಅನೇಕ ವಿಘ್ನಗಳಲ್ಲಿ ಇಷ್ಟಬಂಧುಗಳ ಒತ್ತಾಯವೊಂದು ಮತ್ತು ಮಾನ್ಯ ಜನರ ನಾಸ್ತಿಕ ಯುಕ್ತಿವಾದವು ಕೂಡಾ ಪ್ರಮುಖವಾಗಿ ಭಾಗ ವಹಿಸುವುದೆಂಬುದು ಇಲ್ಲಿ ನಾವು ತಿಳಿಯತಕ್ಕ ವಿಷಯವಾಗಿದೆ. ಈ ವಿಷಯದಲ್ಲಿ ಶ್ರೀರಾಮನ ಅಕುಂಠಿತವಾದ ಧರ್ಮಪರತೆಯೇ ಅಖಿಲ ಮಾನವರಿಗೆ ಸಾಧನಪಥದಲ್ಲಿ ಮೇಲ್ಪಂಕ್ತಿಯಾಗಿ ಜೀವನರೂಪವಾಗು ವುದು. ರಾಮರಾಜ್ಯವನ್ನು ಏರ್ಪಡಿಸಲಿಚ್ಛಿಸುವ ನಮ್ಮಗಳಿಗೆ ಶ್ರೀರಾಮನ ಸಚ್ಚರಿತದ ಅನುಕರಣವೊಂದೇ ನಮ್ಮ ಧ್ಯೇಯಪೂರ್ತಿಯ ಸಾಧನವೆಂದು ಯಾರು ತಾನೆ ನಂಬಲಿಕ್ಕಿಲ್ಲ? ನಮ್ಮಲ್ಲಿ ಈ ವಿಧವಾದ ಧರ್ಮವಿಶ್ವಾಸ ಮತ್ತು ನಿಶ್ಚಲವಾದ ಧರ್ಮಾಚರಣೆಯಿದ್ದರೆ ಈಗಿರುವ ಸ್ವರಾಜ್ಯವು ರಾಮ ರಾಜ್ಯವಾಗುವುದು.

"ಲೋಕೇ ನ ಹಿ ಸ ವಿದ್ಯೇತ ಯೋ ನ ರಾಮ ಮನು ವ್ರತಃ ॥" (ವಾ. ರಾ. ಅ. ಕಾಂ.) 'ರಾಮನನ್ನು ಅನುಕರಿಸಿ ಅನುಗಾಮಿ ಯಾಗಿ ಹೋಗದಿದ್ದವನು ಲೋಕದಲ್ಲೇ ಹುಟ್ಟಲಿಲ್ಲ' ಎಂಬ ಈ ಮಾತು ರಾಮನ ಲೋಕಮಾನ್ಯತೆ ಮತ್ತು ವಿಶ್ವಾಸಾನುಕರಣೀಯ ಆಚರಣೆ ವನ್ನು ಬೋಧಿಸುವುದು. ವಿಶ್ವಾನುಕರಣೀಯವಾದ ಆದರ್ಶ ಜೀವನದ ಮುಖಮುದ್ರೆಯಿಂದ ಸುಶೋಭಿತವಾದ ರಾಮಚರಿತ್ರಾನುಗಾಮಿಗಳು ರಾಮರಾಜ್ಯದಲ್ಲಿರತಕ್ಕದ್ದು. ರಾಮರಾಜ್ಯದಲ್ಲಿ ಯಾರಿಗೂ ದೈಹಿಕ, ದೈವಿಕ ಮತ್ತು ಭೌತಿಕ ಪಾಪ-ತಾಪಗಳ ಸೋಕು ಸಹಾ ಇರಕೂಡದು. ಬ್ರಹ್ಮಚರ್ಯ, ನೀತಿ-ನ್ಯಾಯ, ದಾನ-ಧರ್ಮ, ದಯೆ, ಸತ್ಯ, ಸದಾಚಾರ, ಸರಳತೆ, ವಿಶ್ವಕೌಟುಂಬಿಕತೆ, ಔದಾರ್ಯ, ಪರೋಪಕಾರ, ಪಾತಿವ್ರತ್ಯ, ಏಕಪತ್ನೀವ್ರತ, ತಪಸ್ಸು, ಅಧ್ಯಾತ್ಮಪರತೆ, ಬ್ರಹ್ಮಾತ್ಮೈಕ್ಯತೆ, ಮುಂತಾದ ಎಲ್ಲಾ ಶುಭಗುಣಗಳಿಂದ ರಾಮರಾಜ್ಯದ ಜನರು ವಿಶ್ವದ ಮೇಲೆಲ್ಲಾ ಪೌರ್ಣಮಿಯ ನಿಷ್ಕಳಂಕ ಚಂದ್ರನಂತೆ ತಮ್ಮ ದೈವೀ ಗುಣಾದರ್ಶದ ಶಾಂತ ಪ್ರಭೆಯನ್ನು ಬೀರುತ್ತಾ ವಿಶ್ವಶಾಂತಿಗೆ ಕಾರಣರಾಗಿ ಎಲ್ಲಾ ದೈವೀ ಸಂಪತ್ತಿನಿಂದ ರಾರಾಜಿಸುತ್ತಿರಬೇಕು.

ರಾಮರಾಜ್ಯ ಎಂಬ ಹೆಸರಿನ ಈ ಭಾರತವರ್ಷದ ರಾಜ್ಯಕ್ಕೆ ರಾಮನೇ ಏಕಚಕ್ರಾಧಿಪತಿಯು. ಸುಮಂತನಂತೆ ಈ ರಾಮರಾಜ್ಯದಲ್ಲಿ ಮಂತ್ರಿಗಳು ಇರತಕ್ಕದ್ದು. ತ್ಯಾಗಭಾವನೆ, ಐಹಿಕ ಸುಖಸಾಧನೆಗಳಲ್ಲಿ ಅನಾಸಕ್ತಿ, ಧರ್ಮಕಾರ್ಯದಲ್ಲಿ ತತ್ಪರತೆ, ನಿಸ್ವಾರ್ಥ ರಾಷ್ಟ್ರಸೇವೆ, ವಿಲಕ್ಷಣ ಬುದ್ಧಿಮತ್ತೆ, ಉತ್ಕಟ ಸಂಘಟನ ಶಕ್ತಿ, ಅಲೌಕಿಕ ಪ್ರತಿಭೆ, ಆದರಣೀಯ ನಡೆನುಡಿ, ಇವೇ ಮೊದಲಾದ ಸುಮಂತನ ಗುಣಗಳು ಮಂತ್ರಿವರ್ಗಗಳಲ್ಲಿ ಯಾವಾಗಲೂ ಎದ್ದುಕಾಣುತ್ತಿರಬೇಕು—"ಚಾತು ರ್ವರ್ಣ್ಯಂ ಚ ಲೋಕೇಸ್ಮಿನ್ ಸ್ವೇಸ್ವೇ ಕಾರ್ಯೇ ನಿಯೋಕ್ಷ್ಯತಿ" (ವಾ. ರಾ. ಬಾಲ ಕಾಂ.) ರಾಮರಾಜ್ಯದ ಶಾಸನ ಪದ್ಧತಿಯ ಇದು ಒಂದು ಲಕ್ಷಣ. ಶ್ರೀರಾಮನು ಚಾತುರ್ವರ್ಣ್ಯದ ಜನರನ್ನು ಅವರವರಲ್ಲಿ ಯಾವ ತಾಪ-ಕೋಪ, ದ್ವೇಷ-ಅಸೂಯೆಗಳು ಇರಗೊಡಿಸದೆ ತನ್ನ ತನ್ನ ಸ್ವಧರ್ಮೋಚಿತ ಧರ್ಮಕರ್ಮಗಳಲ್ಲಿ, ಸುಖಸಮಾಧಾನದಿಂದ ತೊಡಗಿಸು

ಷನು ಎಂಬೀ ವಾಲ್ಮೀಕಿಯನ್ನು ಕುರಿತು ನಾರದರು ಹೇಳಿದ ಮಾತು ಈಗಲೂ ಈಗಿನ ರಾಮರಾಜ್ಯಕ್ಕೂ ಸಲ್ಲುವುದು.

ಆಗಿನಂತೆ ಈಗಲೂ ರಾಮರಾಜ್ಯದ ಪ್ರಜೆಯು ಸ್ವಕರ್ಮನಿರತವಾಗಿ ಯಾವ ವರ್ಣವಿದ್ವೇಷವೂ ಇರದೆ ಶಾಂತಿ ಸಮಾಧಾನದ ಪಾರಮಾರ್ಥಿಕ ದಿವ್ಯಜೀವನವನ್ನು ಸಾಗಿಸುತ್ತಾ ವಿಶ್ವಜನರ ಧನ್ಯವಾದಕ್ಕೆ ಪಾತ್ರವಾಗಿ ದೈವೀಸಂಪತ್ತಿನಿಂದ ಕೂಡಿ ಬಾಳಬೇಕು. ಆವಾಗಿನ ಕೌಟುಂಬಿಕ ಮತ್ತು ಸಾಮಾಜಿಕ ರಹಸ್ಯಮಯ ಜೀವನವು ಆರ್ಯ ಸಂಸ್ಕೃತಿಯ ಅತ್ಯುಚ್ಚ ಆದರ್ಶವಾಗಿ ವಿಶ್ವದಲ್ಲೆಲ್ಲಾ ಪ್ರಕಾಶಿಸುತ್ತಿರುವಂತೆ ಈಗಲೂ ಅದು ರಾರಾಜಿಸುತ್ತಿರಬೇಕು. ಆದರ್ಶ ತಾಯಿ-ತಂದೆ, ಆದರ್ಶ ಸಂತತಿ, ಆದರ್ಶ ಬಂಧು ಪ್ರೇಮ, ಆದರ್ಶ ಪತಿ-ಪತ್ನಿ, ಆದರ್ಶ ಅತ್ತೆ, ಆದರ್ಶ ಸೊಸೆ, ಆದರ್ಶ ಮಾವ, ಆದರ್ಶ ಅಳಿಯ, ಕೌಸಲ್ಯಾ ಸುಮಿತ್ರೆಯರಂತಹ ಆದರ್ಶ ಸವತಿಯರು, ಆದರ್ಶ ಸಾಪತ್ನ ಬಂಧುಗಳು, ಆದರ್ಶ ಭಾವ-ಮೈದುನರು, ಆದರ್ಶ ಅತ್ತಿಗೆ-ನಾದಿನಿಯರು, ಪ್ರತಿ ಕುಟುಂಬದಲ್ಲಿಯೂ ತಮ್ಮ ಪ್ರಭಾವವನ್ನು ಬೀರುತ್ತಾ ಸುಖಶಾಂತಿಮಯ ಜೀವನವನ್ನು ಸಾಗಿಸುತ್ತಿರಬೇಕು. ಆದರ್ಶ ಸಭ್ಯತೆ, ಆದರ್ಶ ಶಿಷ್ಟಾಚಾರ, ಆದರ್ಶಗುರು-ಶಿಷ್ಯ ಸಂಪ್ರದಾಯ, ಆದರ್ಶ ಮೃದು-ಮಧುರ ವ್ಯವಹಾರ, ಮೃದು-ಮಧುರ ಸಂಭಾಷಣೆ, ವಿನಮ್ರವರ್ತನೆ, ಪರಿಶುದ್ಧ ಜೀವನ, ಉಚ್ಚ ವಿಚಾರಸರಣಿ, ವಿಶ್ವಾನುಕರಣೀಯ ಆಚಾರ ವ್ಯವಹಾರಗಳು ರಾಮ ರಾಜ್ಯದ ಪ್ರಜೆಯಲ್ಲಿ ತುಂಬಿತುಳುಕುತ್ತಿರಬೇಕು. ಶಾರೀರಿಕ, ವ್ಯವಹಾರಿಕ ಮತ್ತು ನೈತಿಕಸ್ಥಿತಿ ಮತ್ತು ಶಿಕ್ಷೆ-ದೀಕ್ಷೆಗಳು ವಿಶ್ವಾನುಕರಣೀಯವಾಗಿರ ಬೇಕು. ರಾಮರಾಜ್ಯದಲ್ಲಿ ಒಬ್ಬನೂ ಸಹ ಕಾಮಿ, ಕೃಪಣ, ಕ್ರೂರ, ಮೂರ್ಖ, ನಾಸ್ತಿಕ, ಅವಿವೇಕಿ, ದರಿದ್ರ, ನೀತಿಭ್ರಷ್ಟ ಮತ್ತು ಅಧರ್ಮಿ ಯಾದವನು ಇರಕೂಡದು. ಕಾಣಲಿಕ್ಕೆ ಹೋದರೂ ಒಬ್ಬನಾದರೂ ಯಾವ ದೃಷ್ಟಿಯಿಂದಲೂ ಅಯೋಗ್ಯನಾದವನು ಸಿಕ್ಕಕೂಡದು. ರಾಮ ರಾಜ್ಯದಲ್ಲಿ ವ್ಯಕ್ತಿಯ ಮತ್ತು ಸಮಾಜದ ಸಾರ್ವಾಂಗಿಕ ವಿಕಾಸವು ಪೂರ್ಣಚಂದ್ರನ ಪ್ರಕಾಶದಂತೆ ಜಗತ್ತನ್ನೇ ಸಂತೈಸುತ್ತಿರಬೇಕು. ಸುಖ ಸಮೃದ್ಧಿಯಿಂದ ಕೂಡಿರುವ ರಾಮರಾಜ್ಯದಲ್ಲಿ ಯಾವ ವಿಧವಾದ

ದುರ್ಭಿಕ್ಷತೆಯ ಹೆಸರೂ ಸಹಾ ಕೇಳಿಬರಬಾರದು. ರಾಮರಾಜ್ಯದ ಪ್ರತಿ ಗ್ರಾಮ, ಎಲ್ಲಾ ಪುರ-ಪಟ್ಟಣ, ಎಲ್ಲಾ ಮನೆ-ಮಠಗಳೂ, ಆಧ್ಯಾತ್ಮಿಕ ನೆಲೆಗಟ್ಟಿನಮೇಲೆ ನೆಲೆಸಿರುವ ಅತ್ಯುಚ್ಚ ಧರ್ಮ-ನೀತಿಯ, ಸುಖಶಾಂತಿಯ ದಿವ್ಯ ತೇಜಸ್ಸಿನಿಂದಲೂ ಮತ್ತು ತನ್ನದೇ ಆದ ಅಸಾಮಾನ್ಯ ವೈಭವದಿಂದಲೂ ಒಪ್ಪುತ್ತಿರಬೇಕು. ಇದು ವೈದಿಕಧರ್ಮದ ವೈಭವ; ಆರ್ಯಸಂಸ್ಕೃತಿಯ ಹಿರಿಮೆ; ವಿಶ್ವಧರ್ಮದ ಮಂಗಳ ಆದರ್ಶ.

ತಮ್ಮ ಧರ್ಮದ ಕಡು ಅಭಿಮಾನವನ್ನು ಇಟ್ಟುಕೊಂಡಂಥ ಕ್ರಿಸ್ತಭಕ್ತ ಪ್ರೊ. ಮೋನಿಯರಂಥವರೂ ಸಹ ಪ್ರಥಮ ಕುತೂಹಲದಿಂದ ಈ ಸನಾತನ ಧರ್ಮದ ಅಭ್ಯಾಸವನ್ನು ಮಾಡಿ, ಪರವಶತೆಯಿಂದ ತಮ್ಮ ಧರ್ಮದ ಅಭಿಮಾನವನ್ನು ಬಿಟ್ಟು, ಇದರ ಸರ್ವಶ್ರೇಷ್ಠತೆಯ ಮುಂದೆ ವಿನಮ್ರರಾಗಿ ತಮ್ಮ ಉದ್ಧಾರದ ಸವಿನಯ ಯಾಚನೆಯನ್ನು ಇದರ ಪಾದಾರವಿಂದಗಳಲ್ಲಿ ಮಾಡಿರುವರು.

"Hinduism is all-tolerant, all-compliant, all-comprehensive all-absorbing."

ಸನಾತನ ಧರ್ಮವಿದು, ಸರ್ವ ಸ್ವೈರಣೆಯುಳ್ಳಂಥ ಉಚ್ಚತತ್ವಜ್ಞಾನವನ್ನು ತನ್ನ ಒಡಲಿನಲ್ಲಿ ಇಟ್ಟುಕೊಂಡಂಥ ವಿಶಾಲ ಹೃದಯದ ಒಂದು ಆದರ್ಶ ವಿಶ್ವಧರ್ಮ. ಸರ್ವಸಮತೆಯಿಂದ ಇದು ವಿಶ್ವಮೌಲೀಭೂತವಾಗಿರುವುದು. ಹೆಚ್ಚಿನ ದೊಡ್ಡಸ್ತಿಕೆಯು ವಿನಮ್ರತೆಯಿಂದಲೇ ಯಾವಾಗಲೂ ಕೂಡಿಕೊಂಡಿರುವುದು, ಎಂಬುದರ ಸತ್ಯತೆಯು ಸನಾತನ ಧರ್ಮದ ವಿಷಯದಲ್ಲಿ ಮನಗೊಳ್ಳುವಂತಿದೆ. ಇದರ ದೊಡ್ಡತನದ ಜೊತೆಗೆ ಇದರಲ್ಲಿ ಅಷ್ಟೇ ಚಿತ್ತಾಕರ್ಷಕವಾದ ಸೌಜನ್ಯ ಮತ್ತು ವಿನಯಗಳು ತುಂಬಿಕೊಂಡಿರುವುವು. ಆದುದರಿಂದಲೇ ಇದು ಸರ್ವಮಾನ್ಯವಾಗಿರುವುದು. ಸರ್ವಶ್ರೇಷ್ಠ ವಸ್ತುವು ಸರ್ವವ್ಯಾಪಕವಿರುವುದೆಂಬ ನ್ಯಾಯದಂತೆ ಸರ್ವಶ್ರೇಷ್ಠವಾಗಿರುವಂಥ ಈ ಸನಾತನಧರ್ಮವು ಸರ್ವವ್ಯಾಪಕವಿರುವುದು. ವಿಶ್ವದಲ್ಲಿ ಹರಡಿಕೊಂಡಿರುವ ಎಲ್ಲಾ ಉಚ್ಚತತ್ವಗಳಿಗೆ ಇದು ಮಾತಾಪಿತೃಸ್ಥಾನವಾಗಿರುವುದು. ಇದರಲ್ಲಿ ಒಳಪಟ್ಟಿರುವ ತತ್ವಗಳೇ ಅಂಶಾಂಶಭಾವಗಳಿಂದ ವಿಶ್ವದ ಎಲ್ಲಾ ದಿಕ್ಕುಗಳಲ್ಲಿಯೂ ಕಂಡುಬರುವುವು. ವಿಶ್ವ

ದಲ್ಲಿರುವ ಎಲ್ಲಾ ಧರ್ಮ ತತ್ವಕಿರಣಗಳನ್ನು ತನ್ನಲ್ಲಿ ಅಡಗಿಸಿಕೊಂಡು ಇದು ಸೂರ್ಯನಂತೆ ವಿಶ್ವವನ್ನೆಲ್ಲಾ ಬೆಳಗಿಸುವುದು.

"It is a living religion. It is scientific, carefully elaborated and practically valuable to all extent, not approached by any other religion in the world."

ಸನಾತನ ಧರ್ಮವೆಂದರೆ ಚೈತನ್ಯವುಳ್ಳ ಧರ್ಮ. ಎಲ್ಲರಿಗೂ ಸಚೇತನ ಮಾಡುವುದು. ಇದರ ವಿಚಾರಸರಣಿಯು ಅತ್ಯಂತ ಶಾಸ್ತ್ರ ಶುದ್ಧವಾದದ್ದು. ಇದು ಅತಿ ಸೂಕ್ಷ್ಮತೆಯಿಂದಲೂ ಸಂಪೂರ್ಣದಕ್ಷತೆ ಯಿಂದಲೂ, ಬಹು ಪರಿಷ್ಕೃತವಾದದ್ದು. ಒಂದು ಪಾರಮಾರ್ಥಿಕ ದೃಷ್ಟಿ ಯಿಂದಲ್ಲೇ ಅಲ್ಲದೆ ವ್ಯಾವಹಾರಿಕ ದೃಷ್ಟಿಯಿಂದಲೂ ಇದು ಅತಿ ಮಹತ್ವ ಪೂರ್ಣವಾದುದು. ಎಲ್ಲಾ ದೃಷ್ಟಿಯಿಂದಲೂ ವಿಶ್ವದ ಎಲ್ಲಾ ಕಾರ್ಯ ಕ್ಷೇತ್ರದಲ್ಲಿ ಅಷ್ಟೇ ಇದರ ಅವಶ್ಯಕತೆಯಿದೆ. ಐಹಿಕ, ಪಾರಲೌಕಿಕ ಸುಖದ ಅತ್ಯುನ್ನತ ಶಿಖರವೇ ಇದು. ಇದರಷ್ಟು ಉನ್ನತ ಪದವನ್ನು ಸಾಧಿಸಲು ವಿಶ್ವದಲ್ಲಿರುವ ಮತ್ತಾವ ಧರ್ಮದಿಂದಲೂ ಸಾಧ್ಯವಿಲ್ಲ. ತುಲ ನಾತ್ಮಕ ದೃಷ್ಟಿಯಿಂದ ಎಲ್ಲಾ ಧರ್ಮಗಳ ಸಂಪೂರ್ಣ ಅಭ್ಯಾಸ ಮಾಡಿ ಕೊನೆಯಲ್ಲಿ ಎಲ್ಲಾ ಪಂಡಿತರೂ ಹೇಳಿದ ಮಾತಿದೊಂದೇ.

"I have found Hinduism to be the most satisfactory religion in the world."

ವಿಶ್ವದ ಎಲ್ಲಾ ಧರ್ಮಗಳಲ್ಲಿ ಸನಾತನಧರ್ಮವಿದೊಂದೇ ನನಗೆ ಅತಿಶಯ ಸಮಾಧಾನಕರವಾಗಿ ಕಂಡುಬಂದಿತು.

# ವೈದಿಕ ವಾಙ್ಮಯ

ಸದಾಚಾರ ರೂಪವಾದ ಈ ಆರ್ಯಸಂಸ್ಕೃತಿಯ ಸುಂದರವಾದ ಪುಣ್ಯವೃಕ್ಷಕ್ಕೆ ವೇದವೇ ಮೂಲ. ಆತ್ಮನಿಷ್ಠೆಯೇ ಮಧ್ಯದ ಮೋಟುಭಾಗ —ಅಭ್ಯುದಯ ನಿಃಶ್ರೇಯಸ್ಸುಗಳೇ ಎರಡು ಮುಖ್ಯವಾದ ಶಾಖೆಗಳು— ಕೀರ್ತಿ, ಪುಷ್ಟಿ, ತುಷ್ಟಿ, ಶಾಂತಿ, ಉತ್ಕೃಷ್ಟ ನೀತಿ, ಮೃದು-ಮಧುರ ವೃತ್ತಿ, ನಡೆನುಡಿ, ಆದರ್ಶ ಸಭ್ಯತೆ, ಉತ್ಕೃಷ್ಟ ನಾಗರೀಕತೆ, ದಿವ್ಯಜೀವನ, ಸತ್ಯಸಂಧತೆ ಮುಂತಾದ ಅನೇಕ ಮನೋಹರ ಕೊಂಬೆಗಳಿಂದ ಈ ವೃಕ್ಷವು ಅತಿ ಶೋಭೆಗೊಂಡಿರುವುದು. ಎಲ್ಲಾ ವಿಧದ ಉತ್ಕೃಷ್ಟ ಸುಖಸೌಕರ್ಯದ ಎಲೆಗಳಿಂದ ಇದು ತುಂಬಿಕೊಂಡಿರುವುದು. ಉತ್ಕೃಷ್ಟ ಸಂತತಿ ಮತ್ತು ದಿವ್ಯ ವೈಭವದ ಹೂಗೊಂಚಲುಗಳಿಂದ ಅಲ್ಲಲ್ಲಿ ಇದು ಬಹು ಚಿತ್ತಾಕರ್ಷಕ ವಾಗಿರುವುದು. ಬ್ರಹ್ಮಾನಂದದ ಫಲಗಳಿಂದ ಇದು ಅತಿ ಮಹತ್ವ ಗೊಂಡಿರುವುದು. ಆತ್ಮ ವಿಚಾರವನ್ನುಂಟುಮಾಡುವ ಇದರ ದಿವ್ಯ ಆಮೋದವು ವಿಶ್ವದಲ್ಲೆಲ್ಲಾ ಹರಡಿಕೊಂಡಿರುವುದು. ಜೀವನದ ಕೃತ ಕೃತ್ಯತೆಯ ರೂಪವಾದ ಇದರ ದಿವ್ಯ ದರ್ಶನವು ವಿಶ್ವದ ಎಲ್ಲಾ ಜನರ ಮನಸ್ಸನ್ನೂ ತನ್ನ ಕಡೆಗೆ ಬಲವಾಗಿ ಸೆಳೆಯುತ್ತಿರುವುದು. ಇದರ ಪ್ರಚಾರಕ್ಕಾಗಿ ಹೊರಟ ಪರಮಾತ್ಮರೂಪವಾದ ಗಾಳಿಯು ಇದರ ನಿರತಿಶಯತ್ವವನ್ನು ವಿಶ್ವದಲ್ಲೆಲ್ಲಾ ವ್ಯಾಪಿಸುತ್ತಿರುವುದು.

ಆರ್ಥರ್ ಷೋಪನ್‌ಹಾರನ ಒಂದು ವಾಕ್ಯವು ಈ ಸಂದರ್ಭದಲ್ಲಿ ಸಹಜವಾಗಿ ನೆನಪಿಗೆ ಬಂತು :—

"In India our religion will now and never strike root. The primitive wisdom of the human race will never be pushed aside by the events of Galilee. On the contrary, Indian wisdom will blow back upon Europe and produce a thorough change in our knowing and thinking." (Aurthur Schopenhauer.)

ಭಾರತವರ್ಷದಲ್ಲಿ ನಮ್ಮ ಕ್ರಿಸ್ತ ಧರ್ಮವು ಈಗಲೂ ಮತ್ತು ಯಾವಾಗಲೂ ಬೇರೂರಲಿಕ್ಕಿಲ್ಲ. ಮಾನವ ಜಾತಿಯ ಸನಾತನ ಮೂಲಭೂತ ವಾದ ಈ ಆತ್ಮೀಯ ಜ್ಞಾನವು ಗ್ಯಾಲಿಲೀಯ ಯಾವ ಪರಿಣಾಮದಿಂದಲೂ

ಹಿಂದಾಗದೆ ಇದರ ವಿರುದ್ಧವಾಗಿ ಒಳ್ಳೆರಭಸದಿಂದಬೀಸಿ ಇದು ಯೂರೋಪಿನ ಎಲ್ಲಾ ಆಚಾರ-ವಿಚಾರಗಳಲ್ಲಿಯೂ ಸಂಪೂರ್ಣ ಕ್ರಾಂತಿಯನ್ನುಂಟು ಮಾಡುವುದು. ಈ ಆರ್ಯಸಂಸ್ಕೃತಿಯೇ ವಿಶ್ವದಲ್ಲೆಲ್ಲಾ ಹಬ್ಬುವುದು.

## ವೈದಿಕ ಆರ್ಯಸಂಸ್ಕೃತಿಯು ವೇದಮೂಲ

ಸನಾತನ ಆರ್ಯಸಂಸ್ಕೃತಿಯು, ಆರ್ಯಧರ್ಮವು ವಿಶ್ವದ ಎಲ್ಲಾ ಪಂಡಿತರಿಗೆ ಇಷ್ಟೊಂದು ಮೆಚ್ಚಿದ್ದೆಂದರೆ ಅದಕ್ಕೆ ಮೂಲಭೂತವಾಗಿರುವಂಥ ವೇದದಿಂದಲೇ. ಯಾವಾಗ್ಯೂ ಆಯಾ ಧರ್ಮಕ್ಕೆ ಆಯಾ ಧರ್ಮದ ಮೂಲಗ್ರಂಥದಿಂದಲೇ ಮಹತ್ವವುಂಟಾಗುವುದು. ಆ ಮೂಲಗ್ರಂಥದ ಮಹತ್ವಾನುಸಾರ ಆ ಧರ್ಮಕ್ಕೂ ಮಹತ್ವವು ಬರುವುದು. ಸನಾತನ ಆರ್ಯಧರ್ಮದ ಮುಖ್ಯ ಗ್ರಂಥ ವೇದವೇ ಆಗಿರುವುದು. ಆದುದರಿಂದಲೇ ಇದಕ್ಕೆ ವೈದಿಕಧರ್ಮವೆನ್ನುವರು. ವೇದದ ನಿರತಿಶಯತೆಯಿಂದ ವೇದದ ಧರ್ಮವೂ ಕೂಡಾ ಸರ್ವಾತಿಶಯವಾಗಿರುವುದು.

## ಅಪೌರುಷೇಯ ವೇದ

"ಅಪೌರುಷೇಯಂ ವಾಕ್ಯಂ ವೇದಃ" ಈ ಮೀಮಾಂಸಕರ ಮತವು ಸರ್ವಮಾನ್ಯವಿದೆ. "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ । ತಂಹದೇವಮಾತ್ಮ ಬುದ್ಧಿಪ್ರಕಾಶಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ" (ಶ್ವೇತಾ. ಅ. ೬–೧೮).

ಮೊಟ್ಟಮೊದಲು ಯಾವ ಪರಮಾತ್ಮನು ಬ್ರಹ್ಮದೇವನನ್ನು ನಿರ್ಮಿಸಿ ವೇದಗಳನ್ನು ಆತನ ಕಡೆಗೆ ಕಳುಹಿಸಿಕೊಟ್ಟನೋ ಅಂತಹ ಆತ್ಮಬುದ್ಧಿಯನ್ನು ಬೆಳಗಿಸುವ ಪರಮಾತ್ಮನನ್ನು ಮುಮುಕ್ಷುವಾದ ನಾನು ಮೋಕ್ಷದ ಪ್ರಾಪ್ತಿಗಾಗಿ ಶರಣುಹೋಗುವೆನು, ಎಂಬುದಾಗಿ ಈ ಮಂತ್ರದ ಭಾವಾರ್ಥ.

## ವೇದದ ಅರ್ಥ

ವೇದ, ಇದರಲ್ಲಿ ವಿದ್ ಧಾತು ಇರುವುದು. "ವಿದ್ ಜ್ಞಾನೇ" ವಿದ್ ಧಾತುವಿಗೆ ತಿಳಿ ಎಂಬ ಅರ್ಥವಾಗುವುದು. ಸೃಷ್ಟಿಸ್ಥಿತಿಲಯಗಳ ವಿಷಯವಾಗಿಯೂ, ಹಲವು ಐಹಿಕ, ಪಾರಲೌಕಿಕ ಸಾಧನಗಳ ವಿಷಯ

ವಾಗಿಯೂ, ಈ ವಿಧವಾಗಿ ನೀನು ಅರಿತುಕೋ, ಎಂದು ಅವುಗಳ ಬಗ್ಗೆ ಯಾವ ವಿಚಾರಗಳನ್ನು ಪರಮಾತ್ಮನು ಸೃಷ್ಟಿಕರ್ತೃವಿಗೆ ತಿಳಿಯಪಡಿಸಿದನೋ, ಅವೇ ವೇದಗಳೆಂದೂ, ಆತ್ಮಜ್ಞಾನಕ್ಕೆ ಕಾರಣನಾಗತಕ್ಕವನು ಒಬ್ಬ ಪರಮಾತ್ಮನೇ ಎಂದೂ, ಮೋಕ್ಷದ ಇಚ್ಛೆಯುಳ್ಳವನು ಆ ಪರಮಾತ್ಮನಿಗೇ ಶರಣುಹೋಗಬೇಕೆಂದೂ, ಪರಮಾತ್ಮನಿಂದಲೇ ಮೋಕ್ಷವಾಗುವುದೆಂತಲೂ, ಮೇಲೆ ಉದಹರಿಸಿದ ಮಂತ್ರದಿಂದ ಸಿದ್ಧನಾಗುವುದು.

## ವೇದದ ಉತ್ಪತ್ತಿ

'ಪರಮಾತ್ಮನಿಂದ ಬಂದ' ಎಂದರೆ—ಅಂತರಂಗದಲ್ಲಿ ಸ್ಫುರಿಸಿದ ವೇದಗಳನ್ನು ಸರ್ವ ಪ್ರಥಮವಾಗಿ ಬ್ರಹ್ಮದೇವನು ಕಂಡನು. ಆದುದರಿಂದ "ಪ್ರಥಮ ವೇದದ್ರಷ್ಟಾ" ಬ್ರಹ್ಮದೇವನೇ ಆದನು. ಅನಂತರ ಪರಮಾತ್ಮನ ಅನುಗ್ರಹದಿಂದಲೇ ಅಂತಹ ತಪಸ್ವಿಗಳ ಶುದ್ಧಾಂತರಂಗದಲ್ಲಿ ಈ ವೇದಮಂತ್ರದ ಸ್ಫುರಣವಾಯಿತು. ಆ ತಪಸ್ವಿಗಳು—ಆ ಪರಮ ಪವಿತ್ರರಾದ ಋಷಿಗಳು ಅವುಗಳನ್ನು ಕಂಡರು. ಇದೊಂದು ವೇದ ಸಾಕ್ಷಾತ್ಕಾರವೇ ಸರಿ. ಇಂತಹ ವೇದದ ಸಾಕ್ಷಾತ್ಕಾರವನ್ನು ಹೊಂದಿದ ಋಷಿಗಳಿಗೆ "ಮಂತ್ರ ದ್ರಷ್ಟಾರಃ" ಎನ್ನುವುದಾಗಿ ಹೇಳಲ್ಪಟ್ಟಿದೆ. ಪರಮಾತ್ಮನ ಕೃಪೆಯಿಂದ ಈ ವೇದಮಂತ್ರಗಳು ಸ್ಫುರಿಸಿದುವು. ಆದುದರಿಂದ ಈ ವೇದಮಂತ್ರಗಳೆಲ್ಲಾ ಪರಮಾತ್ಮ ಪ್ರಣೀತವಾದವುಗಳಲ್ಲದೇ ಮಾನವ ಕೃತಿಗಳಲ್ಲ. ಈ ಅರ್ಥವನ್ನು ತೋರಿಸಲು ಅವುಗಳನ್ನು ಅಪೌರುಷೇಯವಾದವುಗಳೆಂದು ಕರೆಯುವರು.

ವೇದಕ್ಕೆ 'ಶ್ರುತಿ' ಎನ್ನುವುದಾಗಿಯೂ ಒಂದು ಹೆಸರಿದೆ. ಶ್ರುತಿ ಎಂದರೆ ಕೇಳಬರುವುದು. ಈಗಾದರೂ ಗುರುಮುಖದಿಂದ ಕೇಳಿಯೇ ವೇದಾಧ್ಯಯನ ಮಾಡುವರು. ಈ ಮೂಲಕ ಕೇಳಿಬಂದ ವೇದದ ಈ ಉತ್ಪತ್ತಿಕ್ರಮವು, ಕೇಳಿ ಕಂಠಪಾಠ ಮಾಡಿರುವ ಕ್ರಮದಿಂದ ಮರೆಯದಂತೆ ಹಂಬಲಿಸುವರು. ಅಂತರಂಗದಲ್ಲಿ ಸ್ಫುರಿಸುವ ವೇದಮಂತ್ರಗಳನ್ನು ಕಂಡು ಅನಂತರ ಬ್ರಹ್ಮದೇವನು ಬಾಯಿಯಿಂದ ಒಡೆದು ಆಡಿದನು. ಇದೇ ಇವನ ವಾಕ್ಕಾಯಿತು.

"ವಾಗ್ವಿವೃತಾಶ್ಚ ವೇದಾಃ" (ಮುಂಡಕ ೨-೪) "ಅನಾದಿ ನಿಧನಾ ನಿತ್ಯಾವಾಗುತ್ಸ್ರುಷ್ಟಾ ಸ್ವಯಂಭುವಾ" ಈ ವಾಕ್ಯಕ್ಕೆ ಅನಾದಿ ಮತ್ತು ಅವಿನಾಶಿಯಾದುದೆಂದು ಹೇಳಿರುವುದರ ತಾತ್ಪರ್ಯವಿಷ್ಟೇ. ಅಂತರಂಗದಲ್ಲಿ ಸ್ಫುರಿಸಿರುವ ವೇದಮಂತ್ರಗಳನ್ನು ಪ್ರಥಮತಃ ಬ್ರಹ್ಮ ದೇವನು ಕೇಳಿದನು. ಆಮೇಲೆ ಋಷಿಗಳು ಕೇಳಿದರು. ಕೇಳಿದ್ದನ್ನು ತಮ್ಮ ವಿದ್ಯಾರ್ಥಿಗಳನ್ನು ಕುರಿತು ಹೇಳಿದರು. ಹೀಗೆ ಕೇಳಿ ಬಾಯಿಪಾಠವಾಗಿ ಬಂದ ಈ ಸಂಪ್ರದಾಯವು ವೇದಕ್ಕಿರುವ 'ಶ್ರುತಿ' ಎಂಬ ಹೆಸರಿನಿಂದ ಸ್ಪಷ್ಟವಾಗುವುದು. 'ಶ್ರುತಿ' ಎಂದರೆ ಕೇಳಿಬಂದದ್ದು ಎಂದು ಅರ್ಥವಾಗು ವುದಷ್ಟೆ? ಈ ಅಂತರಂಗದಲ್ಲಿ ಸ್ಫುರಿತವಾದ ವೇದಗಳು ಯಾರೂ ರಚಿಸಿದ ಕೃತಿಗಳಾಗದ್ದರ ದೆಸೆಯಿಂದ ಅವುಗಳನ್ನು 'ಅಪೌರುಷೇಯ' ಎಂದರೆ ಪರಮಾತ್ಮಸೃಷ್ಟವೆನ್ನುವರು. ಪರಮಾತ್ಮನ ಕೃಪೆಯಿಂದ ಸ್ಫುರಿಸ ಬೇಕಾದರೆ ಅದು ಅಪೌರುಷೇಯವಲ್ಲದೇ ಮತ್ತೇನು?

ಯಾಮೃಷಯೋ ಮಂತ್ರಕೃತೋ ಮನೀಷಿಣಃ।
ಅನ್ವೈಚ್ಛನ್ದೇವಾಸ್ತಪಸಾ ಶ್ರಮೇಣ।
ತಾಂ ದೇವೀಂ ವಾಚಂಹವಿಷಾ ಯಜಾಮಹೇ॥ (ತೈ. ಬ್ರಾ.)

ಯಾವ ವಾಗ್ದೇವತೆಯನ್ನು ಬುದ್ಧಿವಂತರಾದ ಋಷಿಗಳು ತಪಸ್ಸಿನ ಬಹುಶ್ರಮವನ್ನು ವಹಿಸಿ ಸಾಕ್ಷಾತ್ತಾಗಿ ಪಡೆದು ಮಂತ್ರಕೃತರಾದರೋ ಆ ವಾಣೀರೂಪಳಾಗಿರುವ ದೇವಿಯನ್ನು ಹವಿಸ್ಸುಗಳಿಂದ ತೃಪ್ತಿಪಡಿಸೋಣ!

ಯುಗಾಂತೇಽನ್ತರ್ಹಿತಾನ್ವೇದಾನ್ ಸೇತಿಹಾಸಾನ್ ಮಹರ್ಷಯಃ।
ಲೇಭಿರೇ ತಪಸಾಪೂರ್ವ ಮನುಜ್ಞಾತಾಃ ಸ್ವಯಂಭುವಾ॥

ಯುಗಾಂತ್ಯದಲ್ಲಿ ಪರಮಾತ್ಮನಲ್ಲಿ ಇತಿಹಾಸ ಪುರಾಣಗಳ ಸಹಿತ ವಾಗಿ ಅಡಗಿರುವ ವೇದಗಳನ್ನು ಬ್ರಹ್ಮನಿಂದ ಅನುಜ್ಞಾತರಾಗಿ ಋಷಿಗಳು ತಪೋಮೂಲಕವಾಗಿ ಪಡೆದರು. ಈ ಶ್ರುತಿಸ್ಮೃತಿಗಳ ಪರ್ಯಾಲೋಚನೆ ಯಿಂದ ಋಷಿಗಳು ವೇದಗಳನ್ನು ಪಡೆದದ್ದು ತಪೋಮೂಲಕವೇ ಸರಿಯೆಂದು ಗೊತ್ತಾಗುವುದು. 'ವೇದಗಳನ್ನು ಕಂಡರು' ಎಂಬುವುದಕ್ಕೆ 'ಅವು ಸ್ಫುರಿಸುವುದನ್ನು ಕಂಡರು' ಎಂಬ ಅರ್ಥವಾಗುವುದು. ಆದುದರಿಂದ ಅವರು ಮಂತ್ರದ್ರಷ್ಟಾರರಾದರು. ಅವರ ಹೃದಯದಲ್ಲಿ ಒಡಮೂಡಿದ

ವೇದಮಂತ್ರಗಳು ಬಾಯಿಂದ ಹೊರಬೀಳುವಾಗ ಅವರಿಂದಲೇ ಅವು ಉಂಟಾದುವು ಎಂಬುದಾಗಿ ತೋರಿಬಂದುದರಿಂದ ಅವರನ್ನು ಮಂತ್ರಕೃತರೆಂದೂ ಇಲ್ಲಿ ಸಂಬೋಧಿಸಿರುವರು.

## ಮಂತ್ರಕೃತ ಮತ್ತು ಮಂತ್ರಪತಿ ಋಷಿಗಳು

"ನಮ ಋಷಿಭ್ಯೋ ಮಂತ್ರಕೃದ್ಭ್ಯೋ ಮಂತ್ರಪತಿಭ್ಯಃ" (ತೈ. ಬ್ರಾ. ೪). ಮಂತ್ರಕೃತರಾದ ಮತ್ತು ಮಂತ್ರಪತಿಗಳಾದ ಋಷಿಗಳಿಗೆ ನಮಸ್ಕಾರ. ಪಾತೀತಿ ಪತಿಃ—ಈ ದೃಷ್ಟಿಯಿಂದ ಅಧ್ಯಯನ, ಅಧ್ಯಾಪನ ಮೂಲಕವಾಗಿ ವೇದಗಳ ರಕ್ಷಣೆ ಋಷಿಗಳಿಂದಲೇ ಆಯಿತು. ಎಂದು "ಮಂತ್ರಪತಯಃ" ಎಂಬುದರ ತಾತ್ಪರ್ಯ.

## ವೇದದಿಂದ ಅಲೌಕಿಕ ಜ್ಞಾನಪ್ರಾಪ್ತಿ

ವೇದದಲ್ಲಿ ಅಲೌಕಿಕ ಸುಖದ ಸಾಧನೆಗಳನ್ನು ತಿಳುಹಿಸಿರುವುದರಿಂದಲೂ, ಈ ಅಲೌಕಿಕ ಸುಖಸಾಧನೆಗಳನ್ನು ತಿಳಿಯಲು ಅಲೌಕಿಕ ಜ್ಞಾನದ ಅಪೇಕ್ಷೆಯೇ ಇರುವುದರಿಂದಲೂ ಅಲೌಕಿಕ ಜ್ಞಾನವು ಲೌಕಿಕ ಪ್ರಯತ್ನದಿಂದ ಇಹಲೋಕದಲ್ಲಿ ಜನಿಸಿದ ಜನರಿಗೆ ಆಗುವುದು ಸಾಧ್ಯವಾಗದಿರೋಣದರಿಂದ, ಈ ಅಲೌಕಿಕ ಜ್ಞಾನದಿಂದ ಕೂಡಿಕೊಂಡಿರುವ ವೇದವು ಅಲೌಕಿಕ ಜ್ಞಾನವುಳ್ಳ ಇಹಲೋಕದಲ್ಲಿ ಜನಿಸದ ಈ ಲೋಕದಲ್ಲಿ ಒಳಪಡದ ಈ ಲೋಕದ ಉತ್ಪತ್ತಿಗೆ ಕಾರಣನಾದ ಪರಮಾತ್ಮನಿಂದಲೇ (ಈ ವೇದವು) ಆಗಿರಬೇಕೆಂದೂ, ಆದುದರಿಂದಲೇ ವೇದಗಳಿಗೆ "ಅಪೌರುಷೇಯ"ವೆಂದೆನ್ನುವರೆಂದೂ, ಈ ಯುಕ್ತಿ ವಿಚಾರಗಳಿಂದ ಸಿದ್ಧವಾಗುವುದು.

ಋಗ್ವೇದದ ಭಾಷ್ಯದಲ್ಲಿ ಶ್ರೀ ಸಾಯಣಾಚಾರ್ಯರು, "ಅಲೌಕಿಕಂ ಪುರುಷಾರ್ಥೋಪಾಯಂ ವೇತ್ತ್ಯನೇನೇತಿ ವೇದಶಬ್ದ ನಿರ್ವಚನಂ" ಲೌಕಿಕ ಉಪಾಯಗಳಿಂದ ತಿಳಿಯಲಸಾಧ್ಯವಾದ ಆತ್ಮಜ್ಞಾನರೂಪವಾದ ಮೋಕ್ಷೋಪಾಯವನ್ನು ಇದರಿಂದ ಎಲ್ಲರೂ ತಿಳಿಯುವರಾದುದರಿಂದ ಇದಕ್ಕೆ "ವೇದ" ಎಂಬ ಹೆಸರಿದೆ ಎಂದು ಹೇಳುತ್ತಿರುವರು.

"ಪ್ರತ್ಯಕ್ಷೇಣಾನುಮಿತ್ಯಾ ವಾ ಯಸ್ತೂಪಾಯೋ ನ ಬುಧ್ಯತೇ । ಏನಂ ವಿದಂತಿ ವೇದೇನ ತಸ್ಮಾದ್ವೇದಸ್ಯ ವೇದತಾ ॥"

ಪ್ರತ್ಯಕ್ಷವಾಗಿ ನೋಡಿಯೂ ಅಥವಾ ಅನುಮಾನದಿಂದಲೂ ಯಾವುದನ್ನು ತಿಳಿಯಲು ಸಾಧ್ಯವಾಗುವುದಿಲ್ಲವೋ, ಆ ಮೋಕ್ಷೋಪಾಯವನ್ನು ಈ ವೇದದಿಂದಲೇ ತಿಳಿಯುವವರಾದುದರಿಂದ ಇದೇ ವೇದಕ್ಕೆ ಅಪೌರುಷೇಯ ವೇದವೆಂಬ ಹೆಸರು ಬರಲು ಕಾರಣ. ಮತ್ತು ಇದೇ ವೇದದ ವೇದತ್ವವು.

## ಭಕ್ತಿಯೋಗದ ರಹಸ್ಯ

ಮೇಲೆ ಉದಾಹರಿಸಿದ "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ। ತಂಹದೇವಮಾತ್ಮ ಬುದ್ಧಿ ಪ್ರಕಾಶಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ" (ಶ್ವೇ. ೬–೧೮).

ಈ ಮಂತ್ರದಲ್ಲಿ ವೇದಮಂತ್ರಗಳ ಸ್ಫುರಣೆಯನ್ನುಂಟುಮಾಡುವ ಕಾರ್ಯದ ಜೊತೆಗೆ ಆತ್ಮಬುದ್ಧಿಯನ್ನು ಬೆಳಗಿಸುವ ಕಾರ್ಯವೂ ಒಂದು ಪರಮಾತ್ಮನದೇ ಆಗಿರುವುದೆಂದೂ ಕಂಡುಬರುವುದು. ಈ ಪರಸ್ಪರ ಸಾಹಚರ್ಯದಲ್ಲಿದ್ದ ಕಾರ್ಯಗಳಿಂದ ಪರಮಾತ್ಮನನ್ನು ಶರಣನಾಗುವುದಾದರೆ ಮೋಕ್ಷದ ಇಚ್ಛೆಯುಳ್ಳವನು ವೇದವಿಹಿತ ಕರ್ತವ್ಯಗಳನ್ನು ಪೂರ್ಣಪಡಿಸುವ ಕಾರ್ಯದ ಜೊತೆಗೆ ಆತ್ಮಬುದ್ಧಿಯನ್ನೂ, ಪರಮಾತ್ಮನಿಂದ ಬೆಳಗಿಸಿಕೊಳ್ಳುವುದಕ್ಕಾಗಿ ಪರಮಾತ್ಮನನ್ನೂ ಶರಣುಹೋಗತಕ್ಕದ್ದೆಂದು ಸ್ಪಷ್ಟವಾಗುವುದು. ಮತ್ತು ವೇದದ ಮೂಲಕವಾಗಿಯೇ ಜೀವನರಹಸ್ಯದ ಗುರುತಾಗುವುದು, ಆತ್ಮಬುದ್ಧಿ ಲಭಿಸುವುದು, ಈ ಎರಡು ಸಿದ್ಧಾಂತಗಳೂ ಸ್ಪಷ್ಟವಾಗುವುವು.

ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಂ ।
ದದಾಮಿ ಬುದ್ಧಿಯೋಗಂತಂ ಯೇನ ಮಾಮುಪಯಾಂತಿ ತೇ ॥
(ಗೀತಾ. ೧೦–೧೦)

ತೇಷಾಮೇವಾನುಕಂಪಾರ್ಥ ಮಹಮಜ್ಞಾನಜಂ ತಮಃ ।
ನಾಶಯಾಮ್ಯಾತ್ಮ ಭಾವಸ್ಥೋ ಜ್ಞಾನ ದೀಪೇನ ಭಾಸ್ವತಾ ॥
(ಗೀತಾ. ೧೦–೧೧)

ಮಹರ್ಷಯಃ ಸಪ್ತಪೂರ್ವೇ ಚತ್ವಾರೋ ಮನವಸ್ತಥಾ ।
ಮದ್ಭಾವಾ ಮಾನಸಾ ಜಾತಾಃ ಯೇಷಾಂ ಲೋಕ ಇಮಾಃ ಪ್ರಜಾಃ ॥
(ಗೀತಾ. ೧೦–೬)

ಪ್ರೀತಿಯಿಂದ ಭಜಿಸತಕ್ಕ ಭಕ್ತರಿಗೆ ಆತ್ಮತತ್ವವನ್ನು ಬೆಳಗುವ ಬುದ್ಧಿ ಶಕ್ತಿಯನ್ನು ನಾನು ಕೊಡುವೆನು. ಮತ್ತು ಅವರ ಅನುಗ್ರಹಕ್ಕಾಗಿ ಜ್ಞಾನ ದೀಪರೂಪದಿಂದ ಅಜ್ಞಾನದ ಕತ್ತಲನ್ನು ನಾಶಗೊಳಿಸುವೆನು. ಲೋಕಾನು ಗ್ರಹಕ್ಕಾಗಿಯೇ ಸನಕಾದಿ ಮುನಿಗಳು, ಸಪ್ತಋಷಿಗಳು, ಮನುಗಳು ಪರಮಾತ್ಮ ಭಾವನೆಯಿಂದ ಕೂಡಿದವರಾಗಿ ಪ್ರಜಾಸೃಷ್ಟಿಯಲ್ಲಿ ಮುಂದಿರು ದಿರುವರು. ಮೊದಲು ಉತ್ಪನ್ನವಾಗಿರುವ ಪ್ರಜೆಗೆ ಹೇಳಿಕೊಟ್ಟ ಇಹಪರ ಸುಖಸಾಧನೆಯ ರೂಪವಾದ ವೇದವನ್ನು ಪರಮಾತ್ಮನು ಹೇಳಿಕೊಡದೆ ಮತ್ತಾರು ಅಲ್ಲಿರುವರು? ಪರಮಾತ್ಮನಿಂದಲೇ ಎಲ್ಲಾ ಸೃಷ್ಟಿಯೂ ಅಲ್ಲವೇ? ಬ್ರಹ್ಮದೇವನಿಂದ ಸೃಷ್ಟಿಯಾಗಿರುವುದಕ್ಕಾಗಿ ಆತನಿಗೆ ದಯ ಪಾಲಿಸಿದ ಸೃಷ್ಟಿಜ್ಞಾನವೆಂದರೆ 'ವೇದ' ಎಂಬುದಾಗಿ ಸಿದ್ಧವಾಗುವಲ್ಲಿ, ಇವುಗಳ ಅಪೌರುಷೇಯತ್ವ, ಜಗತ್ಕಾರಣತ್ವ, ಜಗತ್ತಿನಲ್ಲಿ ಇಹಪರ ಸಾಧನೆಗಳ ಬೋಧಕತ್ವಾದಿ ವೇದಲಕ್ಷಣಗಳೆಲ್ಲಾ ತಾವಾಗಿಯೇ ಸಿದ್ಧ ವಾಗುವುವು.

## ವೇದ ವಿಷಯಕ ಋಷಿ ಮುನಿಗಳ ಮತ

ಶ್ರೀ ಜೈಮಿನಿ ಮಹರ್ಷಿಗಳು ಪ್ರಥಮ ಪಾದದಲ್ಲಿ "ವೇದಾಂಶ್ಚೈಕೇ ಸನ್ನಿಕರ್ಷಂ ಪುರುಷಾಖ್ಯಾಃ । ಅನಿತ್ಯ ದರ್ಶನಾಚ್ಚ" (ಜೈ. ಸೂ.) ಎಂಬ ಸೂತ್ರಗಳಿಂದ ಪೂರ್ವಪಕ್ಷವಾಗಿ ವೇದದ ಪೌರುಷೇಯತ್ವವನ್ನು ಸಮರ್ಥಿಸಿದುದನ್ನು ಅನಂತರ "ಉಕ್ತಂತು ಶಬ್ದ ಪೂರ್ವತ್ವಂ" "ಪರಂತು ಶ್ರುತಿಸಾಮಾನ್ಯ ಮಾತ್ರಮ್" (ಜೈ. ಸೂ.) ಎಂಬ ಸೂತ್ರ ಗಳಿಂದ ಖಂಡಿಸಿ ವೇದಗಳ ಅಪೌರುಷೇಯತ್ವವನ್ನು ಸಿದ್ಧಾಂತಿಸಿರುವರು.

ಸ್ಯಾತ್ ಪೌರುಷಂ ನ ವಾ ವೇದವಾಕ್ಯಂ ಸ್ಯಾತ್ ಪೌರುಷೇಯತಾ ।
ಕಾಠಕಾದಿ ಸಮಾಖ್ಯಾನಾತ್ ವಾಕ್ಯತ್ವಾಚ್ಚಾನ್ಯ ವಾಕ್ಯವತ್ ॥
(ಜೈ. ನ್ಯಾ. ಮಾ.)

ಸಮಾಖ್ಯಾನಂ ಪ್ರವಚನಾತ್ ವಾಕ್ಯತ್ವಂತು ಪರಾಹತಮ್ ।
ತತ್ಕರ್ತ್ರನುಪಲಂಭೇನ ಸ್ಯಾತ್ತತೋಽಪೌರುಷೇಯತಾ ॥ (ಜೈ. ನ್ಯಾ. ಮಾ.)

ಇತ್ಯಾದಿ ಸಂಗ್ರಹ ಶ್ಲೋಕಗಳಿಂದಲೂ, "ಶಬ್ದ ತದುಪಜೀವಿ ಪ್ರಮಾಣಾತಿರಿಕ್ತ ಪ್ರಮಾಣ ಜನ್ಯ ಪ್ರಮಿತ್ಯ ವಿಷಯಾರ್ಥಕತ್ವೇ ಸತಿ

ಶಬ್ದಜನ್ಯ ವಾಕ್ಯಾರ್ಥ ಜ್ಞಾನಜನ್ಯ ಪ್ರಮಾಣ ಶಬ್ದತ್ವಂ ವೇದತ್ವಮ್" ಎಂಬ ಶಬ್ದಚಿಂತಾಮಣಿಯ ವೇದಲಕ್ಷಣದಿಂದಲೂ ವೇದದ ಅಪೌರುಷೇಯತ್ವವು ಸಿದ್ಧವಾಗುವುದು. 'ಶಾಸ್ತ್ರಯೋನಿತ್ವಾತ್' (ಬ್ರ. ಸೂ. ಅ. ೧–೧–೩). ಈ ಬ್ರಹ್ಮಸೂತ್ರದಿಂದಲೂ ಇದಕ್ಕೆ ಪುಷ್ಟಿ ಬರುವುದು. "ನ ಹೀದೃಶಸ್ಯ ಶಾಸ್ತ್ರಸ್ಯ ಋಗ್ವೇದಾದಿಲಕ್ಷಣಸ್ಯ ಸರ್ವಜ್ಞ ಗುಣಾನ್ವಿತಸ್ಯ ಸರ್ವಜ್ಞಾದನ್ಯತಃ ಸಂಭವೋಽಸ್ತಿ" (ಶಾಂ. ಭಾ.). ಋಗ್ವೇದಾದಿ ರೂಪವಾದ ಶಾಸ್ತ್ರದ ಉತ್ಪತ್ತಿಯು ಸರ್ವಜ್ಞ ಗುಣಾನ್ವಿತ ಪರಮಾತ್ಮನ ಹೊರತು ಅನ್ಯರಿಂದ ಸಂಭವಿಸದು; ಎಂಬುದಾಗಿ ಶಂಕರಾಚಾರ್ಯರು ಹೇಳಿರುತ್ತಾರೆ.

## ವೇದದಿಂದ ಸೃಷ್ಟ್ಯುತ್ಪತ್ತಿ

ಸರ್ವೇಷಾಂ ಸ ತು ನಾಮಾನಿ ಕರ್ಮಾಣಿ ಚ ಪೃಥಕ್ ಪೃಥಕ್ ।
ವೇದ ಶಬ್ದೇಭ್ಯ ಏವಾದೌ ಪೃಥಕ್ಸಂಸ್ಥಾಶ್ಚ ನಿರ್ಮಮೇ ॥ (ಮನು. ೧–೨೧)

ಬ್ರಹ್ಮದೇವನು ವೇದದ ಆಧಾರದಿಂದಲೇ ಜಗತ್ತಿನ ರಚನೆಯನ್ನು ಮಾಡಿದನು. ಜಗತ್ತಿನಲ್ಲಿ ಒಳಪಡುವ ದೇವ, ಮನುಷ್ಯ, ಪಶುಪಕ್ಷ್ಯಾದಿಗಳ ನಾಮಗಳನ್ನೂ ಅಂತೆಯೇ, ಭಿನ್ನಭಿನ್ನವಾದ ವರ್ಣಗಳ ಕರ್ಮಗಳನ್ನೂ, ಅವುಗಳ ಲೌಕಿಕ ವ್ಯವಸ್ಥೆಯನ್ನೂ ನಿರ್ಧರಿಸಿದನು. "ಶಬ್ದ ಇತಿ ಚೇನ್ನಾತಃ ಪ್ರಭವಾತ್ ಪ್ರತ್ಯಕ್ಷಾನುಮಾನಾಭ್ಯಾಂ।" (ಬ್ರ. ಸೂ. ೧–೩–೨೮). ಈ ಬ್ರಹ್ಮಸೂತ್ರದಲ್ಲಿ ವೇದವ್ಯಾಸರೂ ಸಹ ಅಪೌರುಷೇಯವಾದ ವೇದದಿಂದಲೇ ಸೃಷ್ಟಿಯಾಯಿತೆಂಬುದನ್ನು ಪ್ರತಿಪಾದಿಸಿದ್ದಾರೆ.

## ವೇದವು ಧರ್ಮಮೂಲ

ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾಂ ।
ಆಚಾರಶ್ಚೈವ ಸಾಧೂನಾಂ ಆತ್ಮನಸ್ತುಷ್ಟಿರೇವ ಚ ॥ (ಮನು. ೨–೬)

ಸಂಪೂರ್ಣ ವಿಶ್ವಧರ್ಮದ ಮೂಲವೇ ವೇದವು. ವೇದ, ವೇದಾನುಸಾರವಾಗಿರುವ ಪಂಥ, ಸ್ಮೃತಿ, ಸದಾಚಾರ, ಆತ್ಮಸಂತೋಷ ಇವೇ ಧರ್ಮವನ್ನು ತಿಳಿದುಕೊಳ್ಳಲು ಪ್ರಮಾಣಗಳಾಗಿರುವುವು.

ಶ್ರುತಿಸ್ಮೃತ್ಯುದಿತಂ ಧರ್ಮಮನುತಿಷ್ಠನ್ ಹಿ ಮಾನವಃ ।
ಇಹ ಕೀರ್ತಿಮವಾಪ್ನೋತಿ ಪ್ರೇತ್ಯಚಾನುತ್ತಮಂ ಸುಖಂ ॥
(ಮನು. ೨-೯)

ಶ್ರುತಿ ಸ್ಮೃತಿಗಳಿಂದ ವಿಧಿಸಲ್ಪಟ್ಟ ಧರ್ಮವನ್ನು ಮಾನವನು ಅನುಷ್ಠಿಸುವಲ್ಲಿ ಲೋಕದಲ್ಲಿ ಕೀರ್ತಿಯನ್ನೂ, ಮರಣೋತ್ತರ ಮೇರೆ ಮೀರಿದ ಸುಖವನ್ನೂ ಪಡೆಯುವನು. ಈ ಶ್ಲೋಕದಲ್ಲಿ ಮಾನವ ಶಬ್ದ ದಿಂದ ಶ್ರುತಿಸ್ಮೃತ್ಯುಕ್ತವಾದ ಧರ್ಮವು ಅಖಿಲಮಾನವರ ಧರ್ಮವೆಂದು ಉದ್ಘೋಷಿಸಲ್ಪಟ್ಟಿರುವುದು— ಇದರಿಂದ ವೈದಿಕ ಧರ್ಮವೇ ವಿಶ್ವಧರ್ಮ ವೆಂದು ಮನುಮಹಾರಾಜನು ಪ್ರಸಿದ್ಧಪಡಿಸಿರುವನು.

ಶ್ರುತಿಸ್ತು ವೇದೋ ವಿಜ್ಞೇಯೋ ಧರ್ಮಶಾಸ್ತ್ರಂ ತು ವೈ ಸ್ಮೃತಿಃ ।
ತೇ ಸರ್ವಾರ್ಥೇಷ್ವಮೀಮಾಂಸ್ಯೇತಾಭ್ಯಾಂ ಧರ್ಮೋ ಹಿ ನಿರ್ಬಭೌ ॥
(ಮನು. ೨-೧೦)

ಶ್ರುತಿಯೇ ವೇದ. ಮನ್ವಾದಿಸ್ಮೃತಿ ಗ್ರಂಥಗಳೇ ಧರ್ಮಶಾಸ್ತ್ರ. ಈ ಶ್ರುತಿ ಸ್ಮೃತಿಗಳಿಂದಲೇ ನಿಜವಾದ ಧರ್ಮವು ಪ್ರಕಾಶಿಸಲ್ಪಡುವುದು. ಆದುದರಿಂದ, ಧರ್ಮದ ವಿಷಯದಲ್ಲಿ ತರ್ಕಿಸಬೇಕಾದರೆ ಇವುಗಳಿಗೆ ಅನುಕೂಲವಾಗಿಯೇ ತರ್ಕಿಸಬೇಕು.

## ಉತ್ಕ್ರಾಂತಿವಾದ

ಉತ್ಕ್ರಾಂತಿವಾದದ ಪ್ರಕಾರವಾಗಿಯೂ ವೇದದ ಅಪೌರುಷೇಯತ್ವವು ಸಿದ್ಧವಾಗುವುದು. ದಿನ ದಿನಕ್ಕೂ ಜಗತ್ತಿನ ಉತ್ಕ್ರಾಂತಿಯು ಆಗುತ್ತಿದೆಯೆಂದು ಈ ವಾದದ ಸಿದ್ಧಾಂತ. ಇದಕ್ಕೆ 'Theory of Evolution' ವಿಕಾಸವಾದವೆಂತಲೂ ಹೇಳುವರು. ಈ ಮತಾನುಸಾರವಾಗಿ ಹಿಂದೆ ಹಿಂದೆ ಹೋದಹಾಗೆಲ್ಲಾ ಉತ್ಕ್ರಾಂತಿಯು ಕಡಿಮೆ ಕಡಿಮೆಯಾಗಿ ಹೋಗುವಾಗ ಅಂತಹ ಹಿಂದಿನ ಕಾಲದಲ್ಲಿ ಆದ ಈ ವೇದವು ಈಗಿನ ಉತ್ಕ್ರಾಂತಿಯ ಕಾಲದಲ್ಲಿಯೂ ಇಷ್ಟೊಂದು ಆದರಣೀಯ ಮತ್ತು ಅನುಕರಣೀಯವಾಗಿ ವಿಶ್ವಮಾನ್ಯವಾಗಿರುವುದನ್ನು ನೋಡಿದರೆ, ಇದು ಖಂಡಿತ ಮನುಷ್ಯಕೃತಿಯಲ್ಲ; ಇದು ಪರಮಾತ್ಮ ಕೃತಿಯೆಂತಲೇ ಸ್ಪಷ್ಟವಾಗುವುದು.

## ಅಪಕ್ರಾಂತಿವಾದ

ಅಪಕ್ರಾಂತಿಯ ತತ್ವದಿಂದಲೂ ವೇದದ ಅಪೌರುಷೇಯತ್ವವು ಸಿದ್ಧವಾಗುವುದು. ದಿನ ಹೋದಹಾಗೆಲ್ಲಾ ಪ್ರತಿಯೊಂದು ವಸ್ತುವೂ ಮೊದಲಿಗಿಂತಲೂ ಕೊನೆಕೊನೆಗೆ ಕ್ಷೀಣ ಕ್ಷೀಣವಾಗುತ್ತ ಹೋಗುವು ದೆಂಬುದು **ಅಪಕ್ರಾಂತಿವಾದ.** ಹೀಗೆ ದಿನ ದಿನಕ್ಕೂ ಜಗತ್ತಿನ ಉತ್ಕರ್ಷ ವಾಗದೆ ಅಪಕರ್ಷವೇ ಆಗುತ್ತಾ ಹೋಗುವುದು ಎಂಬುದಾಗಿ ಈ ವಾದದ ಸಿದ್ಧಾಂತವಿದೆ.

ಈ ಸಿದ್ಧಾಂತದ ಪ್ರಕಾರ ಜಗದುತ್ಪತ್ತಿಯ ಮರುಕ್ಷಣದಿಂದಲೇ ಜಗತ್ತಿನ ಅಪಕ್ರಾಂತಿಗೆ ಪ್ರಾರಂಭವಾಗುವಲ್ಲಿ, ಅಪಕ್ರಾಂತ ಸ್ಥಿತಿಯಲ್ಲಿ ಪೂರ್ಣ ಬೋಧವನ್ನೀಯುವ ವೇದದ ಉತ್ಪತ್ತಿಯು ಆಗದೆ, ಜಗದುತ್ಪತ್ತಿಯ ಪೂರ್ವದಲ್ಲಿಯೇ ಪರಮಾತ್ಮನಿಂದಲೇ ವೇದದ ಉತ್ಪತ್ತಿ ಯಾಯಿತೆಂದು ಸಿದ್ಧವಾಗುವುದು.

ಈ ಪ್ರಕಾರವಾಗಿಯೂ ಅತಿ ಪ್ರಾಚೀನಕಾಲದಲ್ಲಿ ಆದ ವೇದವು ಮೊಟ್ಟಮೊದಲಿನ ಪರಮಾತ್ಮ ಸ್ವರೂಪವನ್ನು ಕಟ್ಟಕಡೆಗೂ ಗುರಿಮಾಡಿ ತನ್ನ ಅಪೌರುಷೇಯತ್ವವನ್ನು ತಾನಾಗಿಯೇ ಅಚ್ಚುಕಟ್ಟಾಗಿ ಸಿದ್ಧಪಡಿಸು ವುದು.

## ವೇದ ಮತ್ತು ಧರ್ಮಗ್ರಂಥಗಳ ಬಗ್ಗೆ ಪಾಶ್ಚಾತ್ಯರ ಮತ

ಈ ಸನಾತನಧರ್ಮದ ಆಧಾರಗ್ರಂಥಗಳೆಂದು ಎಣಿಸಲ್ಪಟ್ಟ ವೇದ, ಉಪನಿಷತ್ತು, ಗೀತೆ ಈ ಗ್ರಂಥಗಳನ್ನು ವಿಮರ್ಶಿಸಿ ಇವುಗಳ ಬಗ್ಗೆ ಪಾಶ್ಚಾತ್ಯ ಪಂಡಿತರಾದಿಯಾಗಿ ಇಟ್ಟುಕೊಂಡ ಆದರ ಮತ್ತು ಪೂಜ್ಯತ್ವವು ಈ ಕೆಳಗಿನ ವಾಕ್ಯಗಳಿಂದ ಎದ್ದು ಕಾಣುವುದು. ತತ್ವಜ್ಞಾನದ ಇತಿಹಾಸ ದಲ್ಲಿ ಪ್ರಸಿದ್ಧನಾದ ವಿಕ್ಟರ್‌ಕರ್ಝುನೆಂಬ ಫ್ರೆಂಚ್ ವಿದ್ವಾಂಸನು ಒಂದು ದೊಡ್ಡ ಸಭೆಯಲ್ಲಿ ಘಂಟಾಘೋಷವಾಗಿ ಒಡೆದು ಆಡಿದ ಆಂಗ್ಲ ಭಾಷಾಂತರವಿದು :—

When we read with attention in poetical, philosophical monuments of the East, above all, those of India which are beginning to spread in Europe, we discover many a truth of

truths so profound and which we make such a contrast with the meanness of the results at which European genius has sometimes stopped, that we are constrained to knee before the philosophy of the East and to see in the cradle of the human race the native land of the highest philosophy.

ಯೂರೋಪದಲ್ಲಿ ಇತ್ತೀಚೆಗೆ ಹೆಚ್ಚಾಗಿ ಹರಡುತ್ತಿರುವ ಪೌರಸ್ತ್ಯ ಆದರಲ್ಲಿಯೂ ಮುಖ್ಯವಾಗಿ ಭಾರತವರ್ಷದ ವೇದವೇದಾಂತಗಳಿಂದ ಸುಶೋಭಿತವಾದ ವಿಶಾಲ ಗ್ರಂಥ ಭಂಡಾರವನ್ನು ಸೂಕ್ಷ್ಮವಾಗಿ ಪರಾಮರ್ಶಿಸಿದರೆ ಅನೇಕಾನೇಕ ತತ್ವಗಳು ತಿಳಿಯುಬರುವುವು. ಈ ತತ್ವಗಳು ಬಹು ಉದಾತ್ತವಾಗಿರುವುವು. ಅವುಗಳನ್ನು ವಿಚಾರಿಸುವಲ್ಲಿ ಕೆಲ ಕಡೆಗೆ ಯೂರೋಪಿಯನ್ನರ ಬುದ್ಧಿಯೂ ಆಶ್ಚರ್ಯಾತಿಶಯಗಳಿಂದ ಮುಗ್ಧವಾಗಿ ಮುಂದಕ್ಕೆ ಹಾಯದೆ ಸ್ತಬ್ಧವಾಗಿ ನಿಲ್ಲುವುದು. ಹಿಂದೆ ಕೆಲವು ಪ್ರಸಂಗಗಳಲ್ಲಿ ಹೀಗೆ ಯೂರೋಪಿಯನ್ನರ ಬುದ್ಧಿಯನ್ನು ಸ್ತಬ್ಧಗೊಳಿಸಿರುವ ಕೆಲವು ಪ್ರಮೇಯಗಳು ಒದಗಿದ್ದುವು. ಆದರೆ ಅವುಗಳಿಗಿಂತಲೂ ಈ ಭಾರತೀಯ ಪ್ರಮೇಯಗಳು ಮತ್ತಷ್ಟು ಗಹನವಾಗಿಯೂ ಮಹತ್ವಪೂರ್ಣವಾಗಿಯೂ ಇರುವುವು. ಆದುದರಿಂದ ವಿಶ್ವಮಾರ್ಗದರ್ಶನವಾದ ಈ ವೈದಿಕ ವಾಙ್ಮಯದ ಭವ್ಯತೆಯ ಎದುರು ಭಾವಪರವಶತೆಯಿಂದ ಮೊಣಕಾಲುಗಳನ್ನು ಊರಿ ನಾವೆಲ್ಲರೂ ತಲೆಬಾಗಿಸಬೇಕಾಗಿಯೇ ಬರುವುದು. ತಾನು ಯಾರೆಂಬುದನ್ನು ತಿಳಿಸಿ ಎಲ್ಲರ ಮೂಲಸ್ವರೂಪದ ಸಾಕ್ಷಾತ್ಕಾರವನ್ನು ಮಾಡಿಕೊಟ್ಟು ಎಲ್ಲರನ್ನುದ್ಧರಿಸುವ ತತ್ವಜ್ಞಾನದ ಮೂಲಸ್ಥಾನವೇ ಇದಾದುದರಿಂದ ಈ ಭಾರತವರ್ಷವು ವಿಶ್ವಜನಾಂಗಕ್ಕೆ ಇದೊಂದು ಹುಟ್ಟಿದ ಮನೆಯೇ ಸರಿ.

ಮಿ. ಜಕೋಲಿಯಟ್‌ನು 'The Bible in India' ಎಂಬ ಗ್ರಂಥದಲ್ಲಿ ಸೃಷ್ಟ್ಯುತ್ಪತ್ತಿಯ ವಿಷಯವಾಗಿ ಅನೇಕ ಮತ ಮತಾಂತರಗಳ ಕಲ್ಪನೆಗಳನ್ನು ಉಲ್ಲೇಖಿಸಿ ವೈದಿಕ ವಿಚಾರದ ವಿಷಯದಲ್ಲಿ ಈ ಕೆಳಗಿನ ಉದ್ಗಾರಗಳನ್ನು ಪ್ರಕಟಿಸಿದ್ದಾನೆ.

"Astonishing fact! The Hindu revelation (Veda) is of all revelations, the only one whose ideas are in perfect harmony

with modern science as it proclaims the slow and gradual formation of the world."

ಎಲ್ಲ ಧರ್ಮಗ್ರಂಥಗಳಲ್ಲಿ ಆಧುನಿಕ ವಿಜ್ಞಾನಕ್ಕೆ ಸರಿಯಾಗಿರುವ ಗ್ರಂಥವೆಂದರೆ ಕೇವಲ ಒಂದು ಅಪೌರುಷೇಯ ವೇದವೇ ಸರಿ. ಅಂತಹ ಅತಿ ಪ್ರಾಚೀನವಾದ ಗ್ರಂಥಗಳಲ್ಲಿ ಆಧುನಿಕ ವಿಜ್ಞಾನದ ಅನುಸಾರವಾಗಿ ಕಾಲಕ್ರಮೇಣ ಜಗದುತ್ಪತ್ತಿಯನ್ನು ಹೇಳಿರುವುದಾದರೆ ಎಷ್ಟು ಆಶ್ಚರ್ಯದ ಘಟನೆಯಿದು !

ಅಮೇರಿಕದ ವ್ಹಿಲರ ವಿಲ್ಲಾಕ್ಸಳೆಂಬುವಳೂ ಸಹ ಈ ಮತವನ್ನೇ ಕೆಳಗೆ ಹೇಳಿದ ಪ್ರಕಾರ ಸಮರ್ಥಿಸಿರುವಳು :—

"We have all heard and read about the ancient religion of India. It is the land of the great Vedas, the most remarkable works, containing not only religious ideas on a perfect life, but also facts which all the science has since proved true. Electricity, Radium, Electrones, Air-ships, all seem to have been known to the Seers who found the Vedas."

ಭಾರತದ ಅತಿ ಪ್ರಾಚೀನವಾದ ವೈದಿಕಧರ್ಮದ ಬಗ್ಗೆ ನಾವು ಕೇಳಿದ್ದೇವೆ ಮತ್ತು ಓದಿದ್ದೇವೆ. ಭಾರತವು ಆ ಅತ್ಯಂತ ಮಹತ್ವಪೂರ್ಣ ಮತ್ತು ಶ್ರೇಷ್ಠವಾದ ವೇದದ ಸ್ವಂತ ಭೂಮಿಯಾಗಿದೆ. ಯಾವುದರಲ್ಲಿ ಮಾನವರ ಪೂರ್ಣವಿಕಾಸವುಳ್ಳ ಆದರ್ಶ ಜೀವನದ ಬಗ್ಗೆಯೇ ಕೇವಲ ಒಂದು ಧಾರ್ಮಿಕ ತತ್ವಗಳ ನಿರೂಪಣವಿರದೆ, ಅಂತಂತಹ ತತ್ವಗಳ ಸತ್ಯತ್ವದ ನಿರೂಪಣವೂ ಇದೆ. ಆ ತತ್ವಗಳನ್ನು ಆಧುನಿಕ ವೈಜ್ಞಾನಿಕರು ಸಹ ಸತ್ಯವೆಂದು ನಂಬಿರುವರು. ವೇದದ್ರಷ್ಟೃ ಋಷಿಗಳಿಗೆ ವಿದ್ಯುತ್, ರೇಡಿಯಂ, ಎಲೆಕ್ಟ್ರಾನ್ ಮತ್ತು ವಿಮಾನಗಳ ಎಲ್ಲಾ ಜ್ಞಾನವಿತ್ತೆಂದು ತೋರಿಬರುತ್ತದೆ. ಆಧುನಿಕ ವಿಜ್ಞಾನ ಶಾಸ್ತ್ರವು ವೇದಸಿದ್ಧಾಂತದ ಅನುಕರಣವೇ ಸರಿ.

ಕಲ್ಕತ್ತೆಯ ಸಂಸ್ಕೃತ ಕಾಲೇಜಿನ ಪ್ರಾಧ್ಯಾಪಕರಾದ ಆಚಾರ್ಯ ಸತ್ಯವ್ರತಜೀಯವರು ವೇದದ ಸಂಬಂಧವಾಗಿ ಬಹಳ ದುಡಿದವರು. ವೈದಿಕ ಸಾಹಿತ್ಯವೇ ಇವರು ಕಲಿಸುವ ವಿಷಯವಾಗಿತ್ತು.

ಪೌರಸ್ತ್ಯ ಮತ್ತು ಪಾಶ್ಚಾತ್ಯ ವೈದಿಕ ವಿದ್ವಾಂಸರಲ್ಲಿ ಇವರು ಓರ್ವ ಗಣ್ಯ ವಿದ್ವಾಂಸರು. ಇವರ ತ್ರಯೀ ಚತುಷ್ಟಯ, ತ್ರಯೀ ಪರಿಚಯ, ನಿರುಕ್ತಾಲೋಚನ, ಐತರೇಯಾಲೋಚನ ಇತ್ಯಾದಿ ಗ್ರಂಥಗಳು ಪ್ರಸಿದ್ಧವಾಗಿರುವುವು. ಇವರು ತಮ್ಮ ತ್ರಯೀ ಚತುಷ್ಟಯ ಎಂಬ ಸಂಗ್ರಹ ಗ್ರಂಥದಲ್ಲಿ ವೇದಗಳ ಭಾಷ್ಯಕಾರರ ವಿಷಯದಲ್ಲಿ ತಮ್ಮ ಮತವನ್ನು ಕೊಡುವ ಸಂದರ್ಭದಲ್ಲಿ ಈ ಕೆಳಗಿನಂತೆ ಬರೆದಿರುವರು :—

"When the 'Trayee Sangrah' was being compiled the impression grew upon me that the real meaning of many Mantras did not come out in Sayaṇa's commentary, and the desire became strong in me to publish the interpretation of Yāska and other old expositors of the Veda. At a time when photography, phonography, gaslight, telegraph, the telephone, railway and balloons had not been introduced into the country, how could our people understand any Verses referring to these things? Our opinion is that, in Vedic times, our country had made extraordinary progress. In those days the sciences of Geology, Astronomy and Chemistry were called, '*Adhidaivika Vidya*' and those of physiology, psychology and theology, '*Adhyatma Vidya*.'"

"Though the works embodying the scientific knowledge of those times are entirely lost, there are sufficient indications in Vedic works of those sciences having been widely known in those days."

(ಆಚಾರ್ಯ ಸತ್ಯವ್ರತಜೀ).

ತ್ರಯೀ ಸಂಗ್ರಹ ಎಂಬ ಗ್ರಂಥಕ್ಕಾಗಿ ಪರಿಶೀಲನ ನಡೆಯುತ್ತಿರುವಾಗ ಸಾಯಣ ಭಾಷ್ಯದಲ್ಲಿ ಎಷ್ಟೋ ಮಂತ್ರಗಳ ಯಥಾರ್ಥಭಾವವು ಪ್ರಕಟವಾಗದೆಂದು ನನ್ನ ಗಮನಕ್ಕೆ ಬಂತು. ಯಾಸ್ಕಾದಿ ಅನ್ಯ ಪ್ರಾಚೀನ ಭಾಷ್ಯಕಾರರ ಭಾವಾರ್ಥಗಳನ್ನು ಉದಾಹರಿಸಬೇಕೆಂದು ನನಗೆ ಬಲವಾಗಿ ಇಚ್ಛೆ ಉಂಟಾಯಿತು. ವೈದಿಕ ಕಾಲದಲ್ಲಿ ಫೋಟೋಗ್ರಫಿ, ಫೋನೋಗ್ರಫಿ, ಗ್ಯಾಸ್ ಲೈಟು, ಟೆಲಿಗ್ರಾಫ್, ಟೆಲಿಫೋನ್, ರೈಲ್ವೆ, ಬಲೂನ್ಸ್ ಇತ್ಯಾದಿಗಳ ಪ್ರಚಾರವಿರದಿದ್ದರೆ ಇವುಗಳ ಸಂಕೇತಗಳಿಂದ ಕೂಡಿರುವ ಆಯಾಯ

ಮಂತ್ರಗಳ ರಹಸ್ಯವನ್ನು ವೇದಭಾಷ್ಯಕಾರರು ಹೇಗೆ ತಾನೆ ಮನಗೊಳ್ಳು ವರು. ವೈದಿಕ ಕಾಲದಲ್ಲಿ ನಮ್ಮ ಭಾರತವರ್ಷವು ಭೌತಿಕ ಶಾಸ್ತ್ರದಲ್ಲಿಯೂ ಅಸಾಧಾರಣ ಪ್ರಗತಿಯನ್ನು ಹೊಂದಿತ್ತೆಂದು ನಮ್ಮ ಮತವಿದೆ. ಆ ಕಾಲ ದಲ್ಲಿ ಭೂಗರ್ಭ, ಜ್ಯೋತಿಷ್ಯ ಮತ್ತು ರಸಾಯನಿಕ ಶಾಸ್ತ್ರಗಳು ಆಧಿದೈವಿಕ ವಿದ್ಯೆಗಳೆಂದು ಹೇಳಿಸಿಕೊಳ್ಳುತ್ತಿದ್ದವು ಮತ್ತು ಶರೀರಶಾಸ್ತ್ರ, ಮನೋ ವಿಜ್ಞಾನ, ಬ್ರಹ್ಮವಿಜ್ಞಾನ ಅಧ್ಯಾತ್ಮ ವಿದ್ಯೆ ಎಂದು ಹೇಳಿಸಿಕೊಳ್ಳುತ್ತಿತ್ತು. ವೈದಿಕಕಾಲದ ವೈಜ್ಞಾನಿಕ ಗ್ರಂಥಗಳು ಈಗ ಪ್ರಕಟವಾಗಿರದಿದ್ದರೂ ವೇದ ಗಳಲ್ಲಿ ವೈಜ್ಞಾನಿಕ ಶೋಧಗಳ ಸಾಕಷ್ಟು ನಿರ್ದೇಶಗಳು ಗೋಚರವಾಗು ವುವು. ವೈದಿಕ ಕಾಲದಲ್ಲಿಯೂ ವೈಜ್ಞಾನಿಕ ಪ್ರಚಾರವು ತುಂಬಾ ಇತ್ತೆಂದು ಇವುಗಳ ಮೂಲಕವಾಗಿ ಖಂಡಿತವಾಗುವುದು.

ಜರ್ಮನಿ ದೇಶದ ತತ್ವವೇತ್ತನಾದ ಶೋಫನ್ಹೋರನು ವೈದಿಕ ವಾಙ್ಮಯವನ್ನು ಕುರಿತು ಹೇಳಿರುವುದನ್ನು ಸಹ ವಿಚಾರಿಸೋಣ. ಪರರ ಹೊಗಳಿಕೆಯನ್ನು ನೋಡಿ ನಮ್ಮಲ್ಲಿದ್ದ ಶ್ರದ್ಧೆಯು ಇಮ್ಮಡಿ ಮುಮ್ಮಡಿ ಯಾಗಿ ಬೆಳೆಯಬೇಕೆಂಬ ಒಂದು ಉದ್ದೇಶವಲ್ಲದೆ ಭಾರತವಾಸಿಯರಾದ ಆ ಧರ್ಮೋಪದೇಶಕರಿಗೂ ಅವರ ಸನ್ಮಾನ್ಯ ಪಂಡಿತರ ವಿಚಾರ ತಿಳಿಯ ಬೇಕೆಂಬ ಉದ್ದೇಶದಿಂದಲೂ ಈ ಉದ್ಧರಣಗಳನ್ನು ಇಲ್ಲಿ ಇಷ್ಟು ವಿಸ್ತಾರ ವಾಗಿ ಕೊಡಲಾಗಿರುವುದು. ಪಾಶ್ಚಾತ್ಯ ಪಂಡಿತರ ವಿಮರ್ಶನೆಯಲ್ಲಿ ಶ್ರದ್ಧೆ ಯುಳ್ಳ ಜನರಿಗೂ ಇದರಿಂದ ಮಾರ್ಗದರ್ಶನವಾಗಬೇಕೆಂತಲೂ ಇದರಲ್ಲಿ ಒಂದು ಉದ್ದೇಶವಿದೆ.

"In the whole world there is no study so beneficient and so elevating as that of the Upanishads. It has been the solace of my life and it will be the solace of my death."

ಮನುಷ್ಯರ ಮನೋಭೂಮಿಕೆಯನ್ನು ಪರಾಕಾಷ್ಠೆಯ ಉನ್ನತ ಮಟ್ಟಕ್ಕೆ ಮುಟ್ಟಿಸಿ, ಮಾನವ ಜಾತಿಯ ಮೇಲೆ ಒಂದು ಮಹದುಪಕಾರ ವನ್ನು ಮಾಡುವದು ಉಪನಿಷತ್ತಿನ ಅಭ್ಯಾಸದ ಹೊರತು ಇಡೀ ಜಗತ್ತಿನಲ್ಲಿ ಇನ್ನೊಂದಿಲ್ಲ. ಇದೇ ನನ್ನ ಜೀವನದ ಸಮಾಧಾನ. ಇದರ ಆಶ್ರಯ ದಿಂದಲೇ ನಾನಿಷ್ಟು ಸುಖಸಮಾಧಾನದ ಜೀವನವನ್ನು ಸಾಗಿಸುತ್ತಿದ್ದೇನೆ.

ಇದರ ಆಶ್ರಯದಲ್ಲಿಯೇ ಕೊನೆಯಲ್ಲಿ ನಾನು ನಿರವಧಿ ಶಾಂತಿ ಸಮಾಧಾನಗಳಿಂದ ದೇಹತ್ಯಾಗವನ್ನು ಮಾಡುವೆನು.

ಪ್ರೊಫೆಸರ್ ಮ್ಯಾಕ್ಸಮುಲ್ಲರ್‌ರನು ಶೋಫನ್ಹೋರನ ವಿಧಾನಕ್ಕೆ ತನ್ನ ಒಪ್ಪಿಗೆಯ ರುಜು ಹಾಕಿ ಇದನ್ನೇ ಮತ್ತಿಷ್ಟು ಬಲವಾಗಿ ಮಂಡಿಸಿರುವನು.

"If those words of Schopenhauer required any endorsement, I should willingly give it as the result of my own experience during the long life devoted to the study of many philosophies and religions. If philosophy is meant to be a preparation for death, I know of no better preparation for it than the Vedic philosophy."

ಶೋಫನ್ಹೋರನ ಮೇಲ್ಕಂಡ ವಿಧಾನಕ್ಕೆ ಅನುಮೋದನವೇನಾದರೂ ಬೇಕಾದರೆ ಅದನ್ನು ನಾನು ಆನಂದದಿಂದ ಕೊಡಲು ಸಿದ್ಧನಾಗಿದ್ದೇನೆ. ಜಗತ್ತಿನ ಧರ್ಮ ಮತ್ತು ತತ್ವಜ್ಞಾನಗಳ ಸ್ವಾನುಭವ ಅಭ್ಯಾಸಕ್ಕೆ ಮೀಸಲಾಗಿ ಬಿಟ್ಟ ನನ್ನ ಇಡೀ ದೀರ್ಘಾಯುಷ್ಯದ ಅನುಭವವೇ ಇದಕ್ಕೆ ಸಾಕ್ಷಿ. ಆತ್ಮತೃಪ್ತಿಯಿಂದ ಸಕಾಲದಲ್ಲಿ ಮರಣವನ್ನು ಸ್ವಾಗತಿಸಲು ಬೇಕಾದ ಸಿದ್ಧತೆಗೆ ತತ್ವಜ್ಞಾನದ ಅಭ್ಯಾಸವೇ ಕಾರಣವಾದುದೆಂದಾದರೆ ಆದು ವೈದಿಕ ತತ್ವಜ್ಞಾನ ಒಂದೇ ಹೊರತು ಅನ್ಯವಾದುದನ್ನು ನಾನು ಅರಿಯೆನು. ಜಗತ್ತಿನಲ್ಲಿ ಯಾವಾತನು ವೈದಿಕ ವಾಙ್ಮಯದ ಮೇಲೆ ವಿಶ್ವಾಸವನ್ನಿಡುವುದಿಲ್ಲವೋ ಆತನ ಮನಃಚಕ್ಷುಗಳಿಗೆ ಈ ಪಾಶ್ಚಾತ್ಯ ಪಂಡಿತರ ಅನುಭಾವಿಕ ವಾಕ್ಯಗಳು ಅಂಜನವಾಗಿ ಪರಿಣಮಿಸಲಿ. ವಿದೇಶ ವಿಧರ್ಮಿಗಳೆನಿಸಿರುವ ಜನರೇ ವೇದಪ್ರಾಮಾಣ್ಯವನ್ನು ಇಷ್ಟು ಶಿರಸಾ ವಹಿಸುವರೆಂದಾದರೆ, ಏತದ್ಧರ್ಮೀಯ ಮತ್ತು ಏತದ್ದೇಶೀಯರಾದ ಜನರು ಎಷ್ಟರಮಟ್ಟಿಗೆ ವೇದದ ಪ್ರಾಮಾಣ್ಯವನ್ನು ಇಟ್ಟುಕೊಳ್ಳಬೇಕಾದದ್ದು! ಪಾಶ್ಚಾತ್ಯ ಪಂಡಿತರ ಇವೇ ಮೊದಲಾದ ವಾಕ್ಯಗಳು ವೇದದ ಅಪಾರ ಯಶಃಕೀರ್ತಿಯ ಡಿಂಡಿಮವಾಗಿರುವುದರಲ್ಲಿ ಸಂದೇಹವಿಲ್ಲ.

ವೇದ ಮತ್ತು ಉಪನಿಷತ್ತುಗಳ ವಿಷಯದಲ್ಲಿ ಪಾಶ್ಚಾತ್ಯ ಪಂಡಿತರ ಅನುಭವದ ನುಡಿಯನ್ನು ನಿರೀಕ್ಷಿಸಿದ್ದೇವೆ. ಈಗ ಗೀತೆಯ ಪಾಯದಲ್ಲಿರುವ ಅವರ ಅನುಭವದ ಕಡೆಗೆ ಗಮನಕೊಡೋಣ.

"The most beautiful perhaps properly the only true philosophical song that exists in any known tongue."

ಇದು ಹಂಬೊಲ್ಸ್‌ನ ವಾಕ್ಯವು. ಜಗತ್ತಿನ ಗಣ್ಯವಾದ ಭಾಷೆಗಳಲ್ಲಿರುವ ತಾತ್ವಿಕಗೀತಾ ಗ್ರಂಥಗಳಲ್ಲಿ ಗೀತೆಯಷ್ಟು ಸರ್ವಾಂಗಪೂರ್ಣವಾದ ಸುಂದರ ಗ್ರಂಥವು ಇನ್ನೊಂದಿಲ್ಲ.

"There is in it a sublimity of conception, reasoning and diction almost unequalled." (Warren Hastings)

ಬಹು ಗಂಭೀರವಾದ ವಿಚಾರಸರಣಿ, ಮನ ಒಪ್ಪುವ ಸಯುಕ್ತಿಕ ಸಕಾರಣ ವಿವೇಚನೆ ಮತ್ತು ತಾಲ-ಲಯಬದ್ಧ ಛಂದಸ್ಸು ಮುಂತಾದವುಗಳಿಂದ ವಿಶ್ವಗ್ರಂಥಗಳಲ್ಲಿಯೇ ಗೀತೆಯು ಅಸದೃಶವಾದುದು.

ಒಂದು ಘಟನೆಯು ನೆನಪಿಗೆ ಬಂದಿತು. ಪ್ರಸಿದ್ಧ ಜರ್ಮನ್ ಕವಿಯಾದ ಇಮರ್ಸನ್ನನು ದರ್ಶನಕ್ಕೆ ಹೋದಾಗ ವೃಕ್ಷದಡಿಯಲ್ಲಿ ಒಂದು ಜೀರ್ಣ ಮಂಚದ ಮೇಲೆ ಅತಿ ನಿರ್ಭಯನಾಗಿ ನಿತಾಂತ ಸುಖಶಾಂತಿಯಿಂದ ಕುಳಿತಿದ್ದ ಥೋರೋನನ್ನು ಕಂಡನು. ಆತನ ಮಂಚದ ಕೆಳಗೆ ಸರ್ಪಗಳು ಸುಖವಾಗಿ ಓಡಾಡಿಕೊಂಡಿದ್ದವು. ಆ ದೃಶ್ಯವು ಇಮರ್ಸನ್ನನಿಗೆ ಬೆರಗನ್ನುಂಟುಮಾಡಿತು. ಥೋರೋವಿಗೆ ಸ್ವಲ್ಪವೂ ಭೀತಿಯಾಗದಿದ್ದದ್ದನ್ನು ಕಂಡು ಆಶ್ಚರ್ಯದಿಂದ ಇದರ ರಹಸ್ಯವನ್ನು ತಿಳಿಯಲು 'ಮಹಾತ್ಮರೇ! ನಿಮಗೆ ಈ ಹಾವುಗಳ ಭೀತಿಯು ಯಾವುದರಿಂದ ನಷ್ಟವಾಯಿತೆಂದು' ಪ್ರಶ್ನಿಸಿದನು. ಆಗ್ಗೆ "Where is fear when Mother Gita is there to protect me" "ತನ್ನ ಮಗ್ಗುಲಲ್ಲಿ ಸುಖವಾಗಿ ಪವಡಿಸಿದ ಬಾಲಕನಾದ ನನ್ನನ್ನು ಈ ಗೀತಾಮಾತೆಯು ಯಾವಾಗಲೂ ರಕ್ಷಿಸುತ್ತಿರುವಾಗ ನನಗೆ ಭೀತಿಯು ಎಲ್ಲಿಂದ ತಾನೆ ಬರಬೇಕೆಂದು" ಹೇಳಿ, ತಲೆದಿಂಬಿನಡಿಯಲ್ಲಿದ್ದ ಗೀತೆಯನ್ನು ತೋರಿಸಿ ಭಗವಂತನ ಆ ವಾಙ್ಮಯಮೂರ್ತಿಯನ್ನು ಪ್ರೇಮಾಶ್ರುಗಳಿಂದ ಅಭಿಷೇಕಿಸಿದನು. ಗೀತೆಯ ಅಭ್ಯಾಸದಿಂದ ಪಾಶ್ಚಾತ್ಯರೂ ಸಹ ಇಂಥ ಭಾಗ್ಯವನ್ನು ಪಡೆಯುವರೆಂದಾದಲ್ಲಿ ಭಾರತೀಯರಿಗಾಗಿ ಮತ್ತೇನು ಗೀತೆಯ ಮಹತ್ವವನ್ನು ತಿಳಿಸುವುದು ಉಳಿಯಿತು?

## ವೇದವೇದ್ಯ ಪರಮಾತ್ಮ

"ನಾವೇದವಿನ್ಮನುತೇ ತಂ ಬೃಹನ್ತಮ್ ।" (ಯ. ಬ್ರಾ.) ಆ ವಿಶಾಲ ಪರಮಾತ್ಮತತ್ವವನ್ನು ವೇದವನ್ನರಿಯದವನು ತಿಳಿಯನು. ಈ ಮಂತ್ರದ ಆಧಾರದಿಂದ ಪರಮಾತ್ಮತತ್ವವನ್ನು ತಿಳಿಯಲು ವೇದ ಜ್ಞಾನವು ಅವಶ್ಯಕವಾಗಿ, ಪರಮಾತ್ಮತತ್ವವನ್ನು ತಿಳಿಯಪಡಿಸುವುದೇ ವೇದವೆಂದು ಸಿದ್ಧವಾಗುವುದು. ಜಗದಾದಿಯಲ್ಲಿರುವ ಪರಮಾತ್ಮನು ತನ್ನ ತತ್ವವನ್ನು ತಿಳಿಸಬೇಕಾದರೆ ತಾನೇ ತನ್ನ ಶ್ರೀಮುಖದಿಂದ ತಿಳಿಯ ಪಡಿಸಬೇಕಲ್ಲದೆ ಇದು ಮತ್ತಾರಿಂದ ಸಾಧ್ಯ? ಈ ದೃಷ್ಟಿಯಿಂದಲೂ ತನ್ನ ಸ್ವರೂಪವನ್ನೂ ಅದರ ಪ್ರಾಪ್ತಿಗಾಗಿ ಇರುವ ಸಾಧನಗಳನ್ನೂ ಸರ್ವ ಪ್ರಥಮವಾದ ಜನರಿಗೆ ಪರಮಾತ್ಮನೇ ಯಾವ ವಾಣಿಯಿಂದ ತಿಳಿಸಿದನೋ ಅದೇ ವೇದವೆಂದು 'ವಾಗ್ವಿವೃತಾಶ್ಚ ವೇದಾಃ' (ಮುಂಡಕ) ಎಂಬುವುದರ ಅರ್ಥ.

## ಋಗ್ವೇದದಲ್ಲಿ ಪರಮಾತ್ಮ ಸೃಷ್ಟಿ ಕ್ರಮದ ವರ್ಣನೆ

ಋಗ್ಯಜುಸ್ಸಾಮಾಥರ್ವ ಎಂಬೀ ನಾಲ್ಕು ವೇದಗಳಲ್ಲಿ ಪ್ರಥಮ ಋಗ್ವೇದವೇ ಸರಿ. (ಅಂತಹ) ಆಧುನಿಕ ಮತದ ಪ್ರಕಾರವಾಗಿಯೂ ಅತಿ ಪ್ರಾಚೀನವಾಗಿರುವ ಋಗ್ವೇದದ ನಾಸದೀಯ ಸೂಕ್ತದಲ್ಲಿ ಸೃಷ್ಟಿಯ ರಚನೆಯ ವರ್ಣನೆಯೂ, ಸೃಷ್ಟಿಯ ಪೂರ್ವದಲ್ಲಿರುವ ಪರಮಾತ್ಮ ಸ್ವರೂಪದ ವರ್ಣನೆಯೂ ಬಂದಿರುವುದು. ಸೃಷ್ಟಿರಚನೆಯ ವರ್ಣನೆ ಮತ್ತು ಸೃಷ್ಟಿಯ ಪೂರ್ವಸ್ವರೂಪದ ವರ್ಣನೆಯನ್ನು ಪರಮಾತ್ಮನೊಬ್ಬ ನಲ್ಲದೇ ಮತ್ತಾರು ತಿಳಿಯಪಡಿಸಲು ಸಮರ್ಥರು? ಈ ವಿಚಾರದಿಂದಲೂ ಪರಮಾತ್ಮ ಪ್ರಣೀತ ವೇದವೆಂತಲೇ ಸಿದ್ಧವಾಗುವುದು.

ಆ ನಾಸದೀಯ ಸೂಕ್ತದ ತತ್ವವನ್ನು ತಿಳಿಯೋಣ!

## ಋಗ್ವೇದ ನಾಸದೀಯ ಸೂಕ್ತ
(೧೦-೧೨೯-೧-೭)

ನಾಸದಾಸೀನ್ನೋ ಸದಾ ಸೀತ್ತದಾನೀಂ
ನಾಸೀದ್ರಜೋ ನೋ ವ್ಯೋಮಾ ಪರೋ ಯತ್ ।
ಕಿಮಾವರೀವಃ ಕುಹ ಕಸ್ಯ ಶರ್ಮನ್ನಂಭಃ
ಕಿಮಾಸೀದ್ ಗಹನಂ ಗಭೀರಮ್ ॥

ಸೃಷ್ಟಿಯ ಆದಿಯಲ್ಲಿ ಇನ್ನೊಂದಿರದೆ ತಾನೇ ತಾನಾಗಿ ಒಬ್ಬನೇ ಒಬ್ಬ ಪರಮಾತ್ಮನಿದ್ದನು. ಆಗ್ಗೆ ವ್ಯಕ್ತವಾಗಿಯೂ ಅವ್ಯಕ್ತವಾಗಿಯೂ ಈ ಜಗತ್ತು ಇರಲಿಲ್ಲ. ಈ ಜಗತ್ತಿನ ಸುಳಿವೂ ಆಗ್ಯೆ ಇರಲಿಲ್ಲ. ಸತ್ವ ರಜಸ್ತಮೋಗುಣಗಳ ಪೈಕಿ ಯಾವ ಗುಣವೂ ಅಲ್ಲಿ ಕಾಣಿಸಿದ್ದಿಲ್ಲ. ಆಕಾಶಾದಿ ಪಂಚ ಭೂತಗಳು ಅಲ್ಲಿ ಇರಲಿಲ್ಲ. ಆ ಪರಮಾತ್ಮನ ತತ್ವವು ಈ ಎಲ್ಲದರ ಪರಿಶುದ್ಧವಾದ, ಸರ್ವ ವಿರಹಿತ, ಸರ್ವ ಪ್ರಥಮವಾಗಿರುವ, ಸರ್ವಾತಿಶಯ ಸ್ವರೂಪವು ಇನ್ನೂ ಯಾವುದರ ಉತ್ಪತ್ತಿಯೂ ಆಗದಿರುವಾಗ ಒಂದೇ ಒಂದು ಪರಮಾತ್ಮತತ್ವವು ತನ್ನ ಸ್ವರೂಪದಲ್ಲಿ ತಾನೇ ಕಿಕ್ಕಿರಿದು ತುಂಬಿರುವಾಗ ಅಲ್ಲಿ ಮತ್ತೊಂದೆಲ್ಲಿತ್ತು? ಅಲ್ಲಿ ಯಾರು ಯಾವುದರಿಂದ ಏತಕ್ಕಾಗಿ ಯಾರನ್ನು ಆವರಿಸುವರು? ತನ್ನ ಆನಂದ ಘನಸ್ವರೂಪದಿಂದ ತನ್ನಿಷ್ಟಕ್ಕೆ ತಾನೇ ಇಲ್ಲಿ ಒಬ್ಬ ಪರಮಾತ್ಮನೇ ಇರುವಾಗ, ಯಾವುದನ್ನು ಕುರಿತು, ಯಾರ ಹಿತಕ್ಕಾಗಿ, ಯಾರಿಗೆ ಸುಖವಾಗಬೇಕೆಂದು ಯಾವುದು ತಾನೇ ಏನಾಯಿತು? ಅಲ್ಲಿ ಮಾಯೆಗಾದರೂ ಅವಕಾಶವಿದೆಯೆ? ಜಗತ್ತೂ ಮತ್ತು ಜಗತ್ಪ್ರಳಯವೂ ಅಲ್ಲಿ ಆಗದಿರುವಾಗ ಜಗತ್ಪ್ರಳಯದಲ್ಲಿರುವ ಆ ಅಗಾಧ ಗಂಭೀರ ಏಕಾರ್ಣವ ಜಲವೂ ಸಹ ಅಲ್ಲಿ ಇರಬಲ್ಲುದೇ?

> ನ ಮೃತ್ಯು ರಾಸೀದಮೃತಂ ನ ತರ್ಹಿ
> ನ ರಾತ್ರ್ಯಾ ಅಹ್ನ ಆಸೀತ್ಪ್ರಕೇತಃ ।
> ಆನೀದವಾತಂ ಸ್ವಧಯಾ ತದೇಕಂ
> ತಸ್ಮಾದ್ಧಾನ್ಯನ್ನ ಪರಃ ಕಿಂಚನಾಸ ॥

ಅಲ್ಲಿ ಆಗ ಮೃತ್ಯುವೂ ಇರಲಿಲ್ಲ. ಮೃತ್ಯುಸಾಪೇಕ್ಷವಾದ ಅಮೃತತ್ವವೂ ಇರಲಿಲ್ಲ. ರಾತ್ರಿಯೂ ಇದ್ದಿಲ್ಲ. ಹಗಲೂ ಇದ್ದಿಲ್ಲ. ಇವುಗಳನ್ನು ತಿಳಿಯಪಡಿಸುವ ಯಾವ ಸೂರ್ಯ ಚಂದ್ರಾದಿ ಸಾಧನಗಳೂ ಇರಲಿಲ್ಲ. ಆಗ್ಗೆ ಇದ್ದದ್ದೆಲ್ಲಾ ಅದೊಂದೇ ಪರಮಾತ್ಮತತ್ವವು ತಾನೇ ತಾನಾಗಿತ್ತು. ಸೃಷ್ಟಿಯಲ್ಲಿ ವಾಯುವಿನ ಶ್ವಾಸೋಚ್ಛ್ವಾಸಗಳಿಂದ ಪ್ರಾಣಿಗಳು ಜೀವಿಸಿದಂತೆ ಅಲ್ಲಿ ಆಗ ಆ ಪರಮಾತ್ಮನ ಸ್ವರೂಪವು ಯಾವ ಅನ್ಯವಾದ ವಾಯುವಿನ ಶ್ವಾಸೋಚ್ಛ್ವಾಸಗಳಿಂದ ಜೀವಿಸಿದ್ದಿಲ್ಲ. ಸ್ಪಂದವಿಲ್ಲದೇ ಅದು

ಒಂದೇ ಒಂದು ಘನವಾಗಿ ತುಂಬಿಕೊಂಡಿತ್ತು. ಆ ಆನಂದಸ್ವರೂಪಕ್ಕಿಂತಲೂ ಹೊರತಾದ ಯಾವುದೊಂದೂ ಆಗ ಇರಲಿಲ್ಲ.

ತಮ ಆಸೀತ್ತಮಸಾ ಗೂಳ್ಹಮಗ್ರೇ-
ಽಪ್ರಕೇತಂ ಸಲಿಲಂ ಸರ್ವಮಾ ಇದಮ್ ।
ತುಚ್ಛ್ಯೇನಾಭ್ವಪಿಹಿತಂ ಯದಾಸೀತ್
ತಪಸಸ್ತನ್ಮಹಿನಾಜಾಯತೈಕಮ್ ॥

ಜಗದಾದಿಯ ಸ್ಥಿತಿಯನ್ನು ಹೇಳಿ ಜಗನ್ನಿರ್ವಾಹಕವಾದ ಕಾರ್ಯಕಾರಣ ಭಾವಗಳನ್ನು ಈಗ ಶ್ರುತಿಯು ತಿಳಿಸುವುದು. ಪರಮಾತ್ಮಸ್ವರೂಪದ ಆವರಣವಿಶೇಷವೇ ಅಥವಾ ಅಜ್ಞಾನವಿಶೇಷವೇ ಈ ಎಲ್ಲಾ ಜಗತ್ತಿಗೆ ಕಾರಣ. ಈ ಅಜ್ಞಾನರೂಪವಾಗಿರುವ ಅಥವಾ ಈ ಆವರಣರೂಪವಾಗಿರುವ ತಮಸ್ಸು ಈ ಜಗತ್ತಿನ ಆವಿರ್ಭಾವದ ಮೊದಲು ಇತ್ತು. ಈ ಜಗತ್ತೂ ಅದರಲ್ಲೇ ಅಡಗಿಕೊಂಡಿತ್ತು. ಈ ಆವರಣವೇ ಪ್ರಕೃತಿ ಅಥವಾ ಮಾಯಾಸ್ವರೂಪ. ಸೂರ್ಯನಿಂದ ಆದ ಮೋಡವು ಸೂರ್ಯನನ್ನು ಅಡ್ಡಕಟ್ಟಿದಂತೆ ಹೇಗೆ ಕಾಣುವುದೋ ಅಂತೆಯೇ ಆ ಪರಮಾತ್ಮಸ್ವರೂಪದಿಂದ ಆದ ಈ ಮಾಯೆಯು ಪರಮಾತ್ಮನ ಸ್ವರೂಪವನ್ನು ಅಡ್ಡಕಟ್ಟುವಂತೆ (ಆಚ್ಛಾದಿಸಿದಂತೆ) ಕಂಡುಬರುವುದು. ಆವರಣ ಅಥವಾ ಅಜ್ಞಾನ ಎಂದು ಹೇಳಿಸಿಕೊಳ್ಳುವುದು. ಕಪ್ಪು ಮೋಡದಲ್ಲಿ ಕಂಡುಬರುವಂಥ ಸೂರ್ಯನ ಪ್ರಕಾಶವು ಕಪ್ಪುಮೋಡದಿಂದ ಆವೃತವಾಗಿ ಮಳೆಯನ್ನು ಬೀಳಿಸುವಂತೆ ಕಂಡುಬರುವ ಹಾಗೆ ಮಾಯೆಯಲ್ಲಿ ಕಂಡುಬರುವ ಪರಮಾತ್ಮ ಪ್ರಕಾಶವೇ (ಹಾಗೆ) ಜಗತ್ತಿಗೆ ತನ್ನ ಸಂಕಲ್ಪಮೂಲಕವಾಗಿ ಕಾರಣವಾಗುವುದೆಂಬುದಾಗಿ ಕಂಡುಬರುವುದು. ಹೀಗೆ ಮಾಯಾರೂಪವಾದ ತುಚ್ಛದಿಂದ. ಎಂದರೆ ಅನಿರ್ವಚನೀಯುವಾದ ತುಚ್ಛ ಮಾಯೆಯಿಂದ ಆವರಿಸಿಕೊಂಡಿರುವ ಯಾವ ಈಶ್ವರ (ಬ್ರಹ್ಮಪ್ರಕಾಶ) ಎಂಬ ಹೆಸರು ಪಡೆದ ಆ ಬ್ರಹ್ಮಪ್ರಕಾಶವು ಮಾಯೆಯೆಂಬ ಉಪಾಧಿ ಮೂಲಕವಾಗಿ ಜಗತ್ತನ್ನು ಸೃಜಿಸುವ ತಾನು ಬಹುವಾಗಬೇಕೆಂಬ ಸಂಕಲ್ಪದಿಂದ ತಾನೇ ಅದೊಂದೇ ತನ್ನ ಅನಂತಮಹಿಮೆಯಿಂದ ಜಗತ್ತಿನ ರೂಪವನ್ನು ಧರಿಸಿತು.

ಯಾವುದಾದರೊಂದು ಕಾರ್ಯವಾಗಬೇಕಾದರೆ ಆಯಾ ಪ್ರಾಣಿಗಳಲ್ಲಿರುವ ಶಕ್ತಿಯ ಮೂಲಕವಾಗಿ ಆಯಾ ಕಾರ್ಯದ ಒಂದು ಸಂಕಲ್ಪದಿಂದ ಆಗುವುದು. ಅಂತೆಯೇ ಆದ ಈ ಜಗತ್ಕಾರ್ಯವೂ ಕೂಡ ಪರಮಾತ್ಮನ ಶಕ್ತಿಯ ಮೂಲಕ ಇದರ ಸಂಕಲ್ಪದಿಂದ ಆಗಿರುವುದು.

ಕಾಮಸ್ತದಗ್ರೇ ಸಮವರ್ತತಾಧಿ
ಮನಸೋ ರೇತಃ ಪ್ರಥಮಂ ಯದಾಸೀತ್ ।
ಸತೋ ಬಂಧುಮಸತಿ ನಿರವಿನ್ದನ್
ಹೃದಿ ಪ್ರತೀಷ್ಯಾ ಕವಯೋ ಮನೀಷಾ ॥

'ಸಂಕಲ್ಪಾತ್ಮಕಂ ಮನಃ' ಸಂಕಲ್ಪಾತ್ಮಕವೇ ಮನಸ್ಸು, 'ಸಂಕಲ್ಪೋ ವಿವಿಧಃ ಕರ್ತಾ' ಸಂಕಲ್ಪವೇ ವಿವಿಧ ಮಾಡುವುದು. ಈ ದೃಷ್ಟಿಯಿಂದ ಕಾರ್ಯಕ್ಕೆ ಪ್ರತ್ಯಕ್ಷ ಕಾರಣವಾಗುವ ಸಂಕಲ್ಪಕ್ಕೆ ಮನಸ್ಸೇ ಪ್ರಧಾನ; ಸಂಕಲ್ಪವು ವಾಸನೆಯಿಂದ ಅಗುವುದು. ವಾಸನಾ ಎಂದರೆ ಪೂರ್ವ ಸಂಸ್ಕಾರದಿಂದ ಆಗುವ ಇಚ್ಛೆ. 'ವಾಸನಾತ್ಮಕಂ ಮನಃ' ವಾಸನಾರೂಪವೇ ಮನಸ್ಸು, ಇಂಥಾ ವಾಸನಾರೂಪವಾದ ಮನಸ್ಸಿನಿಂದಲೇ ಸಂಕಲ್ಪವು ಉಂಟಾಗುವುದು. ಈ ವಾಸನೆಗೆ ಕೇವಲ ಪರಮಾತ್ಮಸ್ವರೂಪವು ನಿಮಿತ್ತ ಕಾರಣವಾದುದರಿಂದ ಇದಕ್ಕೆ ಮಾಯೆ ಅಥವಾ 'ಅಜ್ಞಾನ', ಅಥವಾ ಆವರಣವು ಮೂಲಕಾರಣವಾಗುವುದು. ಪ್ರಥಮತಃ ಪರಮಾತ್ಮನ ಮನಸ್ಸಿನಿಂದ ಜಗನ್ನಿರ್ಮಾಣದ ವಾಸನೆ ಉಂಟಾಯಿತು. ಇದೇ 'ಕಾಮ.' ಆ ಕಾಮದ ದೆಸೆಯಿಂದ ತನ್ನ ಶಕ್ತಿಯಿಂದೊಡಗೂಡಿ ಇದರಲ್ಲಿ ಸಂಕಲ್ಪದಿಂದ ಕಾರ್ಯ ಕರ್ತೃತ್ವದ ಅಹಂಕಾರರೂಪವಾದ ರೇತಸ್ಸಿಂಚನೆಯನ್ನು ಪರಮಾತ್ಮನು ಮಾಡಿದನು. ಅದರ ಮೂಲಕವಾಗಿ ಅವ್ಯಕ್ತರೂಪವಾದ ಪ್ರಕೃತಿಯಲ್ಲಿ ಲೀನವಾಗಿದ್ದಂತಹ ಮುಕ್ತರಾಗದಿರುವ ಜೀವಿಗಳ ಕರ್ಮಫಲವನ್ನು ಅವರವರ ಫಲಭೋಗಕ್ಕಾಗಿ ವ್ಯಕ್ತಗೊಳಿಸಲು ಜಗತ್ತನ್ನು ನಿರ್ಮಿಸಿದನು. ಜೀವ ಮತ್ತು ಜಗತ್ತಿನೊಡನೆ ಪರಮಾತ್ಮನಿಗೆ ಇರುವ ಸಂಬಂಧಕ್ಕೆ ಇಲ್ಲಿಂದಲೇ ಪ್ರಾರಂಭವಾಯಿತು. ಸೂರ್ಯನ ಪ್ರಕಾಶ ಮತ್ತು ಮೃಗಜಲದ ಸಂಬಂಧ ಇರುವಂತೆ ಪರಮಾತ್ಮ ಮತ್ತು ಈ ಜಗತ್ತಿನ ಸಂಬಂಧವಿದೆ ಎಂಬುದಾಗಿ ತಿಳಿದವರು ವಿವೇಕ ವಿಚಾರದಿಂದ ಮನದಟ್ಟು ಮಾಡಿಕೊಂಡಿರುವರು.

ತಿರಶ್ಚೀನೋ ವಿತತೋ ರಶ್ಮಿರೇಷಾ-
ಮಧಃ ಸ್ವಿದಾಸೀದುಪರಿ ಸ್ವಿದಾಸೀತ್ ॥
ರೇತೋಧಾ ಆಸನ್ ಮಹಿಮಾನ ಆಸನ್
ಸ್ವಧಾ ಅವಸ್ತಾತ್ ಪ್ರಯತಿಃ ಪರಸ್ತಾತ್ ॥

ಮೃಗಜಲದ ಭಾಸದಲ್ಲಿ ಸೂರ್ಯಪ್ರಕಾಶವು ಇದ್ದಂತೆ, ವಸ್ತ್ರದ ನೆಯ್ಗೆಯಲ್ಲಿ ನೂಲು ಇದ್ದಂತೆ, ಪರಮಾತ್ಮನಿಂದ ಆದ ಈ ಜಗತ್ತಿನಲ್ಲಿ ಪರಮಾತ್ಮನ ಜ್ಞಾನ ಪ್ರಕಾಶವು ಅಡ್ಡ-ಉದ್ದ, ಮೇಲೆ-ಕೆಳಗೆ, ಒಳಗೆ-ಹೊರಗೆ ಮತ್ತು ಎಲ್ಲೆಡೆಯಲ್ಲಿಯೂ ತುಂಬಿಕೊಂಡಿದೆ.

ಪರಮಾತ್ಮಪ್ರಕಾಶದ ಕೆಲ ಕಲ್ಪಿತಭಾಗವು ಆ ವಿಚಿತ್ರಶಕ್ತಿಯ ಮೂಲಕ ಕರ್ತೃ-ಭೋಕ್ತೃ ರೂಪದಿಂದ ವಿವಿಧ ಉಪಾಧಿಗಳನ್ನು ಆಶ್ರಯಿಸಿ ಅನೇಕ ಜೀವಿಗಳ ರೂಪವನ್ನು ತಾಳಿತು. ಅಂತೆಯೇ ಇನ್ನು ಕೆಲಭಾಗವು ಈ ಜೀವಿಗಳಿಗೆ ಭೋಗ್ಯವಾಗುವ ದೃಶ್ಯ ಪದಾರ್ಥಗಳ ರೂಪವನ್ನು ಹೊಂದಿತು. ಈ ಜೀವಿಗಳು ಅನೇಕ ವಿಧದ ಮಹಿಮೆಯುಳ್ಳವರಾದರು. ಜಡ ಪದಾರ್ಥ ಸಮುದಾಯರೂಪವಾದ ಜಗತ್ತೂ ಕೂಡ ವಿಸ್ತೃತ ರೂಪವನ್ನು ತಾಳಿತು. ಹೀಗೆ ಪರಮಾತ್ಮನ ಪ್ರಕಾಶವೇ ವಿಚಿತ್ರ ಮಾಯೆಯ ರೂಪವಾದ ಶಕ್ತಿಯಿಂದ ಕೂಡಿಕೊಂಡು ಆಶ್ಚರ್ಯಕರವಾದ ಜಡಚೇತನಾತ್ಮಕ ಸೃಷ್ಟಿರೂಪವಾಯಿತು. ಪರಮಾತ್ಮನ ವಿಚಿತ್ರ ಶಕ್ತಿಯು ಪ್ರಪಂಚದ ಒಳಗೂ ಹೊರಗೂ ವ್ಯಾಪಿಸಿತು. ಅದೇ ಎರಡು ರೂಪಗಳನ್ನು ತಾಳಿ ತನ್ನ ಅಶುದ್ಧರೂಪದಿಂದ ಜೀವಿಗಳ ಸಂಸಾರಕ್ಕೆ ಕಾರಣವಾಗುವಂತೆ ತನ್ನ ಶುದ್ಧ ರೂಪದಿಂದ ಅದರ ಆಚೆಗಿರುವ ಮೋಕ್ಷಕ್ಕೂ ಕಾರಣವಾಯಿತು.

ಹಗ್ಗದ ಅಜ್ಞಾನದಿಂದ ಅಲ್ಲಿ ಇಲ್ಲದೇ ಕೇವಲ ಕಾಲ್ಪನಿಕವಾಗಿ ಕಂಡು ಬರುವ ಸರ್ಪ ಹೇಗಾಯಿತು ಎಂಬುದನ್ನು ಹೇಳಲು ಯಾರಿಗೂ ಸಾಧ್ಯವಾಗದು. ಆ ಹಗ್ಗದ ಅಜ್ಞಾನ ಯಾವ ಆಕಾರವಾಗಿದೆ ಎಂಬುದನ್ನು ಗುರುತಿಸಲೂ ಯಾರಿಗೂ ಆಗದು. ಅಜ್ಞಾನ ಆದಮೇಲೆಯೇ ಆ ಅಜ್ಞಾನಗೊಂಡಿರುವ ಮನುಷ್ಯನಿಗೆ ಹಗ್ಗದಲ್ಲಿ ಸರ್ಪಾಭಾಸವಾಗುವುದು. ಅಂತೆಯೇ ಪರಮಾತ್ಮನ ಅಜ್ಞಾನದಿಂದ ಅಲ್ಲಿ ಇಲ್ಲದೇ ಕೇವಲ ಕಾಲ್ಪನಿಕ

ವಾಗಿ ಕಂಡು ಬರುವ ಜಗತ್ತು ಹೇಗಾಯಿತು ಎಂಬುದನ್ನು ಹೇಳಲು ಯಾರಿಗೂ ಸಾಧ್ಯವಾಗದು. ಆ ಪರಮಾತ್ಮನ ಅಜ್ಞಾನ ಯಾವ ಆಕಾರ ವಾಗಿದೆ ಎಂಬುದನ್ನು ಗುರುತಿಸಲು ಯಾರಿಗೂ ಆಗದು. ಅಜ್ಞಾನವಾದ ಶಕ್ತಿಯೇ ಆ ಅಜ್ಞಾನಗೊಂಡಿರುವ ಜೀವಿಗೆ ಪರಮಾತ್ಮನಲ್ಲಿ ಜಗದಾ ಭಾಸವಾಗುವುದು. ಆದ ಕಾರ್ಯದಲ್ಲಿ ಭಾಗವಹಿಸಿರುವ ಜೀವಿಗಳಿಗಿಂತ ಮೊದಲೇ ಆ ಅಜ್ಞಾನವು ಇರುವುದರಿಂದಲೂ ಅದೇ ಇವರ ಹುಟ್ಟಿಗೆ ಕಾರಣ ವಾಗಿರುವುದರಿಂದಲೂ, ಆದರಿಂದಲೇ ಜಗತ್ಕಾರ್ಯವು ರೂಪಗೊಂಡಿರು ವುದರಿಂದಲೂ, ತಾಯಿ-ತಂದೆಗಳ ಜನ್ಮ ಮಕ್ಕಳಿಗೆ ಕಾಣಲು ಸಾಧ್ಯವಾಗ ದಂತೆ, ಭಾವಿಸಲೂ ಸಾಧ್ಯವಾಗದಂತೆ, ಈ ಅಜ್ಞಾನ ಮತ್ತು ಅಜ್ಞಾನದ ಮೂಲವನ್ನು ಕಂಡುಹಿಡಿಯಲೂ, ಅದನ್ನು ಹೀಗೆಯೇ ಎಂದು ಗುರು ತಿಸಲೂ, ಯಾರಿಗೂ ಸಾಧ್ಯವಾಗದು.

ಹಗ್ಗದಲ್ಲಿ ಸರ್ಪವು ಕಂಡುಬರುವುದಕ್ಕಾಗಿ ಅದರಲ್ಲಿ ಕಂಡು ಬರುವ ಸರ್ಪದ ಸಾದೃಶ್ಯವೇ ಸರ್ಪಾಭಾಸಕ್ಕೆ ಕಾರಣವಾಗುವ ಅದರ ಶಕ್ತಿ ಯೆಂದು ಕಲ್ಪನೆ ಮಾಡುವಂತೆ, ಆ ಸಚ್ಚಿದಾನಂದರೂಪವಾದ ಪರಮಾತ್ಮ ನಲ್ಲಿ ಜಗತ್ತು ಕಂಡುಬರುವುದಕ್ಕಾಗಿ, ಅವನಲ್ಲಿ ಕಂಡು ಬರುವ ಜಗತ್ತಿನ ಅಸ್ತಿಭಾತಿಪ್ರಿಯರೂಪದ ಸಾದೃಶ್ಯವೇ ಜಗತ್ತಿನ ಆಭಾಸಕ್ಕೆ ಕಾರಣ ವಾಗುವ ಅವನ ಶಕ್ತಿಯೆಂದು ಕಲ್ಪನೆಮಾಡಲಾಗುವುದು. ಜಗತ್ತಿನ (ನಾಮರೂಪದ) ಇರುವಿಕೆ, ಭಾಸಿಸುವಿಕೆ, ಪ್ರಿಯವಾಗುವಿಕೆ, ಇವು ಪರಮಾತ್ಮನ ಸತ್ತೆ-ಜ್ಞಾನರೂಪತೆ ಮತ್ತು ಆನಂದ ಘನತೆಗೆ ಸಂಬಂಧ ಪಡುವುವು.

ಕೋ ಅದ್ಧಾ ವೇದ ಕ ಇಹ ಪ್ರ ವೋಚತ್
ಕುತ ಆಜಾತಾ ಕುತ ಇಯಂ ವಿಸೃಷ್ಟಿಃ ।
ಅರ್ವಾಗ್ ದೇವಾ ಅಸ್ಯ ವಿಸರ್ಜನೇನಾಽಥಾ
ಕೋ ವೇದ ಯತ ಆ ಬಭೂವ ॥

'ಸೃಷ್ಟಿಯು ಹೇಗೆ ಆಯಿತು? ಇದಕ್ಕೆ ಯಾವುದು ನಿಮಿತ್ತವು? ಯಾವುದರಿಂದ ಇದು ಆಯಿತು'? ಎಂಬುದನ್ನು ನಿಶ್ಚಯವಾಗಿಯೂ ಯಾವಾತನು ತಾನೇ ತಿಳಿಯುವನು? ಇದು ಹೀಗೇ ಎಂಬುದಾಗಿ

ಯಾವಾತನು ತಾನೇ ಸಾರುವನು? ದೇವತೆಗಳೂ ಸಹ ಸೃಷ್ಟಿಯು ನಿರ್ಮಾಣದ ಆನಂತರವೇ ಹುಟ್ಟಿದವರು ಎಂದಾದಮೇಲೆ ಈ ಸೃಷ್ಟಿಯು 'ಎಲ್ಲಿಂದ ಹೇಗೆ ಆಯಿತು' ಎಂಬುದನ್ನು ಯಾವಾತನು ತಾನೇ ಗುರು ತಿಸುವನು? ಯಾರಿಗೆ ಇದು ಸಾಧ್ಯ?

ಇಯಂ ವಿಸೃಷ್ಟಿರ್ಯತ ಆ ಬಭೂವ
ಯದಿ ವಾ ದಧೆ ಯದಿ ವಾ ನ ।
ಯೋ ಅಸ್ಯಾಧ್ಯಕ್ಷಃ ಪರಮೇ ವ್ಯೋಮನ್‌ತ್ಸೋ
ಅಂಗ ವೇದ ಯದಿ ವಾ ನ ವೇದ ॥

'ಈ ಸೃಷ್ಟಿಯು ಎಲ್ಲಿಂದ ಆಯಿತು? ಇದು ನಿಜವಾಗಿಯೂ ಆಗಿರುವುದು ಸತ್ಯವೋ ಅಥವಾ ಆದದ್ದೇ ಅಸತ್ಯವೋ?' ಎಂಬುದನ್ನು ಈ ಬಾಹ್ಯಾಕಾಶವನ್ನೂ ಮೀರಿರುವ ತನ್ನ ಮನಸ್ಸಿನಿಂದಲೇ ಈ ಸೃಷ್ಟಿಯ ನ್ನುಂಟುಮಾಡುವ, ಆ ಬ್ರಹ್ಮದೇವನಿಗೂ ಸಂಪೂರ್ಣವಾಗಿ ಗೊತ್ತಿದೆಯೋ ಇಲ್ಲವೋ? ಏಕೆಂದರೆ, ಬ್ರಹ್ಮದೇವನಿಗೂ ಸೃಷ್ಟಿ ನಿರ್ಮಾಣಕ್ಕಾಗಿ ಆವಶ್ಯಕ ವಾದ ಜ್ಞಾನರೂಪವಾದ ವೇದದ ಪ್ರಾಪ್ತಿಯು ಪರಮಾತ್ಮನಿಂದಲೇ ಆದು ದೆಂಬುದು ತೋರಿಬರುವುದು. 'ಯಸ್ಸರ್ವಜ್ಞಃ ಸರ್ವವಿತ್' (ಮುಂ.೧-೯) ಇತ್ಯಾದಿ ವಾಕ್ಯಗಳ ಆಧಾರದಿಂದ ಆ ಪರಮಾತ್ಮನಿಗೆ ಮಾತ್ರ ಇದೆಲ್ಲವೂ ಗೊತ್ತಿರುವುದು ಸಹಜವಾಯಿತು. ಈ ಎಲ್ಲವನ್ನೂ ತಿಳಿಸುವಂಥವನು ಒಬ್ಬ ಪರಮಾತ್ಮನೇ, ಮತ್ತು ಅವನಿಂದಲೇ ಹೊರಟಿರುವ 'ವಾಕ್' ರೂಪವಾದ ಒಂದು ವೇದವೇ ಸರಿ.

ಉಪನಿಷತ್ತಿನಲ್ಲಿ ತತ್ವಜ್ಞಾನದ ಪ್ರತಿಪಾದನೆಯಿದೆ, ವೇದಗಳಲ್ಲಿಲ್ಲ, ಎಂಬುವಂಥ ಆಕ್ಷೇಪದ ನಿರಾಸವನ್ನು ಈ ನಾಸದೀಯ ಸೂಕ್ತವು ತಾನಾ ಗಿಯೇ ಮಾಡುವುದು. ವೇದಜ್ಞನಿಗೆ ಪರಮಾತ್ಮಜ್ಞಾನವಾಗುವುದು ಎಂಬುದಕ್ಕೂ ಪುಷ್ಟಿಕೊಡುವುದು. ಜಗತ್ತಿನ ಉತ್ಪತ್ತಿಯು ಕಲ್ಪಿತವಾದ ಅಜ್ಞಾನದಿಂದಾದುದು. ನಿಜವಾಗಿಯೂ ಪರಮಾತ್ಮನಲ್ಲಿ ಜಗತ್ತಿಲ್ಲ. ಅಜ್ಞಾನದಿಂದ ತೋರಿಬರುವ ಸರ್ಪಾಭಾಸದಲ್ಲಿ ಹಗ್ಗವೇ ಇದ್ದಂತೆ ಜಗತ್ತಿನ ಆಭಾಸದಲ್ಲಿ ಪರಮಾತ್ಮ ಸ್ವರೂಪವೇ ಇದೆ. ಹಗ್ಗದ ಜ್ಞಾನ ದಿಂದ ಸರ್ಪಾಭಾಸದ ನಿವೃತ್ತಿಯಾದಂತೆ ಪರಮಾತ್ಮನ ಜ್ಞಾನದಿಂದ

ಜಗದಾಭಾಸದ ನಿವೃತ್ತಿಯಾಗುವುದು. ಸ್ವರೂಪವಾಗಿಯೇ ಪರಮಾತ್ಮನ ಸಾಕ್ಷಾತ್ಕಾರವಾಗುವುದು, ಎಂಬುದನ್ನೂ ಈ ನಾಸದೀಯ ಸೂಕ್ತವು ತಿಳಿಸುವುದು.

## ಅಜ್ಞಾತವಾದ

ವೇದದಲ್ಲಿ ಪರಮಾತ್ಮನ ಅಜ್ಞಾತವಾದದ ಸಮರ್ಥನೆ ಮಾಡಿದ್ದಿಲ್ಲ. "ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ" ಆ ಪರಮಾತ್ಮನನ್ನು ಶೋಧಮಾಡಬೇಕು; ಆತನನ್ನು ಚೆನ್ನಾಗಿ ತಿಳಿಯಲು ಹವಣಿಸಬೇಕು. "ತಮೇವಂ ವಿದ್ವಾ ನ ಮೃತ ಇಹ ಭವತಿ" (ಪು. ಸೂ.) ಆತನನ್ನು ಈ ವಿಧವಾಗಿ ತಿಳಿದವರು ಅಮೃತತತ್ವವನ್ನು ಹೊಂದುವರು. "ಯ ಏತತ್ ವಿದುರಮೃತಾಸ್ತೇ ಭವಂತಿ" ಯಾರು ಈ ಪರಮಾತ್ಮತತ್ವವನ್ನು ತಿಳಿಯುವರೋ ಅವರು ಅಮೃತರಾಗುವರು. ಉಳಿದವರು ಮಾತ್ರ ದುಃಖವನ್ನೇ ಅನುಭವಿಸುವರು. "ದೇವಂ ಜ್ಞಾತ್ವಾ ಹರ್ಷ ಶೋಕೌ ಜಹಾತಿ" ಆ ಪರಮಾತ್ಮನನ್ನು ತಿಳಿದ ಮಾತ್ರದಿಂದ ಹರ್ಷ ಶೋಕಗಳನ್ನು ತ್ಯಜಿಸುವರು.

"ಪುರುಷ ಏವೇದಂ ವಿಶ್ವಂ ಕರ್ಮ ತಪೋಬ್ರಹ್ಮಪರಾಮೃತಮ್। ಏತದ್ಯೋ ವೇದ ನಿಹಿತಂ ಗುಹಾಯಾಂ ಸೋಽವಿದ್ಯಾಗ್ರಂಥಿಂ ವಿಕಿರತೀಹ ಸೋಮ್ಯ॥" (ಮುಂ. ೨-೧-೧೦). ಆ ಪರಮಾತ್ಮನೇ ಈ ಎಲ್ಲಾ ವಿಶ್ವವಾಗಿರುವನು. ಹಗ್ಗವೇ ಅದರ ಮೇಲೆ ತೋರಿಬರುವ ಸರ್ಪಾಭಾಸದಲ್ಲಿ ತೋರಿಬರುವಂತೆ ಈ ವಿಶ್ವದಲ್ಲೆಲ್ಲಾ ಪರಮಾತ್ಮನೇ ತೋರಿಬರುವನು. ಮಣ್ಣಿನ ಕೊಡವು ಮಣ್ಣಿಗಿಂತಲೂ ಬೇರೆ ಇರದಂತೆ ಪರಮಾತ್ಮನಿಂದ ಆದ ಈ ವಿಶ್ವವು ಪರಮಾತ್ಮನಿಗಿಂತಲೂ ಬೇರೆಯಾಗಿ ಇರದು. ಒಡವೆಯಲ್ಲಿದ್ದ ಚಿನ್ನದ ದೃಷ್ಟಿಯನ್ನು ಕೈಕೊಂಡರೆ 'ಒಡವೆಯೆಂಬುದು ಚಿನ್ನವೇ ಸರಿ ಎಂಬುದು' ಅನುಭವಕ್ಕೆ ಬರುವಂತೆ ವಿಶ್ವದಲ್ಲಿರುವಂತಹ ತ್ರಿಕಾಲಾಬಾಧಿತವಾದ ಪರಮಾತ್ಮನ ದೃಷ್ಟಿಯನ್ನು ಕೈಕೊಂಡರೆ 'ಜಗತ್ತೆಂಬುದು ಸತ್ಯಸ್ವರೂಪದಿಂದ ಪರಮಾತ್ಮನೇ' ಎಂಬುದಾಗಿ ಅನುಭವಕ್ಕೆ ಬರುವುದು. ಎಲ್ಲಾ ಶ್ರೌತಸ್ಮಾರ್ತಪುರಾಣೋಕ್ತ ಕರ್ಮಗಳು, ಎಲ್ಲಾ ವಿಧದ ತಪಸ್ಸು, ಈ ಜಗತ್ತು, ಜಗತ್ತಿನಲ್ಲಿರುವ ಎಲ್ಲಾ ಜೀವಿಗಳೂ

ಸತ್ಯವಾಗಿಯೂ ಒಬ್ಬ ಪರಮಾತ್ಮನ ಸ್ವರೂಪವಾಗಿಯೇ ಇರುವುದಾದ್ದರಿಂದ ಆ ಅಮೃತರೂಪವಾಗಿರುವಂತಹ 'ಅಮೃತವೇ ನಾನು, ಅದೇ ಇದೆಲ್ಲವು' ಎಂಬುದನ್ನು ಯಾವಾತನು ಮನಗೊಳ್ಳುವನೋ ಆತನು ಈ ಆತ್ಮಜ್ಞಾನದ ಮೂಲಕವಾಗಿ ಅವಿದ್ಯಾಗ್ರಂಥಿಯನ್ನು, ಎಂದರೆ ಅಜ್ಞಾನ ಸಮೇತ ಅಜ್ಞಾನದಿಂದ ಉಂಟಾಗಿರುವ ಎಲ್ಲಾ ವಾಸನೆಗಳನ್ನೂ, ದೇಹಾತ್ಮ ಬುದ್ಧಿಯನ್ನೂ, ನಷ್ಟಪಡಿಸುವನು. ಪರಮಾತ್ಮಸ್ವರೂಪವು ಕೇವಲ ಜ್ಞಾನರೂಪವಾದುದು. ಅಜ್ಞಾನದಿಂದ ತೋರಿಬರುವ ಸರ್ಪಾಭಾಸದ ಸತ್ಯ ಶುದ್ಧರೂಪ ಹಗ್ಗವೇ ಆಗುವಂತೆ ಈ ಎಲ್ಲದರ ಸತ್ಯರೂಪವು ಪರಮಾತ್ಮವೇ ಸರಿ. ಇದು ಸ್ವಸಂವೇದ್ಯವಾದದ್ದು, ನಿತ್ಯಬೋಧರೂಪವಾದದ್ದು. ಇದು ತಾನೇ ಆದುದರಿಂದ ಅಜ್ಞಾತವಿಲ್ಲ. ಪರಮಾತ್ಮಸ್ವರೂಪದ ದೃಷ್ಟಿಯಿಂದ ಅಜ್ಞಾತವಾದವು ಸರಿಯಲ್ಲ. ಜಗತ್ತಿನ ನಿಮಿತ್ತ ಕಾರಣರೂಪವಾದ ಅಜ್ಞಾನವು ಅನಿರ್ವಚನೀಯವಾದುದರಿಂದ ಅಜ್ಞಾತವಿದೆ. ಈ ಮತ್ತು ಇನ್ನಿತರ ವೇದೋಪನಿಷತ್ತುಗಳ ಪರಿಚಯವು ಅಜ್ಞಾತವಾದವನ್ನು ಪರಿಹರಿಸುವುದು. ಉಪನಿಷತ್ತಿನ ಹೃದಯದ ಪರಿಚಯವನ್ನು ಮಾಡಿಕೊಳ್ಳಲು ಇನ್ನೂ ಕೆಲವು ಉಪನಿಷತ್ತುಗಳ ಮಂತ್ರಗಳನ್ನು ಪರ್ಯಾಲೋಚಿಸೋಣ!

"ಯ ಆತ್ಮಾಽಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿ ಪಾಸಃ ಸತ್ಯಕಾಮಃ ಸತ್ಯಸಂಕಲ್ಪಃ ಸೋಽನ್ವೇಷ್ಟವ್ಯಃ ಸ ವಿಜಿಜ್ಞಾಸಿತವ್ಯಃ ಸ ಸರ್ವಾಂಶ್ಚ ಲೋಕಾನಾಪ್ನೋತಿ ಸರ್ವಾಂಶ್ಚ ಕಾಮಾನ್ಯಸ್ತಮಾತ್ಮಾನಮನುವಿದ್ಯ ವಿಜಾನಾತೀತಿ ಹ ಪ್ರಜಾಪತಿರುವಾಚ ॥" (ಛಾಂದೋಗ್ಯ. ೮-೭-೧). ಯಾವಾತನು ಯಾವಾಗಲೂ ನಿಷ್ಪಾಪನಾಗಿಯೂ, ಜರಾಮೃತ್ಯುರಹಿತನಾಗಿಯೂ, ಶೋಕಶೂನ್ಯನಾಗಿಯೂ, ಹಸಿವು ಬಾಯಾರಿಕೆಗಳಿಂದ ರಹಿತನಾಗಿಯೂ, ಸತ್ಯಕಾಮನಾಗಿಯೂ, ಸತ್ಯಸಂಕಲ್ಪನಾಗಿಯೂ ಇರುವನೋ ಅಂತಹ ಪರಮಾತ್ಮನನ್ನು ನೀನು ಪರಿಶೋಧಿಸು! ಆತನನ್ನು ಅರಿತುಕೊ!

ಆತನು ಎಲ್ಲಾ ಲೋಕಗಳನ್ನೂ ವ್ಯಾಪಿಸಿರುವನು. ಇಚ್ಛೆಗಳಿಂದ ಪಡೆಯುವ ಎಲ್ಲಾ ಸುಖಗಳಲ್ಲಿ ಇವನ ಒಂದೇ ಒಂದು ಸುಖವು ವ್ಯಾಪಿಸಿಕೊಂಡಿರುವುದರಿಂದಲೂ, ಈ ಸುಖಗಳಿಗೆಲ್ಲಾ ನಿಜವಾಗಿ ಇವನೊಬ್ಬನೇ

ಕಾರಣವಾದ್ದರಿಂದಲೂ ಈ ಪರಮಾತ್ಮನನ್ನು ತನ್ನ ಆನಂದರೂಪತೆಯಿಂದ ತಿಳಿದುಕೊಂಡವನು. ಎಲ್ಲಾ ಕಾಮಪೂರ್ತಿಯನ್ನೂ ಒಮ್ಮೆಲೇ ಪಡೆಯುವನು. ಯಾವಾತನು ಆ ಆತ್ಮಸ್ವರೂಪವನ್ನು ವೇದಶಾಸ್ತ್ರ-ಆಚಾರ್ಯ ಮುಖೇನ ಕೇಳಿ ಮನದಟ್ಟುಮಾಡಿಕೊಂಡು ಅದರ ಸಾಕ್ಷಾತ್ಕಾರವನ್ನು ಮಾಡಿಕೊಳ್ಳುವನೋ, ಅದೇ ತಾನೆಂದು ನಿಶ್ಚಯಿಸುವನೋ, ಅವನೂ ಸಹ ಹೀಗೆ ಆ ಪರಮಾತ್ಮನಂತೆ ಸರ್ವವ್ಯಾಪಿಯಾಗಿ ತನ್ನ ಆನಂದರೂಪತೆಯಿಂದ ಎಲ್ಲಾ ಕಾಮನೆಗಳ ಪೂರ್ತಿಯನ್ನೂ ಒಮ್ಮೆಲೇ ಪಡೆಯುವನು.

"ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್ । ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ॥" (ಮುಂ. ೩-೩).

ಎಂದಿಗೆ ಸಾಧಕನು ಸ್ವಯಂಜ್ಯೋತಿ ಸ್ವಭಾವವಾಗಿರುವ ಜಗತ್ಕಾರಣವಾದ ಆ ಪರಿಶುದ್ಧ ಬ್ರಹ್ಮರೂಪವನ್ನು, ಆ ಪುರುಷ ಸ್ವರೂಪವನ್ನು, ಆ ಈಶ ಸ್ವರೂಪವನ್ನು, ಆ ಜಗತ್ಕಾರಣರೂಪವನ್ನು ನೋಡುವನೋ, ಸಾಕ್ಷಾತ್ಕರಿಸುವನೋ, ಆತನು, ಅಂದಿಗೆ, ಎಲ್ಲಾ ಪುಣ್ಯಪಾಪಗಳನ್ನೂ, ಬಂಧಮೋಕ್ಷಕ್ಕೆ ಕಾರಣವಾಗುವ ಶುಭಾಶುಭ ಕರ್ಮಗಳನ್ನೂ ಸಂಪೂರ್ಣವಾಗಿ ನಷ್ಟಪಡಿಸಿ, ಸ್ವಯಂ ಕ್ಲೇಶ ಶೂನ್ಯನಾಗಿಯೂ, ನಿರ್ಲೇಪನಾಗಿಯೂ, ಸ್ವಯಂಪ್ರಕಾಶನಾಗಿಯೂ, ಆ ನಿರತಿಶಯರೂಪನಾದ ಪರಮಾತ್ಮನಲ್ಲಿ ಸರಿಗಿ ಏಕರಸನಾಗುವನು.

"ಯಥೋದಕಂ ಶುದ್ಧೇಶುದ್ಧಮಾಸಿಕ್ತಂ ತಾದೃಗೇವ ಭವತಿ। ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ॥" (ಕಠ. ೨-೧೫).

ಶುದ್ಧವಾದ ನೀರಿನಲ್ಲಿ ಶುದ್ಧವಾದ ನೀರನ್ನು ಬೆರಸಿದರೆ ಅದು ಒಂದಾಗಿ ಹೋಗುವಂತೆ ಆತ್ಮಜ್ಞಾನಿ ಮುನಿಯು ಬ್ರಹ್ಮದಲ್ಲಿ ಏಕರೂಪನಾಗಿ ಹೋಗುವನು.

"ಸ ಯಥೇಮಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಂ ಪ್ರಾಪ್ಯಾಸ್ತಂ ಗಚ್ಛಂತಿ ಭಿದ್ಯೇತೇ ತಾಸಾಂ ನಾಮರೂಪೇ ಸಮುದ್ರ ಇತ್ಯೇವಂ ಪ್ರೋಚ್ಯತೇ । ಏವಮೇವಾಸ್ಯ ಪರಿದ್ರಷ್ಟು ರಿಮಾಃ ಷೋಡಶಕಲಾಃ ಪುರುಷಾಯಣಾಃ ಪುರುಷಂ ಪ್ರಾಪ್ಯಾಸ್ತಂ

ಗಚ್ಛಂತಿ ಭಿದ್ಯೇತೇ ಚಾಽಽಸಾಂ ನಾಮರೂಪೇ ಪುರುಷ ಇತ್ಯೇವಂ ಪ್ರೋಚ್ಯತೇ ಸ ಏಷೋಽಕಲೋಽಮೃತೋ ಭವತಿ ॥" (ಪ್ರಶ್ನೋಪನಿಷತ್ ೬-೫) ಸಮುದ್ರವೇ ಲಯಸ್ಥಾನವಾಗಿವುಳ್ಳ ನದಿಗಳು ಸಮುದ್ರವನ್ನು ಹೊಂದಿ ಸಮುದ್ರದಲ್ಲೇ ಅವುಗಳ ನಾಮರೂಪಗಳು ನಷ್ಟವಾಗಿ ಸಮುದ್ರದಲ್ಲಿ ಹೇಗೆ ಒಂದಾಗಿ ಹೋಗುವುವೋ, ಆಮೇಲೆ ಒಂದು ಸಮುದ್ರವೆಂತಲೇ ಹೇಗೆ ವ್ಯವಹಾರವಾಗುವುದೋ ಅಂತೆಯೇ, ಪರಮಾತ್ಮ ಸ್ವರೂಪವೇ ಅಂತಿಮಗತಿಯಾಗಿರುವ ಪ್ರಾಣ, ಶ್ರದ್ಧೆ, ಆಕಾಶ, ವಾಯು, ಅಗ್ನಿ, ಜಲ, ಭೂಮಿ, ಇಂದ್ರಿಯ, ಮನಸ್ಸು, ಅನ್ನ, ವೀರ್ಯ, ತಪಸ್ಸು, ಮಂತ್ರಗಳು, ಕರ್ಮ, ಲೋಕ, ನಾಮಾಭಿಧಾನ, ಈ ಎಲ್ಲಾ ಕಲೆಗಳೂ, ಪುರುಷನಲ್ಲೇ ಅಥವಾ ಪರಮಾತ್ಮನಲ್ಲೇ ಸೇರಿ ಒಂದಾಗಿ ಹೋಗುವುವು. ಆ ಪರಮಾತ್ಮನನ್ನು ಅರಿತ ಜ್ಞಾನಿಯೂ ಸಹ ಆ ಪರಮಾತ್ಮನಲ್ಲಿ ಈ ಷೋಡಶಕಲಾ ಸಮೇತವಾಗಿ ಐಕ್ಯಹೊಂದುವನು. ಇವನ ನಾಮರೂಪಗಳೂ ಅಳಿದು ಹೋಗುವುವು. ಈತನು ಪರಮಾತ್ಮನೆಂದೇ ಕರೆಯಿಸಿಕೊಳ್ಳುವನು. ಇಂಥಾ ಈ ಜ್ಞಾನಿಯು ನಿಷ್ಕಲನಾಗುವನು. ಅಮರನಾಗುವನು. ಆ ಪರಮಾತ್ಮನೇ ಆಗುವನು.

"ಗತಾಃ ಕಲಾಃ ಪಂಚದಶಪ್ರತಿಷ್ಠಾ ದೇವಾಶ್ಚ ಸರ್ವೇ ಪ್ರತಿದೇವತಾಸು । ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀ ಭವಂತಿ ॥ ಯಥಾ ನದ್ಯಃ ಸ್ಯನ್ದಮಾನಾಃ ಸಮುದ್ರೇಽಸ್ತಂ ಗಚ್ಛಂತಿ ನಾಮರೂಪೇ ವಿಹಾಯ । ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಮ್ ॥ (ಮುಂ. ೩-೨-೭, ೮) ಈ ಮುಂಡಕೋಪನಿಷತ್ತಿನ ಮಂತ್ರಗಳಲ್ಲಿಯೂ ಈ ತಾತ್ಪರ್ಯವೇ ಪ್ರಕಟವಾಗಿರುವುದು.

"ಇಮಾಃ ಸೋಮ್ಯ ನದ್ಯಃ ಪುರಸ್ತಾತ್ಪ್ರಾಚ್ಯಃ ಸ್ಯನ್ದನ್ತೆ ಪಶ್ಚಾತ್ಪ್ರತೀಚ್ಯಸ್ತಾಃ ಸಮುದ್ರಾತ್ಸಮುದ್ರಮೇವಾಪಿಯಂತಿ ಸ ಸಮುದ್ರ ಏವ ಭವತಿ ತಾ ಯಥಾ ತತ್ರ ನ ವಿದುರಿಯ ಮಹಮಸ್ಮೀತಿ ॥ ಏವಮೇವ ಖಲು ಸೋಮ್ಯೇಮಾಃ ಸರ್ವಾಃ ಪ್ರಜಾಃ ಸತ ಆಗಮ್ಯ ನ ವಿದುಃ ಸತ ಆಗಚ್ಛಾಮಹ ಇತಿ ತ ಇಹ ವ್ಯಾಘ್ರೋ ವಾ ಸಿಂಹೋ

ವಾ ವೃಕೋ ವಾ ವರಾಹೋ ವಾ ಕೀಟೋ ವಾ ಪತಙ್ಗೋ ವಾ ದಂಶೋ ವಾ ಮಶಕೋ ವಾ ಯದ್ಯದ್ಭವಂತಿ ತದಾ ಭವನ್ತಿ ॥" (ಛಾಂದೋಗ್ಯ. ೬–೧೦–೧, ೨). ಪೂರ್ವ ಪಶ್ಚಿಮ ದಕ್ಷಿಣೋತ್ತರ ವಾಹಿನೀ ನದಿಗಳು ಜಲನಿಧಿಯಾದ ಸಮುದ್ರದಿಂದಲೇ ಉಂಟಾಗಿ ಪುನಃ ಸಮುದ್ರದಲ್ಲೇ ಹೇಗೆ ಸೇರುವುವೋ, ಸಮುದ್ರವೇ ಆಗುವುವೋ, ಸಮುದ್ರವೇ ಆಗಿದ್ದು 'ನಾನು ಸಮುದ್ರ ಅಥವಾ ನಾನು ಇಂಥ ನದಿ' ಎಂಬುದಾಗಿ ತಿಳಿಯವೋ ಅಂತೆಯೇ ಈ ಎಲ್ಲಾ ಜೀವರೂಪ ನದಿಗಳೂ ಪರಮಾತ್ಮನಿಂದಲೇ ಉತ್ಪನ್ನವಾಗಿ ಪರಮಾತ್ಮನಲ್ಲಿಯೇ ಐಕ್ಯವನ್ನು ಪಡೆದು ಪರಮಾತ್ಮನೇ ಆಗಿದ್ದರೂ ಅವರಿಗೆ ಸುಷುಪ್ತಿಯ ಐಕ್ಯಸ್ಥಿತಿಯಲ್ಲಿ ನಾನು 'ಪರಮಾತ್ಮನೆಂದೂ ಅಥವಾ ನಾನು ಇಂಥ ಹೆಸರುಳ್ಳವನು' ಎಂದೂ ಪರಿಜ್ಞಾನವಿರದು. ಆದುದರಿಂದಲೇ ಜಾಗೃತಿಯಲ್ಲಿ ಪಶು, ಪಕ್ಷಿ, ಮನುಷ್ಯಾದಿ ದೇಹದ ಅಭಿಮಾನ ವಹಿಸಿ ಅಜ್ಞಾನದಿಂದ ಮೋಹಿಸುವರು. ಆದರೆ ಇದಕ್ಕೆ ಅವರ ಯಥಾರ್ಥರೂಪದ ಅಜ್ಞಾನವೇ ಒಂದು ಕಾರಣ. ಹೇ! ಶ್ವೇತಕೇತೋ! ನಿನಗೂ ಹೀಗೆಯೇ ಆಗುವುದಾದರೂ ನಿಜವಾಗಿ ಹೇಳುವುದಾದರೆ, "ಸ ಯ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ!" ಈ ಎಲ್ಲದರ ಈ ಎಲ್ಲಾ ಜೀವಿಗಳ ಯಥಾರ್ಥರೂಪವಾಗಿ ಯಾವ ಅತಿ ಸೂಕ್ಷ್ಮ ಪರಮಾತ್ಮನಿರು ವನೋ ಆತನೇ ನೀನು!

(ಈ ಛಾಂದೋಗ್ಯದ ಮಂತ್ರದಲ್ಲಿ ಸಮುದ್ರ, ನದಿಗಳ ದೃಷ್ಟಾಂತ ವನ್ನು ಸುಷುಪ್ತಿಯ ಅವಸ್ಥೆಗೆ ಹೋಲಿಸಿ ಹೇಳಿರುವರು. ಹಿಂದಿನ ಪ್ರಶ್ನೆ ಮತ್ತು ಮಾಂಡೂಕ್ಯ ಉಪನಿಷತ್ತುಗಳ ಮಂತ್ರಗಳು ಮಾತ್ರ ಬ್ರಹ್ಮೈಕ್ಯ ರೂಪವಾದ ಮೋಕ್ಷಕ್ಕೆ ಹೋಲಿಸಿ ಹೇಳಿರುವುವು.)

"ಸ ಯೋ ಹ ವೈ ತತ್ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ। ತರತಿ ಪಾಪ್ಮಾನಂ ಗುಹಾಗ್ರಂಥಿಭ್ಯೋ ವಿಮುಕ್ತೋಽಮೃತೋ ಭವತಿ ॥" (ಮುಂ. ೩–೨–೯). ಈ ಲೋಕದಲ್ಲಿಯೇ ಯಾವಾತನು ಬ್ರಹ್ಮನೇ ನಾನೆಂದು ಅರಿತುಕೊಳ್ಳುವನೋ ಆತನು ಬ್ರಹ್ಮನೇ ಆಗುವನು. ಎಲ್ಲಾ ಶೋಕವನ್ನು ದಾಟಿಹೋಗುವನು. ಎಲ್ಲಾ ಪಾಪಗಳಿಂದ ಮುಕ್ತ

ನಾಗುವನು. ದೇಹಾತ್ಮ ಬುದ್ಧಿಯಿಂದ ಸರ್ವಥಾ ರಹಿತನಾಗುವನು. ಆತನು ಅಮರನಾಗುವನು. ಈ ಉಪನಿಷದ್ವಾಕ್ಯಗಳಿಂದ ಪರಮಾತ್ಮನನ್ನು ಚೆನ್ನಾಗಿ ತಿಳಿದುಕೊಂಡ ಮಾತ್ರದಿಂದ ಜೀವಿಯು ಪರಮಾತ್ಮನಾಗುವನು ಎಂಬುದು ಸ್ಪಷ್ಟವಾಗುವುದು. ಸ್ವರೂಪದ ಪರಿಜ್ಞಾನದಿಂದ ಜೀವಿಯು ಪರಮಾತ್ಮನಾಗುವಲ್ಲಿ ಪರಮಾತ್ಮ ಸ್ವರೂಪವು ಅಜ್ಞಾತವಾಗದು. “ವೇದಾಹಮೇತಂ ಪುರುಷಂ ಮಹಾಂತಂ” ಆ ಮಹಾಪುರುಷ ಸ್ವರೂಪವನ್ನು ನಾನು ತಿಳಿದಿರುವೆನು, ಎಂಬುದಾಗಿ ಉಪನಿಷದ್ವಚನವಿರುವುದರಿಂದ, ಜಗತ್ತಿನ ಯಥಾರ್ಥರೂಪವು ಅಜ್ಞಾತವಿದೆ ಎಂದು ಹೇಳಲಾಗದು. ಅದು ತನ್ನ ಸ್ವರೂಪವೇ ಆಗಿರುವುದು. ಆ ಪರಮಾತ್ಮ ಸ್ವರೂಪವು ತನ್ನ ಸ್ವರೂಪವಾಗಿಯೇ ಇರುವುದು. ಇದೇ ವೇದೋಪನಿಷತ್ತುಗಳ ತಾತ್ಪರ್ಯ.

“ತದ್ಧೇದಂ ತರ್ಹ್ಯವ್ಯಾಕೃತಮಾಸೀತ್ತನ್ನಾಮರೂಪಾಭ್ಯಾಮೇವ ವ್ಯಾಕ್ರಿಯತಾಸೌ ನಾಮಾಯಮಿದಂರೂಪ ಇತಿ ತದಿದಮಪ್ಯೇತರ್ಹಿ ನಾಮರೂಪಾಭ್ಯಾಮೇವ ವ್ಯಾಕ್ರಿಯತೇಽಸೌ ನಾಮಾಽಯಮಿದಂರೂಪ ಇತಿ ॥” (ಬೃಹ. ಅ. ೧. ಬ್ರಾ. ೪). “ಸ ಏಷ ಇಹ ಪ್ರವಿಷ್ಟಃ, ಆನಖಾಗ್ರೇಭ್ಯಃ।” (ಬೃ. ಅ. ೧ ಬ್ರಾ. ೪). ಈ ಜಗತ್ತು ಇದರ ಉತ್ಪತ್ತಿಯ ಪೂರ್ವದಲ್ಲಿ ಅವ್ಯಕ್ತವಾಗಿತ್ತು. ಸುಷುಪ್ತಿ, ಇದು ಈ ಅವ್ಯಕ್ತವನ್ನೇ ಗುರಿಮಾಡುವುದು. ಇದೇ ಜಗತ್ತಿನ ಕಾರಣ ಶರೀರ. ಇದೇ ‘ಅಜ್ಞಾನ ಅಥವಾ ಆವರಣರೂಪ’. ಇದರ ಅಂಶವೇ ಜೀವಿಯ ಕಾರಣ. ದೇಹ, ಸುಷುಪ್ತಿ ಅವಸ್ಥೆ. ಅವ್ಯಕ್ತದ ಅಭಿಮಾನಿಯೇ ಬ್ರಹ್ಮಾಂಡದಲ್ಲಿ ಈಶ್ವರ. ಪಿಂಡಾಂಡದಲ್ಲಿ ‘ಪ್ರಾಜ್ಞ’, ಅಂದರೆ ಇದು ಸುಷುಪ್ತಿಕಾಲದ ಜೀವಿಯ ಹೆಸರು. ‘ಅವ್ಯಕ್ತಾತ್ ಮಹತ್’ ಈ ಅವ್ಯಕ್ತದಿಂದಲೇ ಮಹತ್ತತ್ವವುಂಟಾಯಿತು. ಅಂತೆಯೇ ಅವ್ಯಕ್ತರೂಪವಾದ ಕಾರಣ ದೇಹದಿಂದ ಮಹತ್ತತ್ವದ ಅಂಶರೂಪವಾದ ಜೀವಿಯ ಸೂಕ್ಷ್ಮದೇಹವುಂಟಾಯಿತು. ಈ ಮಹತ್ತತ್ವದ ಅಭಿಮಾನಿಯು ಹಿರಣ್ಯಗರ್ಭನು. ಸೂಕ್ಷ್ಮದೇಹದ ಅಭಿಮಾನಿಯಾದ ಜೀವಿಯು ‘ತೈಜಸನು’.

ಈ ಅವಸ್ಥೆಗೆ ಸ್ವಪ್ನವೆಂದು ಹೆಸರು. ಈ ದೇಹಕ್ಕೆ ಸೂಕ್ಷ್ಮ ಅಥವಾ ಲಿಂಗದೇಹವೆನ್ನುವರು. ಹಿರಣ್ಯಗರ್ಭನೇ ತಾನು ಬಹುವಾಗಬೇಕೆಂಬ ಸಂಕಲ್ಪಮಾಡಿದನು. ("ಏಕೋಽಹಂ ಬಹುಸ್ಯಾಮ್") ಅನಂತರ ಬಹುತ್ವಕ್ಕೆ ಕಾರಣವಾಗುವ ಅನೇಕ ದೇಹಗಳನ್ನು ನಿರ್ಮಿಸಿ ಅದರಲ್ಲಿ ಪ್ರವೇಶಮಾಡಿದನು. ಆನಖಾಗ್ರವಾಗಿ ಈ ದೇಹದಲ್ಲಿ ಪ್ರವಿಷ್ಟನಾಗಿ ಜೀವಭಾವವನ್ನು ಹೊಂದಿದವನು, ಆ ಪರಮಾತ್ಮನೇ ಎಂದು ಶ್ರುತಿಯು ಹೇಳುವುದು. ಈ ಯಾವ ಜಗತ್ತು ಮೊದಲು ಅವ್ಯಾಕೃತವಾಗಿತ್ತೋ ಅದೇ ಅನಂತರ ನಾಮರೂಪದಿಂದ ವ್ಯಕ್ತವಾಯಿತು. ಇದೇ **ಜಗತ್ತು.** ಇದರ ಅಭಿಮಾನಿಯಾದ ಪರಮಾತ್ಮನಿಗೆ "**ವಿರಾಟ್**" ಎಂದು ಹೆಸರು. ಇದು ಪರಮಾತ್ಮನ ಸ್ಥೂಲದೇಹ. ಇದರಲ್ಲಿಯೇ ಎಲ್ಲಾ ಜೀವಿಗಳ ಸ್ಥೂಲ ದೇಹಗಳ ಅಂತರ್ಭಾವವಾಗುವುದು — ಇದು **ಜಾಗೃತಿ.** ದೇಹದಲ್ಲಿ ಪ್ರವೇಶಿಸಿ ದೇಹವೇ ನಾನೆಂದು ತಿಳಿದು ಜಾಗೃತಿಯಲ್ಲಿ ಯಾವ ಪರಮಾತ್ಮನು ಈ ದೇಹದಲ್ಲಿ ಅಭಿಮಾನವನ್ನು ಇಡುವನೋ ಆ ವಿರಾಟನ ಅಂಶಭೂತನಾಗಿರುವಂಥ ಜೀವಿಗೆ 'ವಿಶ್ವ'ನೆಂದು ಹೆಸರು. ಇಡೀ ದೇಹದಲ್ಲಿ ಇವನ ವ್ಯಾಪ್ತಿಯಿರುವುದರಿಂದ "**ಸ ಇಹ ಪ್ರವಿಷ್ಟಃ ಆನಖಾಗ್ರೇಭ್ಯಃ**" ಎಂದು ಹೇಳುವರು.

"**ಆತ್ಮೈವೇದಮಗ್ರ ಆಸೀತ್ । ಪುರುಷವಿಧಃ ಸೋಽನುವೀಕ್ಷ್ಯ ನಾನ್ಯದಾತ್ಮನೋಽಪಶ್ಯತ್ಸೋಽಹಮಸ್ಮೀತ್ಯಗ್ರೇ ವ್ಯಾಹರತ್ತತೋಽಹಂ ನಾಮಾಭವತ್ತಸ್ಮಾದಪ್ಯೇತರ್ಹ್ಯಾಮಂತ್ರಿತೋಽಹಮಯಮಿತ್ಯೇವಾಗ್ರ ಉಕ್ತ್ವಾಥಾನ್ಯನ್ನಾಮ ಪ್ರಬ್ರೂತೇಯದಸ್ಯ ಭವತಿ ॥**" (ಬೃಹ. ೧–೪–೧). ಈ ಎಲ್ಲದರ ಪೂರ್ವದಲ್ಲಿ ಪ್ರಥಮ ಶರೀರಿಯಾದ ಪ್ರಜಾಪತಿಯೊಬ್ಬನಿದ್ದನು. ಶಿರಸ್ಸು, ಕೈ, ಕಾಲು ಮುಂತಾದ ಅವಯವಗಳಿಂದ ಪುರುಷನಂತಿರುವ ಈ ವಿರಾಟನು ತನಗಿಂತ ಹೊರತಾಗಿದ್ದ ಯಾವುದನ್ನೂ ಕಾಣದೆ "ತಾನು ಯಾರು? ಯಾವ ಲಕ್ಷಣಗಳಿಂದ ಕೂಡಿಕೊಂಡು ನಾನು ಇರತಕ್ಕವನು" ಎಂಬುದನ್ನು ಆಲೋಚಿಸಿ ತನ್ನನ್ನೇ ಕಂಡು ಆ ಸಚ್ಚಿದಾನಂದ ಸ್ವರೂಪವಾದ ಪರಮಾತ್ಮನೇ ನಾನೆಂದು ಮೊದಲು ಉದ್ಘೋಷಿಸಿದನು. ಅಂದಿನಿಂದ ಈತನೇ ಎಲ್ಲಾ ದೇಹಗಳನ್ನು

ಸೃಜಿಸಿ ಆ ದೇಹಗಳಲ್ಲಿ ಪ್ರವೇಶಿಸಿದನು. ಆದುದರಿಂದಲೇ ಜಗತ್ತಿನಲ್ಲಿ ಯಾವಾತನನ್ನೂ ಸಹ "ನೀನು ಯಾರೆಂದು ವಿಚಾರಿಸುವಲ್ಲಿ, ಅವನೇ ನಾನು" ಎಂಬುದನ್ನು ಗುರುತಿಸುವುದಕ್ಕಾಗಿ "ನಾನೇ" ಎನ್ನುವನು. ಮೊದಲು ಪಾರಮಾರ್ಥಿಕವಾದ ತನ್ನ ಈ ಅರಿವನ್ನು ಕೊಟ್ಟು ವ್ಯವಹಾರದ ನಿರ್ವಹಣೆಗಾಗಿ ಅನಂತರ ಲೌಕಿಕವಾದ ದೇಹದ ಹೆಸರನ್ನು ತಿಳಿಯ ಪಡಿಸುವನು.

**"ಬ್ರಹ್ಮ ವಾ ಇದಮಗ್ರ ಆಸೀತ್ತದಾತ್ಮಾನ ಮೇ ವಾ ವೇತ್। ಅಹಂ ಬ್ರಹ್ಮಾಸ್ಮೀತಿ ತಸ್ಮಾತ್ತತ್ಸರ್ವಮಭವತ್ । ತದ್ಯೋ ಯೋ ದೇವಾನಾಂ ಪ್ರತ್ಯಬುಧ್ಯತ ಸ ಏವ ತದ ಭವತ್ತಥರ್ಷೀಣಾಂ ತಥಾ ಮನುಷ್ಯಾಣಾಂ ॥"** (ಬೃಹ. ೧-೪-೧೦). **"ತದಿದಮಪ್ಯೇತರ್ಹಿ ಯ ಏವಂ ವೇದಾಹಂ ಬ್ರಹ್ಮಾಸ್ಮೀತಿ ಸ ಇದಂ ಸರ್ವಂ ಭವತಿ ತಸ್ಯ ಹ ನ ದೇವಾಶ್ಚ ನಾಭೂತ್ಯಾ ಈಶತೇ । ಆತ್ಮಾ ಹ್ಯೇಷಾಂ ಸ ಭವತಿ"** (ಬೃ. ೧-೪-೧೦). ಪೂರ್ವದಲ್ಲಿ ಈ ಎಲ್ಲವೂ ಒಂದು ಪರಮಾತ್ಮ ತತ್ವವೇ ಅಥವಾ ಬ್ರಹ್ಮವೇ ಆಗಿತ್ತು. ಅದು ತನ್ನನ್ನೇ ತಾನು ಬ್ರಹ್ಮವೆಂದು ತಿಳಿಯಿತು. ಆ ಜ್ಞಾನದಿಂದಲೇ ಅದು ಎಲ್ಲವೂ ಆಯಿತು. ಅದೇ ಎಲ್ಲದರಲ್ಲಿಯೂ ಪ್ರವೇಶಿಸಿತು. ಆದುದರಿಂದಲೇ ದೇವತೆಗಳಲ್ಲಿ ಯಾವ ಯಾವಾತನು ಅದನ್ನು ತಿಳಿದನೋ ಅವನವನು ಅದೇ ಆದನು. ಹಾಗೆಯೇ ಋಷಿಗಳಲ್ಲಿಯೂ, ಮನುಷ್ಯರಲ್ಲಿಯೂ ಯಾವ ಯಾವಾತನು ಅದನ್ನು ತಿಳಿದನೋ ಅವನವನು ಆ ಬ್ರಹ್ಮವೇ ಆದನು. ಈವಾಗಲೂ ಈ ಬ್ರಹ್ಮವನ್ನು ಇದೇ ನಾನೆಂದು ಯಾವಾತನು ತಿಳಿಯುವನೋ ಆತನು ಆ ಬ್ರಹ್ಮವೇ ಆಗಿ ಬ್ರಹ್ಮದಂತೆ ಈ ಜ್ಞಾನದಿಂದ ಅವನು ಎಲ್ಲವೂ ಆಗುವನು. ಎಲ್ಲರ ಆತ್ಮ ರೂಪವೂ ಆಗುವನು. ಆ ಬ್ರಹ್ಮವೇತ್ತನ ಅನಿಷ್ಟಕ್ಕಾಗಿ ಅಥವಾ ನಾಶಕ್ಕಾಗಿ ದೇವತೆಗಳೂ ಸಹ ಯತ್ನಿಸರು, ಸಮರ್ಥರಾಗರು. ಆತ್ಮವೇತ್ತನು ಈ ಎಲ್ಲಾ ದೇವತೆಗಳ ಸ್ವರೂಪನಾಗುವನು.

ಈ ಉಪನಿಷತ್ತಿನ ವಾಕ್ಯಗಳಿಂದ ನಮಗೆ ಕೆಲಮಟ್ಟಿಗೆ ತತ್ವಜ್ಞಾನದ ಪರಿಚಯವಾಗಿ ಈ ನಾಮರೂಪಾತ್ಮಕವಾದ ಜಗತ್ತಿನ ಜಾಲದಲ್ಲಿ ಸಿಗದೆ ಇದರ ಆಚೆಗಿರುವ ಪರಮಾತ್ಮ ತತ್ವವನ್ನು ತಿಳಿಯಬೇಕಾದುದೆಂದೂ

ಆತನೇ ನಮ್ಮ ಸ್ವರೂಪವೆಂದೂ, ಆತನನ್ನು ತಿಳಿದವನೇ ಮುಕ್ತನಾಗುವ ನೆಂದೂ, ಮುಕ್ತಿಯೆಂದರೆ ಅಜ್ಞಾನ ತತ್ಕಾರ್ಯದ ಅತ್ಯಂತ ಅಭಾವವಾಗಿ ಆ ಪರಮಾತ್ಮನಲ್ಲಿ ಬೆರೆತು ಪರಮಾತ್ಮನೇ ಆಗುವುದೆಂದೂ, ಇದೇ ವೇದೋ ಪನಿಷತ್ತುಗಳ ಅಂತಿಮ ಸಿದ್ಧಾಂತವೆಂದೂ ಚೆನ್ನಾಗಿ ಮನದಟ್ಟಾಯಿತು. ಆ ಪರಮಾತ್ಮೈಕ್ಯವನ್ನು ಪಡೆದವರ ಆತ್ಮಗೀತವನ್ನು ಈಗ ಸ್ವಲ್ಪ ಮಾತ್ರ ಆಲಿಸೋಣ. ಇದರಿಂದ ಜೀವಬ್ರಹ್ಮೈಕ್ಯದ ಬಗ್ಗೆ ಎತ್ತಲಾಗಿನ ದಾದರೂ ಸ್ವಲ್ಪ ಸಂಶಯವುಳಿಯುವಲ್ಲಿಯೂ ಅದು ಬಿಸಿಲಲ್ಲಿದ್ದ ಮಂಜಿ ನಂತೆ ಕರಗಿಹೋಗುವುದು.

## ಆತ್ಮನಿಷ್ಠರ ಆತ್ಮಗೀತ

"ವೇದಾಹಮೇತಂ ಪುರುಷಂ ಮಹಾಂತಂ ಆದಿತ್ಯವರ್ಣಂ ತಮಸಃ ಪರಸ್ತಾತ್" (ಪು. ಸೂ.). ಈ ಮಹಾಮಹಿಮನಾದ ಪುರುಷನನ್ನು ನಾನು ತಿಳಿದಿರುವೆನು. ಅಜ್ಞಾನರೂಪವಾದ ತಮಸ್ಸಿನಿಂದ ತೋರಿಬರುವ ಈ ಚರಾಚರ ವಿಶ್ವದ ಆಚೆಗೆ ಆ ಪರಮಾತ್ಮನ ಸ್ವರೂಪವು ಆದಿತ್ಯನ ಪ್ರಕಾಶದಂತೆ ಸ್ವಪ್ರಕಾಶವಾಗಿ ತನ್ನ ಜ್ಞಾನ ಮಾತ್ರತೆಯಿಂದಲೂ ಕೇವಲ ಆನಂದಘನತೆಯಿಂದಲೂ ಸ್ವಮಾತ್ರವಾಗಿ ಬೆಳಗುತ್ತಲಿರುವುದು. ನಾನು ಆ ಪರಮಾತ್ಮತತ್ವವೇ ಸರಿ.

"ಇಹೈವ ಸಂತೋಽಥ ವಿದ್ಮಸ್ತದ್ವಯಂ ನ ಚೇದವೇದಿರ್ಮ ಹತೀ ವಿನಷ್ಟಿಃ। ಯೇ ತದ್ವಿದುರಮೃತಾಸ್ತೇ ಭವಂತ್ಯಥೇತರೇ ದುಃಖ ಮೇವಾಪಿಯಂತಿ ॥" (ಬೃ. ಅ. ೪, ಬ್ರಾ. ೪, ಮಂ. ೧೪). ಈ ಲೋಕ ದಲ್ಲಿಯೇ ಈ ದೇಹದಲ್ಲಿಯೇ ಆ ಪರಮಾತ್ಮ ತತ್ವನೇ ನಾವೆಂದು ತಿಳಿದಿರು ವೆವು. ಈ ಲೋಕದಲ್ಲಿಯೇ ಈ ದೇಹದಲ್ಲಿಯೇ ಆ ಪರಮಾತ್ಮತತ್ವವನ್ನು ತಾನೆಂದು ಅರಿಯದಿದ್ದರೆ ಮಹಾ ವಿನಾಶವೇ ಆಗುವುದು. ದೊಡ್ಡ ವಿಪತ್ತಿಗೆ ಗುರಿಯಾಗಬೇಕಾಗಿ ಬರುವುದು. ಅತ್ಯಂತ ಅಹಿತ ಆಗುವುದು. ಹೇಳತೀರದಷ್ಟು ದುಃಖವಾಗುವುದು. ನಾವು ಆ ಅದ್ವಯ ಬ್ರಹ್ಮವನ್ನು ತಿಳಿದೆವು. ಆದುದರಿಂದ ಆ ಎಲ್ಲಾ ಅನಿಷ್ಟ ಪರಂಪರೆಯಿಂದ ನಾವು ಸರ್ವಥಾ ಮುಕ್ತರಾಗಿದ್ದೇವೆ. ಕೇವಲ ಆನಂದರೂಪವಾಗಿಯೇ ಇದ್ದೇವೆ.

ಅವಿನಾಶಿಯಾಗಿ ಇದ್ದೇವೆ. ನಮ್ಮಂತೆ ಅದನ್ನು ತನ್ನ ಸ್ವರೂಪವೆಂದು ಯಾರು ತಿಳಿದುಕೊಳ್ಳುವರೋ ಅವರು ಸಹ ನಮ್ಮಂತೆ ಆಗುವರು. ಇತರರು ಮಾತ್ರ ದುಃಖವನ್ನೇ ಹೊಂದುವರು. ಈ ಜ್ಞಾನವಾಗುವವರೆಗೆ ಅವರಿಗೆ ದುಃಖ ತಪ್ಪಿದ್ದೇ ಇಲ್ಲ.

"ಅಹಂ ವೃಕ್ಷಸ್ಯರೇರಿವಾ । ಕೀರ್ತಿಃ ಪೃಷ್ಠಂ ಗಿರೇರಿವ। ಊರ್ಧ್ವಪವಿತ್ರೋ ವಾಜಿನೀವಸ್ವಮೃತಮಸ್ಮಿ ॥ ದ್ರವಿಣಂಸವ ರ್ಚಸಮ್ । ಸುಮೇಧಾ ಅಮೃತೋಕ್ಷಿತಃ । ಇತಿ ತ್ರಿಶಂಕೋರ್ವೇ ದಾನುವಚನಂ ॥" (ತೈತ್ತರೀಯ). ನಾನು ನಾಶವತ್ತಾದ ಈ ವಿಶ್ವ ವೃಕ್ಷಕ್ಕೆಲ್ಲಾ ಅವಿನಾಶಿಯಾದ ಮೂಲರೂಪನು. ಇದರ ನಿಜವಾದ ಕಾರಣನು. ಅಧಿಷ್ಠಾನರೂಪದಿಂದ ತನ್ನ ಸತ್ತಾಮಾತ್ರತೆಯಿಂದ ಪ್ರೇರ ಕನು; ಸಾಕ್ಷಿಯು. ನನ್ನ ಕೀರ್ತಿಯು ಮೇರುಪರ್ವತ ಶಿಖರದಂತೆ ಅತಿ ಉನ್ನತವಾಗಿರುವುದು. "ಊರ್ಧ್ವಮೂಲೋಽವಾಕ್ ಶಾಖಃ" ಎಂಬಂತೆ ಈ ವಿಶ್ವವೃಕ್ಷವ ಪವಿತ್ರವಾದ ಮೂಲವು ಊರ್ಧ್ವವಾಗಿರು ವುದರಿಂದ ಆ ರೂಪವಾಗಿರುವ ನಾನೂ ಸಹ ಊರ್ಧ್ವಪವಿತ್ರನು. ದೇಹದ ಊರ್ಧ್ವಭಾಗದಲ್ಲಿದ್ದ ಶಿರಸ್ಸಿನ ಬ್ರಹ್ಮರಂಧ್ರದಲ್ಲಿ ಬ್ರಹ್ಮೈಕ್ಯವನ್ನು ಪಡೆದ ಜೀವಿಯು ಯಾವಾಗ್ಯೂ ತುರೀಯ ಸ್ಥಿತಿಯಲ್ಲಿ ನೆಲಸಿರುವನು ಎಂಬ ಶ್ರುತಿಯ ಹೇಳಿಕೆಯ ಪ್ರಕಾರವಾಗಿಯೂ ನಾನು ಊರ್ಧ್ವಪವಿತ್ರನಾಗಿಹೆನು.

"ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ ಸ ಏಕಃ" ಈ ದೇಹದಲ್ಲಿಯೂ ಆ ಸೂರ್ಯಮಂಡಲದಲ್ಲಿಯೂ ಇರುವಂತಹವನು ಒಬ್ಬನೇ. ಸೂರ್ಯನು ಅಮೃತಸ್ವರೂಪನಾದ ಪವಿತ್ರ ಆತ್ಮತತ್ವನಾಗಿ ಇದ್ದಂತೆ ನಾನೂ ಸಹ ವಿಶುದ್ಧವಾದ ಅಮೃತ ಆತ್ಮತತ್ವನಾಗಿರುವೆನು. ಅನೇಕ ಸಾಧನಗಳಿಂದ ತಡೆದ ಸ್ವಯಂಪ್ರಕಾಶವಾದ ಆತ್ಮಸುಖದ ಸಂಪತ್ತೇ ನಾನು.

ಸ ಯೋ ಹ ವೈ ತದಚ್ಛಾಯಮಶರೀರಮಲೋಹಿತಂ ಶುಭ್ರ ಮಕ್ಷರಂ ವೇದಯತೇ ಯಸ್ತು ಸೋಮ್ಯ ಸ ಸರ್ವಜ್ಞಃ ಸರ್ವೋ ಭವತಿ ॥ ಯಾವ ವಿರಕ್ತನು ಆ ಅಜ್ಞಾನಾವರಣ ರಹಿತ ನಿತ್ಯ ಬೋಧ ಸ್ವರೂಪನಾದ ನಿರ್ಗುಣ ನಿರಾಕಾರವಾದ ಅತಿ ಪರಿಶುದ್ಧವಾದ ಅವಿನಾಶಿ

ಸ್ವರೂಪವನ್ನು ತಿಳಿಯುವನೋ ಆತನು ಸರ್ವಜ್ಞನಾಗುವನು— ಸರ್ವನಾಗುವನು. ನಾನು ಸರ್ವಜ್ಞತೆ ಸರ್ವಶಕ್ತಿಯುಳ್ಳ ಅತಿ ಸೂಕ್ಷ್ಮ ಆತ್ಮಬುದ್ಧಿಯುಳ್ಳವನು. ಸಂಸಾರದ ಯಾವ ಕರ್ಮವೂ ಅಂಟಿಕೊಳ್ಳದಂತೆ ನನ್ನನ್ನು ಅಸಂಗವಾಗಿ ಇರಿಸಬಲ್ಲ ಅತಿ ಚತುರ ನಾನು. ಯಾವ ವಿಧದಿಂದಲೂ ನನಗೆ ನಾಶವಿಲ್ಲ. ನನ್ನ ಈ ಸ್ಥಿತಿಯು ಕ್ಷೀಣವಾಗುವಂತಹದೂ ಇಲ್ಲ. ಅಂತಃಕರಣದ ವಿಶಾಲತೆಯನ್ನು ಮೀರಿ ಉಕ್ಕಿ ಬಂದು ಹೊರಸೂಸಿ ಅನಂತಾನಂತ ಜೀವಿಗಳ ಉದ್ಧಾರಕ್ಕಾಗಿ ವಿಶ್ವವನ್ನೆಲ್ಲಾ ವ್ಯಾಪಿಸುವ ತ್ರಿಶಂಕುವಿನ ಆತ್ಮಾನಂದದ ಪರಮ ಪವಿತ್ರ ಪ್ರವಾಹವಿದು.

ಹಾ೩ವು ಹಾ೩ವು ಹಾ೩ವು । ಅಹಮನ್ನಮಹಮನ್ನಮಹಮನ್ನಂ । ಅಹಮನ್ನಾದೋ೩ಹಮನ್ನಾದೋಽಹಮನ್ನಾದಃ । ಅಹꣳಶ್ಲೋಕ ಕೃದಹꣳಶ್ಲೋಕ ಕೃದಹꣳಶ್ಲೋಕ ಕೃತ್ ॥ ಅಹಮಸ್ಮಿ ಪ್ರಥಮಜಾ ಋತಾ೩ಸ್ಯ । ಪೂರ್ವಂ ದೇವೇಭ್ಯೋಽಮೃತಸ್ಯ ನಾ೩ಭಾಯಿ । ಯೋಮಾ ದದಾತಿ ಸ ಇದೇವ ಮಾ೩ವಾಃ । ಅಹಮನ್ನಮನ್ನಮದಂತಮಾ೩ದ್ಮಿ । ಅಹಂ ವಿಶ್ವಂ ಭುವನಮಭ್ಯಭವಾಂ । ಸುವ ರ್ನ ಜ್ಯೋತೀಃ । ಯ ಏವಂ ವೇದ ಇತ್ಯುಪನಿಷತ್ ॥ (ತೈ. ಭೃ. ಅ. ೧೦). ಹಾ೩ವು ಹಾ೩ವು ಹಾ೩ವು ಈ ಮೂರು ಶಬ್ದಗಳು ಆನಂದದ ಉದ್ರೇಕದಿಂದ ಹೊರಹೊಮ್ಮಿರುವ ಸ್ವೈರ ಆಲಾಪಗಳು. ಇವು ಆನಂದಾತಿರೇಕವನ್ನು ಕಾಣಿಸುವುವು. ಆ ಆನಂದರೂಪವಾದ ಬ್ರಹ್ಮವೇ ನಾನು. 'ಆನಂದೇನ ಜಾತಾನಿ ಜೀವಂತಿ' ಎಂಬಂತೆ ನನ್ನ ಆನಂದದಿಂದಲೇ ಎಲ್ಲಾ ಜೀವಿಗಳೂ ಜೀವಿಸಿರುವುವಾದ್ದರಿಂದ ನಾನು ಆ ಆನಂದ ರೂಪವಾದ ಈ ಎಲ್ಲಾ ಜೀವಿಗಳ ದಿವ್ಯ ಅನ್ನರೂಪವಾಗಿರುವೆನು (ಇಂತಹ ಆನಂದ ಮಾತ್ರವಾಗಿರುವಂಥ ಅನ್ನರೂಪವಾಗಿರುವೆನು). ಜೀವಿಗಳ ಜೀವಕ್ಕೆ ಕಾರಣವಾದ ಈ ಸ್ವರೂಪಾನಂದರೂಪವಾದ ಅನ್ನವೇ ನಾನು.

'ಕೋಹ್ಯೇವಾನ್ಯಾತ್ಕಃ ಪ್ರಾಣ್ಯಾತ್ । ಯದೇಷ ಆಕಾಶ ಆನಂದೋ ನ ಸ್ಯಾತ್' ವಿಶ್ವದ ಈ ಎಲ್ಲೆಡೆಯಲ್ಲಿಯೂ ತುಂಬಿತುಳುಕುವ ತನ್ನ ಪ್ರಕಾಶದಿಂದಲೇ ಬೆಳಗುತ್ತಿರುವ ಈ ಆನಂದವನ್ನು ಬಿಟ್ಟು ಯಾವ

ಅನ್ಯಸಾಧನದಿಂದ ಈ ಜೀವಿಗಳು ಬದುಕುವರು? ಸ್ವರೂಪಾನಂದವೇ ನನ್ನ ಅನ್ನ. ಆದುದರಿಂದ ನಾನು ಈ ಆನಂದವನ್ನು ಭುಜಿಸುವವನೂ ಆಗಿರುವೆನು. ನಾನು ಅನ್ನರೂಪನಾದಂತೆ ಅನ್ನವನ್ನು ಸೇವಿಸುವವನೂ ಆಗಿಹೆನು. ಈ ಸ್ವರೂಪದ ಆನಂದದಿಂದಲೇ ನಾನು ತೃಪ್ತಿಗೊಂಡಿರುವೆನು. ಈ ಸ್ವರೂಪಾನಂದದ ರಸಾಸ್ವಾದದಲ್ಲಿಯೇ ನಾನು ಮೈಮರೆತಿರುವೆನು. ಈ ಸ್ವರೂಪಾನಂದದಲ್ಲಿಯೇ ಮೈಮರೆತಿರುವಾಗ ಯಾವುದರ ಆಶೆ ತಾನೆ ನನಗಾದೀತು? ಇದಕ್ಕಿಂತಲೂ ಹೆಚ್ಚಿನ ಆನಂದವು ಯಾವುದಿದೆ? ಆಹಾ! ಈ ನಿರತಿಶಯ ಆನಂದವೇ ನಾನು ನಿತ್ಯದಲ್ಲಿ ಭುಜಿಸುವ ದಿವ್ಯಾನ್ನವಾಗಿರುವುದು. ಎಲ್ಲಾ ಸತ್ಕೀರ್ತಿಗೆ ನಾನೇ ಕಾರಣ. ಎಲ್ಲಾ ಸತ್ಕೀರ್ತಿಯೂ ನನ್ನದೇ. ಎಲ್ಲಾ ಸತ್ಕೀರ್ತಿಗೆ ಕಾರಣವಾದ ಸತ್ಕರ್ಮಗಳನ್ನು ಮಾಡುವವನೂ ನಾನೇ. ಮಾಡಿಸುವವನೂ ನಾನೇ. ಶ್ರುತಿಯು ಯಾವಾತನ ವಿಶುದ್ಧ ಕೀರ್ತಿಗಾನವನ್ನು ಅನವರತ ಮಾಡುತ್ತಲಿಹುದೋ ಆ ಅಪಾರ ಮಹಿಮಾಶಾಲಿಯೇ ನಾನು. ಈ ಚರಾಚರ ವಿಶ್ವದ ಕರ್ಮಾಧ್ಯಕ್ಷನಾಗಿಯೂ, ಫಲಪಾತನಾಗಿಯೂ, ಸ್ವಾಮಿಯಾಗಿಯೂ, ಜಗದಾದಿಯಲ್ಲಿ ಜನಿಸಿದ ಹಿರಣ್ಯಗರ್ಭನೂ ನಾನೇ. ಎಲ್ಲಾ ದೇವತೆಗಳ ಪೂರ್ವದಲ್ಲಿ ಜನಿಸಿದ ಆ ವಿರಾಟ್ಪುರುಷನೂ ನಾನೇ. ಪ್ರಾಣಿಗಳ ಮೋಕ್ಷಕ್ಕೆ ಕಾರಣನಾಗಿರುವ ಮೋಕ್ಷಪಾಣಿಯಾದ ಸದ್ಗುರುವೂ ನಾನೇ. ನಾಭಿಯ ಕಂದದಿಂದಲೇ ಎಲ್ಲಾ ನಾಡಿಗಳೂ ಶರೀರವನ್ನು ವ್ಯಾಪಿಸಿಕೊಂಡಿರುವಂತೆ ವಿಶ್ವದ ನಾಭಿರೂಪನಾಗಿರುವ ನನ್ನಿಂದಲೇ ಆನಂದ ಜೀವರೂಪವಾದ ನಾಡಿಗಳೂ ವಿಶ್ವದಲ್ಲೆಲ್ಲಾ ಹಬ್ಬಿಕೊಂಡಿರುವುವು. ಚಕ್ರದ ಎಲ್ಲಾ ಹಲ್ಲುಗಳು ಚಕ್ರದ ನಾಭಿಯಲ್ಲಿ (ಗಡ್ಡೆಯಲ್ಲಿ) ಹೇಗೆ ಸೇರಿರುವುವೋ ಹಾಗೆಯೇ 'ಅರಾ ಇವ ರಥನಾಭೌ' ಈ ಎಲ್ಲಾ ಜೀವಿಗಳೂ ಮೋಕ್ಷಕ್ಕಾಗಿ ನನ್ನಲ್ಲಿಯೇ ಸೇರುವುವು. ಶರೀರದ ನಾಭಿಯಿಂದಲೇ ಅನ್ನರಸವು ನಾಡಿಗಳ ಮೂಲಕವಾಗಿ ದೇಹದ ಜೀವನಕ್ಕಾಗಿ ಹೇಗೆ ಹಂಚಲ್ಪಡುವುದೋ ಅಂತೆಯೇ ಎಲ್ಲದಕ್ಕೂ ಮೂಲಸ್ಥಾನವಾದ, ವಿಶ್ವಕ್ಕೆ ನಾಭಿಯಂತಿರುವ ಆನಂದ ಘನಸ್ವರೂಪನಾದ ನನ್ನಿಂದ ವಿಶ್ವಜೀವನದ ಆನಂದವು ಸಾಧನೆಗಳ ಮೂಲಕವಾಗಿ ವಿಶ್ವದಲ್ಲೆಲ್ಲಾ ಹಂಚಲ್ಪಡುವುದು. ಇದು ಭೃಗುವಿನ

ಆತ್ಮಗೀತವು. ಛಾಂದೋಗ್ಯದ ಏಳನೆ ಅಧ್ಯಾಯದ ೨೬ನೇ ಖಂಡದಲ್ಲಿ ಆತ್ಮಜ್ಞಾನದ ಫಲಶ್ರುತಿಯು ಹೇಳಲ್ಪಟ್ಟಿದೆ.

ನ ಪಶ್ಯೋ ಮೃತ್ಯುಂ ಪಶ್ಯತಿ
ನ ರೋಗಂ ನೋತದುಃಖತಾಂ ।
ಸರ್ವಂ ಹ ಪಶ್ಯಃ ಪಶ್ಯತಿ
ಸರ್ವಮಾಪ್ನೋತಿ ಸರ್ವಶಃ ॥

ಆತ್ಮದೃಷ್ಟಿಯುಳ್ಳವನು ಮೃತ್ಯುವನ್ನೂ ಕಾಣುವುದಿಲ್ಲ; ರೋಗವನ್ನೂ ಕಾಣುವುದಿಲ್ಲ; ದುಃಖವನ್ನೂ ಕಾಣುವುದಿಲ್ಲ. ಆತ್ಮನು ಎಲ್ಲೆಡೆಯಲ್ಲಿಯೂ ಹರಡಿರುವ ತನ್ನ ಒಂದು ಆನಂದಘನಸ್ವರೂಪವನ್ನೇ ಕಾಣುವನು. ಸರ್ವಪ್ರಕಾರವಾಗಿ ಎಲ್ಲವನ್ನೂ ತನ್ನ ಈ ಆನಂದಘನಸ್ವರೂಪದಿಂದ ವ್ಯಾಪಿಸುವನು. ಈ ಎಲ್ಲಾ ಉದಾಹರಣೆಗಳಿಂದ ಶ್ರುತಿಯ ಹೃದಯವು, ಶ್ರುತಿಯ ಮಹತ್ವವು, ಶ್ರುತಿಯು ಜೀವಿಗಳಿಗೆ ಮಾಡಿದ ಉಪಕಾರವು, ಶ್ರುತಿಯ ಉಪದೇಶದ ಪಾಲನೆಯಿಂದ ದೈಗೂಡುವ ಮಹತ್ವವು, ಜೀವಿಗೆ ಸಿಗುವ ನಿರತಿಶಯ ಆನಂದವು ಸ್ಪಷ್ಟವಾಗುವುದು. ಶ್ರುತಿಯ ಉಪದೇಶದ ಕ್ರಮವನ್ನು ಇನ್ನೂ ತಿಳಿಯೋಣ. ಶ್ರುತಿಯು ಪಾರಮಾರ್ಥಿಕ ನಿರತಿಶಯ ಸುಖಕ್ಕಾಗಿ ಹೇಗೆ ಮಾರ್ಗದರ್ಶನ ಮಾಡುವದೋ ಅಂತೆಯೇ ಇದನ್ನು ಸಾಧಿಸುವುದಕ್ಕಾಗಿ ಕಾರಣವಾಗಿರುವ ವ್ಯಾವಹಾರಿಕ ಜೀವನದ ಉನ್ನತ ಆದರ್ಶಜೀವನವನ್ನು ಬೋಧಿಸುವುದು. ಪರಸ್ಪರ ಸೌಹಾರ್ದತೆ ಮತ್ತು ಸಹಕಾರತೆ ವ್ಯಾವಹಾರಿಕ ಜೀವನದಲ್ಲಿ ಅವಶ್ಯಕವಾದದ್ದು.

## ಶ್ರುತಿಯಲ್ಲಿ ಸಂಘಟನೆ

'ಸಂಘಟನೆ' ಇದೊಂದು ಸಾಮಾಜಿಕ ಜೀವನದ ಮುಖ್ಯಾಂಗವಾಗಿದೆ. ಈ ಸಂಘಟನೆಯಿಂದಲೇ ಕುಟುಂಬ, ಕುಲ, ಜಾತಿ, ಸಮಾಜ, ರಾಷ್ಟ್ರ ಜಗತ್ತು ನಿರ್ಭಯವಾಗಿ ಬಾಳಿ ಸುಖಸಂತೋಷದ ದಿವ್ಯ ಜೀವನವನ್ನು ಶಾಂತಿ ಸಮಾಧಾನದಿಂದ ಸರಾಗವಾಗಿ ಸಾಗಿಸುವುದು.

'ಸಂಗಚ್ಛಧ್ವಂ ಸಂವದಧ್ವಂ ಸಂವೋ ಮನಾಂಸಿ ಜಾನತಾಂ ।
ದೇವಾಭಾಗಂ ಯಥಾ ಪೂರ್ವೇ ಸಂಜಾನಾನಾ ಉಪಾಸತೇ ॥

(ಋ. ೧೦-೧೯೧-೨). ನೀವೆಲ್ಲರೂ ಸೇರಿಯೇ ನಿಮ್ಮ ಉತ್ಕರ್ಷವನ್ನು ಸಾಧಿಸಿರಿ. ಪ್ರಗತಿಗಾಗಿ ಪ್ರಯತ್ನಮಾಡಿರಿ. ನೀವೆಲ್ಲರೂ ಸೇರಿಯೇ ವಿಚಾರ ವಿನಿಮಯವನ್ನು ನಡೆಯಿಸಿರಿ. ಪರಸ್ಪರರಲ್ಲಿ ಪ್ರೇಮದ ಮೃದು-ಮಧುರ ನುಡಿಯನ್ನಾಡಿರಿ. ಪರಸ್ಪರರಲ್ಲಿ ಸೌಹಾರ್ದತೆಯನ್ನು ಇಡಿರಿ. ಸಹಕಾರತೆಯನ್ನು ನೀಡಿರಿ. ನಿಮ್ಮ ವಿದ್ವಾಂಸರಾದ ಪೂರ್ವಜರೆಲ್ಲರೂ ಸೇರಿಯೇ ವಿಚಾರವನ್ನು ಮಾಡುತ್ತಿದ್ದರು. ಸತ್ಕಾರ್ಯಗಳನ್ನು ಅನುಷ್ಠಿಸುತ್ತಿದ್ದರು. ತಮ್ಮ ತಮ್ಮ ವರ್ಣಾಶ್ರಮೋಕ್ತ ಅಧಿಕಾರದ ಪ್ರಕಾರ ಆಚರಣವನ್ನು ಇಟ್ಟು ಪರಮಾತ್ಮನನ್ನು ಸಂತೋಷಗೊಳಿಸುತ್ತಿದ್ದರು. '**ಸಮಾನೋ ಮಂತ್ರಃ ಸಮಿತಿಃ ಸಮಾನೀ ಸಮಾನಂ ಮನಃ ಸಹ ಚಿತ್ತಮೇಷಾಂ। ಸಮಾನಂ ಮಂತ್ರಮಭಿಮಂತ್ರಯೇ ವಃ ಸಮಾನೇನ ವೋ ಹವಿಷಾ ಜುಹೋಮಿ ॥** (ಋ. ೧೦-೧೯೧-೩). ನಿಮ್ಮೆಲ್ಲರ ವಿಚಾರವೂ ರಹಸ್ಯವಾದ ಆಲೋಚನೆಯೂ, ಮುಂದಿನ ಆಲೋಚನೆಯೂ, ಸಂಘಟನವೂ, ಮನಸ್ಸೂ, ಸಂಕಲ್ಪವೂ, ಚಿತ್ತವೂ, ಚಿಂತನದ ವಿಷಯವೂ ಒಂದೇ ಸಮವಾಗಿರಲಿ; ಅದು ನಿಮ್ಮೆಲ್ಲರ ಉನ್ನತಿಗೆ ಕಾರಣವಾಗಿರಲಿ; ನಿಮ್ಮ ಅಭ್ಯುದಯ ನಿಶ್ಶ್ರೇಯಸಗಳಿಗೆ ಸರ್ವತೋಪರಿ ಸಾಧಕವಾಗಿರಲಿ. ನಿಮ್ಮೆಲ್ಲರಿಗೂ ಸರ್ವಸಮಾನವಾಗಿ ಉಪದೇಶಿಸುತ್ತೇನೆ. ನಿಮ್ಮೆಲ್ಲರ ಯೋಗಕ್ಷೇಮವನ್ನೂ ಸಮವಾಗಿ ನಡೆಸುತ್ತೇನೆ.

**ಸಮಾನೀ ವ ಆಕೂತಿಃ ಸಮಾನಾ ಹೃದಯಾನಿ ವಃ । ಸಮಾನಮಸ್ತು ವೋ ಮನೋ ಯಥಾ ವ ಸ್ಸು ಸಹಾಸತಿ ॥** ನಿಮ್ಮಲ್ಲಿ ಒಗ್ಗಟ್ಟಿರುವಂತೆಯೂ, ನಿಮಗೆ ಪರಸ್ಪರ ಸಹಾನುಭೂತಿ ಇರುವಂತೆಯೂ, ಪರಸ್ಪರರಲ್ಲಿ ಪ್ರೇಮ ಬೆಳೆಯುವಂತೆಯೂ, ಪರಸ್ಪರರಿಗೆ ಪರಸ್ಪರ ಸಹಾಯ ಒದಗುವಂತೆಯೂ, ನೀವೆಲ್ಲರೂ ಏಕೀಭಾವದಿಂದ ಜಾಗೃತಿಕ, ಸಾಮಾಜಿಕ, ಆರ್ಥಿಕ, ಲೌಕಿಕ ಮತ್ತು ಪಾರಮಾರ್ಥಿಕ ಕರ್ತವ್ಯಗಳನ್ನು ನಿರ್ವಹಿಸುವಂತೆಯೂ, ರಾಜಕೀಯ ಭಾಗದಲ್ಲಿ ವಿಮತವಾಗದಂತೆಯೂ ನಿಮ್ಮೆಲ್ಲರ ಅಭಿಪ್ರಾಯ, ಹೃದಯ, ಸಂಕಲ್ಪ, ಆಲೋಚನೆ, ಭಾವನೆ, ವಾಸನೆ, ಮನಸ್ಸು ಸಮಾನವಾಗಿರತಕ್ಕದ್ದು. ಶ್ರುತಿಯು ಸಂಘಟನೆಗಾಗಿ ಎಷ್ಟೊಂದು ಉಪದೇಶಮಾಡುವುದು ! ಸಂಘಟನದಲ್ಲಿ ದೊಡ್ಡ ಶಕ್ತಿ

ಉಂಟಾಗುವುದು. ಸಂಘಟನವೇ ಶಕ್ತಿ. ಸಂಘಟನವಿದೊಂದು ಸಮಾಜದ ಅಭೇದ್ಯ ಕವಚವಿದೆ. ಹನಿ ಹನಿ ಕೂಡಿ ಹಳ್ಳ. ಹಳ್ಳ ಹಳ್ಳ ಕೂಡಿ ಸಮುದ್ರವಾಗುವುದು. ದುರ್ಬಲರ ಸಂಘಟನೆಯಿಂದ ಏನಾದೀತೆಂದು ಗ್ರಹಿಸಬಾರದು. ಪ್ರತಿ ಒಬ್ಬರಲ್ಲಿಯೂ ಪರಮಾತ್ಮನ ಅಂಶವಿದೆ. ಸಂಘಟನವಾದ ಹಾಗೆಲ್ಲಾ ಅಲ್ಲಿ ಪರಮಾತ್ಮನ ಹೆಚ್ಚಿನ ಕಲಾವಿರ್ಭಾವ ವಾಗುವುದು. ಅದರಿಂದ ಹೆಚ್ಚಿನ ಕಾರ್ಯವು ಕೈಗೂಡುವುದು.

ವೈದಿಕ ಆರ್ಯಸಂಸ್ಕೃತಿಯ ಲಕ್ಷಣಗಳು ತಿಳಿದುಬರುವುದಕ್ಕಾಗಿ ವೇದೋಪನಿಷತ್ತುಗಳ ಕೆಲ ಕೆಲವು ಪ್ರಮಾಣವಾಕ್ಯಗಳನ್ನು ಸ್ವಲ್ಪಮಟ್ಟಿಗೆ ಪರಿಶೀಲಿಸೋಣ. ಇದರಿಂದ ಆರ್ಯಸಂಸ್ಕೃತಿಯ ಸಾಮ್ಯವಾದದ ಪರಿಚಯವು ಆಗುವುದು.

## ಆರ್ಯಸಂಸ್ಕೃತಿಯ ಸಾಮ್ಯವಾದ

ಈಶಾ ವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ।
ತೇನ ತ್ಯಕ್ತೇನ ಭುಂಜೀಥಾ ಮಾ ಗೃಧಃ ಕಸ್ಯಸ್ವಿದ್ಧನಂ ॥
(ಶುಕ್ಲಯಜುರ್ವೇದ ೪೦-೧)

ಇದೆಲ್ಲವೂ ಪರಮಾತ್ಮನಿಂದಲೇ ವ್ಯಾಪಿಸಲ್ಪಟ್ಟದ್ದು. ಈ ಎಲ್ಲದರಲ್ಲಿಯೂ ಪರಮಾತ್ಮನಿರುವನು. ಆದುದರಿಂದ ಈ ಜಗತ್ತಿನಲ್ಲಿ ಎಷ್ಟು ಜೀವಿಗಳು ಮತ್ತು ಪದಾರ್ಥಗಳಿರುವವೋ ಆ ಎಲ್ಲರನ್ನೂ, ಆ ಎಲ್ಲವನ್ನೂ ನೀನು ಪರಮಾತ್ಮನ ಸ್ವರೂಪದಿಂದಲೇ ಕಾಣತಕ್ಕದ್ದು. ಆ ಪರಮಾತ್ಮನು ಎಲ್ಲರ ಯೋಗಕ್ಷೇಮವನ್ನೂ ನಡೆಸುವನು. ಅವರವರ ಕರ್ಮದ ಪ್ರಕಾರ ಫಲವನ್ನು ಕೊಡುವನು. ಆದುದರಿಂದ ನಿನ್ನ ಕರ್ಮದ ಪ್ರಕಾರ ನಿನಗೆ ಅವನಿಂದ ಒದಗಿರುವ ಅನುಕೂಲತೆಯಲ್ಲಿ ಕೊಡಲ್ಪಟ್ಟ ಭೋಗಸಾಧನೆಗಳಲ್ಲಿಯೇ ಸಂತುಷ್ಟನಾಗಿರು. ಅವುಗಳನ್ನೇ ಅನುಭವಿಸು. ಪರರ ಸ್ವತ್ತಿನ ಮೇಲೆ ನೀನು ಕಣ್ಣಿಡಬೇಡ. ಅದನ್ನು ನೀನು ಅಭಿಲಾಷಿಸಬೇಡ. ಜಗತ್ತಿನ ವ್ಯವಹಾರ ಸರಾಗವಾಗಿ ನಡೆಯಲು ವ್ಯಕ್ತಿ ಸಮಾಜದ ಕರ್ತವ್ಯ ರೂಪದಿಂದ ಶ್ರಮ ವಿಭಾಗವಾಗಿರುವುದು. ಜಗತ್ತಿನ ಜೀವನ ಸರಾಗವಾಗಿ ಸಾಗಲು ವ್ಯಕ್ತಿ ಸಮಾಜದ ಧನಧಾನ್ಯ ವಿಭಾಗವಾಗಿರುವುದು. ತನ್ನ ಕುಟುಂಬದ ಜೀವನದ ನಿರ್ವಾಹಕ್ಕಾಗಿ ಬೇಕಾದುದನ್ನು ಇಟ್ಟುಕೊಂಡು

ಮಿಕ್ಕ ಧನ ಧಾನ್ಯದ ವಿತರಣೆಯು ಅನ್ಯರಿಗಾಗಿ ಮಾಡತಕ್ಕದ್ದು. ಪರರ ಹಿತಕ್ಕಾಗಿ ಮಾಡುವ ಸತ್ತ್ವದ ತ್ಯಾಗಮಯ ಜೀವನದಿಂದಲೇ ಜೀವಿಸು. ಲೋಭದಿಂದ ಪರರ ಸ್ವತ್ತನ್ನು ಅಭಿಲಾಷಿಸದೆ ತನ್ನ ಸ್ವತ್ತನ್ನು ಪರರಿಗಾಗಿ ವಿನಿಯೋಗಿಸಿ, ಅಪಸ್ವಾರ್ಥವನ್ನು ಬಿಟ್ಟು ಸ್ವಪರಹಿತದ ತ್ಯಾಗಮಯ ದಿವ್ಯಜೀವನವನ್ನು ಸಾಗಿಸು.

> ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ ।
> ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮಲಿಪ್ಯತೇ ನರೇ ॥
> (ಶುಕ್ಲ ಯಜುರ್ವೇದ ೪೦-೨)

ಎಲ್ಲಾ ವಿಧದಿಂದಲೂ ಉನ್ನತ ಉತ್ಕೃಷ್ಟವಾದ ಕರ್ಮಗಳನ್ನು ಮಾಡುತ್ತಾ ತನ್ನ ಧರ್ಮ ಕರ್ಮಗಳಂತೆ ನಡೆದು, ತನ್ನ ವ್ಯಾವಹಾರಿಕ, ಪಾರಮಾರ್ಥಿಕ ಹಾಗೂ ಶ್ರೌತ ಸ್ಮಾರ್ತ ಪುರಾಣೋಕ್ತ ಕರ್ಮಗಳಿಂದ ದೇವ-ಪಿತೃ-ಸಜ್ಜನರನ್ನು ಸಂತೃಪ್ತಿಸುತ್ತಾ ಪರೋಪಕಾರದ ಕರ್ಮಗಳಿಂದ ಜನತೆಯನ್ನು ಸಂತುಷ್ಟರನ್ನಾಗಿ ಇಡಿಸಿ, ತನ್ನ ಕುಲ-ಧರ್ಮ-ಕುಲಾಚಾರವನ್ನು ಪರಿಪಾಲಿಸುತ್ತಾ ಕುಲದೀಪಕನಾಗಿ ಸ್ವಪರ ಉದ್ಧಾರಕವಾದ ಸತ್ಕಾರ್ಯಗಳನ್ನು ಮಾಡುತ್ತಾ ಆವೋಕ್ಷಾವಧಿ ಬಾಳಬೇಕು. ನೂರಾರು ವರ್ಷದವರೆಗೆ ಜೀವಿಸಬೇಕು ಎಂಬುದಾಗಿ ಇಚ್ಛಿಸಬೇಕು. ಇಹಪರದ ಸುಖಗಳಿಗೆ ಇದಕ್ಕಿಂತಲೂ ಇನ್ನೊಂದು ಉಪಾಯವಿಲ್ಲ. ಸ್ವಪರ ಉದ್ಧಾರಕ್ಕಾಗಿ ಆವ ಸ್ವಪರ ಉಪಕಾರವಾದ ಕರ್ಮಗಳು ಮನುಷ್ಯನಿಗೆ ಬಂಧಕವಾಗವು. ಕರ್ಮದ ಫಲವನ್ನು ಅಪೇಕ್ಷಿಸದೆ, ಕರ್ತೃತ್ವ-ಭೋಕ್ತೃತ್ವಗಳ ಅಭಿಮಾನವನ್ನು ಬಿಟ್ಟು, ಸ್ವಪರ ಉದ್ಧಾರಕವಾದ ಕರ್ಮಗಳನ್ನು ಎಸಗುತ್ತಾ ಬಾಳುವುದೇ ಕರ್ಮಬಂಧದ ನಿವೃತ್ತಿಯ ಒಂದು ಉಪಾಯ.

> ಯಸ್ತು ಸರ್ವಾಣಿ ಭೂತಾನ್ಯಾತ್ಮನ್ಯೇವಾನುಪಶ್ಯತಿ ।
> ಸರ್ವಭೂತೇಷು ಚಾತ್ಮಾನಂ ತತೋ ನ ವಿಜುಗುಪ್ಸತೇ ॥
> (ಶುಕ್ಲ ಯಜುರ್ವೇದ ೪೦-೬)

ಯಾವಾತನು ಎಲ್ಲರನ್ನೂ ತನ್ನಲ್ಲಿ, ತನ್ನನ್ನು ಎಲ್ಲರಲ್ಲಿ ಕಾಣುವನೋ, ಆತನು ಎಲ್ಲರ ವಿಷಯದಲ್ಲಿಯೂ ಸರ್ವ ಸಮನಾಗಿರುವನು. ಸಮಪ್ರೀತಿಯಿಟ್ಟು ನಡೆದುಕೊಳ್ಳುವನು.

ಯಸ್ಮಿನ್ ಸರ್ವಾಣಿ ಭೂತಾನ್ಯಾತ್ಮೈವಾ ಭೂದ್ವಿಜಾನತಃ ।
ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ ॥ (ಈಶಾ. ಉಪ.)

ತನ್ನ ಆತ್ಮೀಯತೆಯನ್ನು ಎಲ್ಲರಲ್ಲಿಯೂ ಕಾಣುವವನಿಗೆ, ಎಲ್ಲ ದಲ್ಲಿಯೂ ಇದ್ದ ತನ್ನ ಆತ್ಮರೂಪವನ್ನರಿತವನಿಗೆ ಎಲ್ಲಾ ಭೂತಗಳೂ ತನ್ನ ಸ್ವರೂಪವೇ ಆದಾಗ ಆತನಿಗೆ ಶೋಕ ಎಲ್ಲಿಹುದು? ಮೋಹವಾದರೂ ಎಲ್ಲಿಯದು? ಇದು ಆರ್ಯಸಂಸ್ಕೃತಿಯ ಆಸ್ತಿಕ-ತಾತ್ವಿಕ ಮತ್ತು ಸಾತ್ವಿಕ ಸರ್ವ ಸಾಮ್ಯವಾದವಾಗಿರುವುದು. ಇದು ಆರ್ಯರ ಸಭ್ಯತೆ. ಇದು ಭಾರತೀಯರ ದಿವ್ಯಜೀವನ. ಇದೊಂದು ಜಗದಾದರ್ಶಭೂತ ವಾದ ದಿವ್ಯ ಸಂಸ್ಕೃತಿ. ವ್ಯಕ್ತಿ ಮತ್ತು ಸಮಾಜದ ಸ್ವಾತಂತ್ರ್ಯವನ್ನು ಸಂರಕ್ಷಿಸಿ ಮಾರ್ಪಾಡುಗೊಳಿಸುವ ದಿವ್ಯ ವಿಕಾಸ.

ಸುಹೃನ್ಮಿತ್ರಾರ್ಯುದಾಸೀನ ಮಧ್ಯಸ್ಥದ್ವೇಷ್ಯ ಬಂಧುಷು ।
ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥ (ಗೀತಾ ೬–೯)

ಆಪ್ತೇಷ್ಟರಲ್ಲಿಯೂ, ಬಂಧು ಬಾಂಧವರಲ್ಲಿಯೂ, ಶತ್ರು ಮಿತ್ರ ರಲ್ಲಿಯೂ, ತನ್ನ ವಿಷಯದಲ್ಲಿ ಉದಾಸೀನನಾದವನಲ್ಲಿಯೂ, ಮಧ್ಯಸ್ಥನಾದ ವನಲ್ಲಿಯೂ, ದ್ವೇಷವುಳ್ಳವನಾದವನಲ್ಲಿಯೂ, ಸಜ್ಜನ ದುರ್ಜನರಲ್ಲಿಯೂ ಸಮಬುದ್ಧಿಯುಳ್ಳಾತನೇ ವಿಶೇಷ ಯೋಗ್ಯತೆಯುಳ್ಳವನೆಂದು ಸಮತಾ ವಾದದ ಪರಾಕಾಷ್ಠೆಯ ಸ್ವರೂಪವನ್ನು ಆರ್ಯಸಂಸ್ಕೃತಿಯು ತಿಳಿಸುವುದು.

ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಂ ।
ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ॥ (ಗೀತಾ ೧೩–೨೭)

ನಾಶವಾಗುವ ಎಲ್ಲಾ ಪದಾರ್ಥಗಳಲ್ಲಿಯೂ ತುಂಬಿಕೊಂಡಿರುವ ಅವಿನಾಶಿ ಪರಮಾತ್ಮನನ್ನು ಯಾವಾತನು ಕಾಣುವನೋ ಆತನು ಸರ್ವ ಜ್ಞನಾಗುವನು. ಈತನೊಬ್ಬನಿಗೇ ಜ್ಞಾನದೃಷ್ಟಿಯುಂಟಾಗುವುದು. ಇಂತಹವನಿಗೆ ಮಾತ್ರ ಒಂದು ನಿಜವಾದ ತಾತ್ವಿಕದೃಷ್ಟಿಯುಂಟಾಗುವುದು. ನಿಜವಾದ ಸ್ಥಿತಿಯನ್ನು ಈತನೊಬ್ಬನೇ ನೋಡುವನು.

ಸಮಂ ಪಶ್ಯನ್ಹಿ ಸರ್ವತ್ರ ಸಮವಸ್ಥಿತಮೀಶ್ವರಂ ।
ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಂ ॥ (ಗೀತಾ ೧೩–೨೮)

ಎಲ್ಲರಲ್ಲಿಯೂ ಸಮವಾಗಿ ತುಂಬಿಕೊಂಡಿರುವ ಸರ್ವವ್ಯಾಪಕ ಪರಮಾತ್ಮನನ್ನು ಯಾವಾತನು ಎಲ್ಲೆಡೆಯಲ್ಲಿಯೂ ಸಮವಾಗಿ ನೋಡುವನೋ ಆತನಿಗೆ ತನ್ನಲ್ಲಿಯೂ, ಎಲ್ಲೆಡೆಯಲ್ಲಿಯೂ ಒಂದು ಪರಮಾತ್ಮನೇ ಕಾಣುವನು. ತನ್ನ ಸ್ವರೂಪವೇ ಕಾಣುವುದು. ಆತನು ಪರರನ್ನೂ ಹಿಂಸಿಸುವುದಾದರೆ ತನ್ನಿಂದ ತಾನೇ ಹಿಂಸಿಸಲ್ಪಡುವವನಾದ್ದರಿಂದ ಯಾರನ್ನೂ ಹಿಂಸಿಸುವುದಿಲ್ಲ. ಇಂತಹ ಆತ್ಮಭಾವನೆಯಿಂದ ಉಂಟಾಗಿರುವ ಅಹಿಂಸೆಯು ಯಾವಾತನಲ್ಲಿ ಸಂಪೂರ್ಣವಾಗಿ ನೆಲೆಗೊಳ್ಳುವುದೋ ಆತನೊಬ್ಬನೇ ಮುಕ್ತನಾಗುವನು. ಮುಕ್ತರಾಗುವವರೆಲ್ಲಾ ಇಂತಹ ಆತ್ಮೀಯ ಭಾವನೆಯಿಂದ ಉಂಟಾಗುವ ಅಹಿಂಸಾ ಸ್ವಭಾವವನ್ನು ಪಡೆದೇ ಮುಕ್ತರಾಗುವರು.

ಇಂದ್ರಿಯಾಣಾಂ ನಿರೋಧೇನ ರಾಗದ್ವೇಷ ಕ್ಷಯೇಣ ಚ ।
ಅಹಿಂಸಯಾ ಚ ಭೂತಾನಾಮಮೃತತ್ವಾಯ ಕಲ್ಪತೇ ॥ (ಮನು. ೬-೬೦)

ಇಂದ್ರಿಯಗಳ ನಿರೋಧದಿಂದಲೂ, ರಾಗದ್ವೇಷಗಳ ಕ್ಷಯದಿಂದಲೂ, ಅಹಿಂಸೆಯ ಪಾಲನೆಯಿಂದಲೂ, ಅಮೃತತ್ವದ ಪ್ರಾಪ್ತಿಯಾಗುವುದು. ಪರರನ್ನು ಹಿಂಸಿಸದೆ ಪರರಿಗೆ ತನ್ನಿಂದ ಎಲ್ಲಾ ಶಾಸ್ತ್ರೀಯ ವಿಧದಿಂದ ನಿಜವಾದ ಸುಖವನ್ನುಂಟುಮಾಡುವ ದಿವ್ಯಜೀವನದ ಪ್ರಾಪ್ತಿಯು ಆತ್ಮಜ್ಞಾನದಿಂದಲೇ ಆಗುವುದು. ಹಿಂಸೆಗೆ ರಾಗದ್ವೇಷಗಳೇ ಕಾರಣ. ಎಂದಿನವರೆವಿಗೆ ವಿನಾಶಿಯಾದ ಪದಾರ್ಥಗಳಲ್ಲಿಯೇ ಸುಖವಿದೆ ಎಂಬ ಭಾವನೆ ಇರುವುದೋ, ಅಂದಿನವರೆವಿಗೆ ಪದಾರ್ಥಗಳಲ್ಲಿ ಅನಿವಾರ್ಯ ಪ್ರೀತಿಯುಂಟಾಗುವುದು, ಈ ವಿಷಯಸುಖಕ್ಕೆ ಅಡ್ಡಬರುವ ಪ್ರಾಣಿ ಪದಾರ್ಥಗಳಲ್ಲಿ ಆಗ್ಗೆ ತಾನಾಗಿ ದ್ವೇಷವುಂಟಾಗುವುದು, ಪರರ ಹಿಂಸೆಯಾಗುವುದು, ಪರರ ಹಿಂಸೆಗೆ ಬಾಹ್ಯ ವಿಷಯಗಳ ಸುಖದ ಭಾವನೆಯೇ ಮುಖ್ಯ ಕಾರಣವಾಗುವುದು. ಇದು ಇರುವವರೆಗೆ ರಾಗದ್ವೇಷಗಳ ಮೂಲಕ ಹಿಂಸೆಯು ಸಂಭವಿಸಿಯೇ ಸಂಭವಿಸುವುದು. ನಿರ್ವಿಷಯ ಮನಸ್ಸು ಆಗುವವರೆಗೂ ಈ ನಿರ್ವಿಷಯ ಮನಸ್ಸಿಗೆ ಕಾರಣವಾದ ಆತ್ಮಜ್ಞಾನವಾಗುವವರೆಗೂ ಅಹಿಂಸೆಯು ಮೈಗೊಳ್ಳದು. ಈ ಅಹಿಂಸೆಯು ಮೈಗೊಳ್ಳುವವರೆಗೂ ಸರ್ವಸಮತ್ವವು ಉಂಟಾಗದು. ಈ ವಿಧವಾಗಿ ಎಲ್ಲೆಡೆಯಲ್ಲಿಯೂ ಆತ್ಮದರ್ಶನವಾಗಿ ಸರ್ವಸಮತ್ವವು ನೆಲೆಗೊಳ್ಳುವವರೆಗೂ ಸಮತ್ವವಾದವು

ಮಾತಿನಲ್ಲೇ ತೋರಿಕೊಳ್ಳುವುದಲ್ಲದೆ ಕ್ರಿಯೆಯಲ್ಲಿಲ್ಲ. ಎಲ್ಲಾ ಪ್ರಾಣಿ ಪದಾರ್ಥಗಳಲ್ಲಿಯೂ ಸಮತೆಯು ತೋರಿಕೊಳ್ಳುವಾಗಲೇ ಅದು ನಿಜವಾದ ಸಮತಾವಾದವಾಗುವುದು. ಅಲ್ಲದೆ ಅಲ್ಲಿಯವರೆಗೆ ಅಹಿಂಸಾರೂಪವಾದ ಸಮತಾವಾದದ ಮತಪ್ರಚಾರಕ್ಕಾಗಿ ಈಗ ತೋರಿಬರುವ ಅಮಾನುಷ ಪರರ ಹಿಂಸೆಯೂ, ಅಸಹ್ಯ ವಿಷಮತೆಯೂ ಕಂಡುಬರುವುವು. ಸತ್ಯ ಆತ್ಮರೂಪದ ಅಜ್ಞಾನವೇ ಬಾಹ್ಯವಿಷಯದ ಇಚ್ಛೆಗೂ, ಎಲ್ಲಾ ಹಿಂಸೆಗೂ ಹಾಗೂ ವಿಷಮತೆಗೂ ಕಾರಣವಾಗಿರುವುದು. ಈ ಅಜ್ಞಾನವು ಎಷ್ಟೆಷ್ಟು ಕಡಿಮೆಯಾಗುತ್ತಾಹೋಗುವುದೋ ಅಷ್ಟಷ್ಟು ವಿಷಮತೆ ಮತ್ತು ಹಿಂಸಾ ಪ್ರಧಾನವಾದ ಕರ್ಮಗಳು ಕಡಿಮೆಯಾಗುತ್ತಾಹೋಗುವುವು. ಆತ್ಮಜ್ಞಾನ ದಿಂದ ಉಂಟಾಗುವ ಸಂಪೂರ್ಣ ನಿಸ್ವಾರ್ಥ (ನಿಸ್ವಾರ್ಥ ನಿರ್ವಿಷಯ ಸ್ಥಿತಿಯ ಪ್ರಾಪ್ತಿ) ನಿರ್ವಿಷಯ ಸ್ಥಿತಿಯೇ ನಿಜವಾದ ಅಹಿಂಸೆ ಮತ್ತು ಸರ್ವಸಮತೆ. ಅನುಭವ ಆಲೋಚನೆಗಳಿಂದ ಬಾಹ್ಯ ಪದಾರ್ಥಗಳಲ್ಲಿ ಸ್ವಲ್ಪವೂ ಸುಖವಿಲ್ಲವೆಂಬುದು ಮನದಟ್ಟಾಗುವುದರಿಂದಲೂ, ಇದೆಲ್ಲವೂ ದುಃಖರೂಪವಾದುದೇ ಎಂಬುದು ನೆಲೆಗೊಳ್ಳುವುದರಿಂದಲೂ, ಸರ್ವವ್ಯಾಪಿ ಪರಮಾತ್ಮಸ್ವರೂಪವೇ ಒಂದು ನಿಜವಾದ ಸುಖವೆಂದು ದೃಢವಾಗು ವುದರಿಂದಲೂ ನಿಸ್ವಾರ್ಥ ನಿರ್ವಿಷಯ ಸ್ಥಿತಿಯಾಗುವುದು. ನಹ್ಯಧ್ರುವೈಃ ಪ್ರಾಪ್ಯತೇ ಹಿ ಧ್ರುವಂ ತತ್ (ಕಠ. ೧–೨). ಅನಿತ್ಯ ಪದಾರ್ಥದ ಅನಿತ್ಯ ಸಾಧನೆಗಳಿಂದ ಆ ನಿತ್ಯ ಪರಮಾತ್ಮ ಸ್ವರೂಪದ ಅನಂತ ಸುಖಸಿದ್ಧಿಯು ಲಭಿಸದು. ಆದುದರಿಂದಲೇ ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದ ಮಾಯಾನ್ನಾಸ್ತ್ಯಕೃತಃ ಕೃತೇನ। (ಮುಂ. ೧–೨–೧೨). ಅನಿತ್ಯ ಕರ್ಮಸಾಧನದಿಂದ ಅನಿತ್ಯ ಲೋಕದ ಕ್ಷಣಭಂಗುರ ವಿಷಯಸುಖವು ಒದಗುವುದೆಂದರಿತು ಆ ನಿರ್ವಿಷಯ ಪರಮಾತ್ಮ ಸ್ವರೂಪದ ಶಾಶ್ವತಾನಂದವನ್ನು ಕೋರುವವನು ಅವುಗಳ ಸಾಧನ ಸಮೇತವಾಗಿ ವಿಷಯಸುಖಗಳನ್ನು ಬಿಡತಕ್ಕದ್ದು ಅಥವಾ ಅವುಗಳನ್ನು ಬಿಡಲು ಸಾಧ್ಯವಾದ ಪ್ರಯತ್ನವನ್ನು ಅಹರ್ನಿಶವಾಗಿ ನಡೆಯಿಸತಕ್ಕದ್ದು. ಯಾವ ಜಾಗೃತಿಕ ಪದಾರ್ಥದಲ್ಲಿಯೂ, 'ಅಕೃತ' ವೆಂದರೆ, ನಿತ್ಯಸುಖ ವಿಲ್ಲ. ನಿತ್ಯಸುಖವು ಅನಿತ್ಯವಾದ ಪದಾರ್ಥಗಳಿಂದಲೂ ಅದಕ್ಕೆ ಸಾಧನ

ವಾದ ಭ್ರಮಾತ್ಮಕವಾದ ಅನಿತ್ಯ ಕೃತಿಗಳಿಂದಲೂ ಪಡೆಯಲಾಗದೆಂದಾಗು ವಲ್ಲಿ ಬಾಹ್ಯ ಪದಾರ್ಥಗಳಲ್ಲಿ ರಾಗ ದ್ವೇಷಗಳನ್ನಿಟ್ಟು ಪರಹಿಂಸಾಪರವಾದ ವಿಷಯಸುಖದ ಕರ್ಮಗಳನ್ನು ಏತಕ್ಕೆತಾನೆ ಮಾಡಬೇಕು? ಎಂಬುದಾಗಿ ಶ್ರುತಿಯು ನಿಜವಾದ ಅಹಿಂಸೆಯ ಮತ್ತು ಸತ್ಯವಾದ ಸಮತ್ವದ ತಳಹದಿ ಯನ್ನು ಹಾಕಿಕೊಟ್ಟಿರುವುದು.

ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ ।
ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥ (ಗೀತಾ ೬-೨೬)

ಪ್ರಶಾನ್ತ ಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।
ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್ ॥ (ಗೀತಾ ೬-೨೭)

ಯುಂಜನ್ನೇವಂ ಸದಾತ್ಮಾನಂ ಯೋಗೀ ವಿಗತ ಕಲ್ಮಷಃ ।
ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ॥ (ಗೀತಾ ೬-೨೮)

ಯಾವುದೊಂದು ಬಾಹ್ಯ ಪದಾರ್ಥವು ಸುಖರೂಪವಾಗದಾದ್ದರಿಂದ ಮನಸ್ಸು ಯಾವ ಪದಾರ್ಥದಲ್ಲಿಯೂ ಸ್ಥಿರವಾಗಿ ನಿಲ್ಲದು. ಈ ಪದಾರ್ಥವು ಸುಖರೂಪವಲ್ಲವೆಂಪಾದರೂ ಇನ್ನುಳಿದ ಬೇರೆ ಪದಾರ್ಥಗಳು ಏಕೆ ತಾನೆ ಸುಖರೂಪವಾದವುಗಳು ಆಗಲಿಕ್ಕಿಲ್ಲವೆಂದು, ಒಂದು ಪದಾರ್ಥವನ್ನು ಬಿಟ್ಟು, ಅದನ್ನು ಅಲ್ಲಗಳೆದು, ಇನ್ನೊಂದು ಪದಾರ್ಥವನ್ನು ಅನುಭವಿಸು ವಂಥ ಕ್ರಿಯೆಯು ಸತತವಾಗಿ ನಡೆಯುತ್ತಿರುವುದರಿಂದ ಮನಸ್ಸು ಚಂಚಲ ವಾಗುವುದು ಮತ್ತು ಮನಸ್ಸು ಚಂಚಲವೆಂದೆನಿಸಿಕೊಳ್ಳುವುದು. ಈ ಮನಸ್ಸಿನ ಹರಿದಾಟ-ಓಡಾಟವನ್ನು ವಿಷಯದ ದೋಷದೃಷ್ಟಿಯಿಂದಲೂ ಆತ್ಮರೂಪದ ಆನಂದಘನತೆಯ ವಿವೇಕ ವಿಚಾರದಿಂದಲೂ ನಿಲ್ಲಿಸತಕ್ಕದ್ದು. ಮನಸ್ಸನ್ನು ಅಂತರ್ಮುಖವನ್ನಾಗಿ ಮಾಡಿ, ಅಲ್ಲಿಯೇ ತಡೆದು ಆತ್ಮಾನಂದ ವನ್ನು ಅನುಭವಿಸತಕ್ಕದ್ದು. ಇದು ನಿಜವಾದ ಸುಖದ ಪ್ರಾಪ್ತಿಯ ಯಥಾರ್ಥ ಸುಖದ ಸಾಧನವು. ಈ ವಿಚಾರವನ್ನೇ ಇಲ್ಲಿ ತಿಳಿಸಿರುವುದು. ಚಂಚಲವಾಗಿಯೂ, ಅಸ್ಥಿರವಾಗಿಯೂ ಇದ್ದ ಮನಸ್ಸು ಎತ್ತೆತ್ತ ಕಡೆಗೆ ಹರಿದುಹೋಗೇವುದೋ ಎಂದರೆ ಯಾವ ಯಾವ ಪದಾರ್ಥಗಳನ್ನು ಬಯಸಿ, ಯಾವ ಯಾವ ಪದಾರ್ಥಗಳ ಕಡೆಗೆ ಓಡಿಹೋಗುವುದೋ ಅತ್ತತ್ತ ಕಡೆಯಿಂದ ಅದನ್ನು ಪೊರಮೊಡಿಸಿ ದೇಹದೊಳಗಿರುವ ಎಲ್ಲದರ ಅರಿವಿಗೂ

ತರವಾದ, ಈ ಮನಸ್ಸಿನ ಮೂಲದಲ್ಲಿದ್ದ, ಆನಂದಘನ ಆತ್ಮಸ್ವರೂಪದಲ್ಲಿ ತಡೆದು ನಿಲ್ಲಿಸಬೇಕಾದುದು. ಈ ವಿಧವಾಗಿ ಅಭ್ಯಾಸಮಾಡುವಲ್ಲಿ, ಮನಶ್ಶೂನ್ಯವಾದ ಮೇರೆ ಮೀರಿದ ಅತ್ಯಂತ ನಿರ್ಮಲವಾದ ಬ್ರಹ್ಮ ಸುಖವು ಪ್ರಾಪ್ತವಾಗುವುದು. ಇದೇ ಒಂದು ಪವಿತ್ರ ಸುಖವೆಂದು ತಿಳಿಸಿಕೊಳ್ಳುವುದು. ಹೀಗೆ ಆತ್ಮಸ್ವರೂಪದಲ್ಲಿ ಮನಸ್ಸನ್ನು ಕರಗಿಸಿ ಆನಂದಘನಸ್ಥಿತಿಯಿಂದ ಇರುವಂಥ ಅಭ್ಯಾಸವನ್ನು ಮಾಡುತ್ತಾ ಹೋದಂ ತೆಲ್ಲಾ ಮನುಷ್ಯನು ನಿರ್ವಿಷಯನಾಗುವನು.

ವಿಷಯವಾಸನೆಯೇ ಪಾಪ; ನಿಷ್ಪಾಪನಾಗುವನು, ನಿರ್ಭೀಕ ನಾಗುವನು, ಬ್ರಹ್ಮೈಕ್ಯವನ್ನು ಪಡೆಯುವನು, ಅತ್ಯಂತ ಸುಖವನ್ನು ಹೊಂದುವನು. ಇಂತಹ ಬ್ರಹ್ಮೈಕ್ಯರೂಪವಾದ ಆತ್ಮಾನಂದವನ್ನು ಪಡೆದವನೇ ಎಲ್ಲಾ ಭೂತಗಳಲ್ಲಿಯೂ ತನ್ನನ್ನೂ, ತನ್ನಲ್ಲಿ ಎಲ್ಲಾ ಭೂತ ಗಳನ್ನೂ ಕಂಡು ಸರ್ವಸಮನಾಗುವನು. ಇಲ್ಲಿಗೆ ಆತನಿಗೆ ಸಮದೃಷ್ಟಿ ಯುಂಟಾಗುವುದು. ನಿಜವಾದ ಸಮತಾವಾದಕ್ಕಾಗಿ ಈ ವಿಧವಾದ ಪೂರ್ವಭೂಮಿಕೆಯನ್ನು ಸಂಪಾದಿಸತಕ್ಕದ್ದು.

ಯತೋ ಯತೋ ನಿವರ್ತೇತ ವಿಮುಚ್ಯೇತ ತತಸ್ತತಃ ।
ಏಷ ಧರ್ಮೋ ನೃಣಾಂ ಕ್ಷೇಮಃ ಶೋಕಮೋಹಭಯಾಪಹಃ ॥
(ಶ್ರೀಮದ್ಭಾಗವತ ೧೧–೨೧–೧೮)

ವಿವೇಕ ವಿಚಾರದ ಮೂಲಕವಾಗಿ ಯಾವಯಾವುದರಿಂದ ಮನುಷ್ಯನು ಪರಾವೃತ್ತನಾಗುವನೋ ಆಯಾ ಪದಾರ್ಥಗಳ ವಾಸನೆಯಿಂದ ಆತನು ಮುಕ್ತನಾಗಿ ನಿರ್ವಿಷಯ ಪರಮಾತ್ಮ ಸುಖ ಸ್ವರೂಪವನ್ನು ಸ್ಪಷ್ಟವಾಗಿ ಪಡೆಯುವನು. ಶೋಕ, ಮೋಹ, ಭಯ, ರಾಗ ದ್ವೇಷ ಮತ್ತು ಹಿಂಸೆಗಳನ್ನು ನಷ್ಟಪಡಿಸುವ ಮಾನವನ ಶ್ರೇಷ್ಠತಮವಾದ ಧರ್ಮವಿದೇ.

## ಭಗವಂತನ ಪ್ರಿಯಭಕ್ತ ಮತ್ತು ಮುಮುಕ್ಷು

ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।
ನಿರ್ಮಮೋ ನಿರಹಂಕಾರಸ್ಸಮದುಃಖ ಸುಖಃಕ್ಷಮೀ ॥ ೧೩ ॥

ಸಂತುಷ್ಟಃ ಸ್ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।
ಮಯ್ಯರ್ಪಿತ ಮನೋಬುದ್ಧಿರ್ಯೋಮದ್ಭಕ್ತಃ ಸಮೇ ಪ್ರಿಯಃ ॥ ೧೪ ॥
(ಗೀತಾ ೧೨)

ಎಲ್ಲಾ ಭೂತಗಳಲ್ಲಿ ದ್ವೇಷರಹಿತನಾಗಿಯೂ, ಲೋಕಮಿತ್ರನಾಗಿಯೂ, ಸರ್ವದಯಾಪರನಾಗಿಯೂ ಇದ್ದವನೇ ಶಾಂತಿಯನ್ನು ಹೊಂದುವನು ಮತ್ತು ಇಂಥಾ ಸ್ಥಿತಿಯು ಒದಗಲು ನಿರ್ಮೋಹ ಮತ್ತು ನಿರಹಂಕಾರನಾಗಬೇಕೆಂದು ಭಗವದ್ಗೀತೆಯು ತಿಳಿಸುವುದು. ಸುಖದುಃಖಗಳನ್ನು ಸಮಗೊಂಡಿರುವವನೂ, ಕ್ಷಮಾಶೀಲನೂ, ಯಾವಾಗಲೂ ಸಂತುಷ್ಟನೂ, ಜಿತೇಂದ್ರಿಯನೂ, ದೃಢನಿಶ್ಚಯಿಯೂ, ಮನೋಬುದ್ಧಿಗಳನ್ನು ನನ್ನಲ್ಲಿಯೇ ಅರ್ಪಿಸಿರುವವನೂ, ಯೋಗಿಯಾದವನೂ ನನ್ನ ಪ್ರಿಯಭಕ್ತನೆಂದು ಭಗವಂತನ ಹೇಳಿಕೆ.

ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।
ಹರ್ಷಾಮರ್ಷ ಭಯೋದ್ವೇಗೈರ್ಮುಕ್ತೋ ಯಸ್ಸ ಚ ಮೇ ಪ್ರಿಯಃ ॥
(ಗೀತಾ ೧೨–೧೫)

ಯಾರಿಗೂ ಉದ್ವೇಗವನ್ನು ಉಂಟುಮಾಡದೆ ಇರುವವನೂ, ಯಾರಿಗೂ ಪೀಡೆಯನ್ನು ಕೊಡದಿರುವವನೂ, ಪರರಿಂದಲೂ ತಾನು ಉದ್ವೇಗವನ್ನು ತಳೆಯದಿದ್ದವನೂ, ಪೀಡೆಗೊಳ್ಳದಿರುವವನೂ, ಹರ್ಷ, ಕೋಪ, ಭಯ ಮತ್ತು ಉದ್ವೇಗಗಳಿಂದ ಮುಕ್ತನಾದಂಥವನೂ ನನಗೆ ಪ್ರಿಯನೆಂದು ಭಗವಂತನು ತನ್ನ ಶ್ರೀಮುಖದಿಂದಲೇ ಉದಾಹರಿಸಿರುವನಲ್ಲವೆ?

ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ।
ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ॥ (ಗೀತಾ ೫–೨೨)

ಬಾಹ್ಯಪದಾರ್ಥಗಳ ಸಂಯೋಗದಿಂದ ಇಂದ್ರಿಯಗಳಿಗೆ ಉಂಟಾಗುವ ಭೋಗಸುಖಗಳು ದುಃಖದ ಖನಿಗಳೇ ಆಗಿರುವುವು. ಈ ವೈಷಯಿಕ ಸುಖಗಳೇ ಉತ್ಪತ್ತಿ ನಾಶಗಳಿಂದ ಕೂಡಿಕೊಂಡಿರುವುವು. ಆತ್ಮಸುಖವು ಹಾಗಲ್ಲ. ಆತ್ಮಸುಖದ ಆಕಾಂಕ್ಷೆಯುಳ್ಳ ಮುಮುಕ್ಷುವು ಇಂತಹ ಮಿಂಚಿನಂತಿರುವ ವಿಷಯಸುಖಭಾವಗಳಲ್ಲಿ ರಮಿಸನು. ಇಂಥವನಿಗೆ ವಿರಕ್ತನೆನ್ನುವರು. ಇಂತಹ ವಿರಕ್ತನೇ ದೇಹದ ಅಭಿಮಾನವನ್ನು ಮೀರುವನು.

ಹೈಹಿಕ ಸುಖದ ಕಲ್ಪನೆಯನ್ನು ತೊರೆಯುವನು. ಇಂಥಾ ದೈಹಿಕ ಸುಖದ ಕಲ್ಪನೆಯನ್ನು ತೊರೆದ ದೇಹಾಭಿಮಾನವಿರದ ವಿವೇಕಿಯೇ ಸರ್ವಭೂತ ಹಿತನಾಗಿರುವನು. ಆರ್ಯಸಂಸ್ಕೃತಿಯು ಮೊದಲಿನಿಂದಲೂ ನಡೆದುಕೊಂಡು ಬಂದ ಸಾತ್ವಿಕ ಸಮತಾವಾದದ ಸಾಧನವು, ಸಮತೆಯು ಈ ವಿಧವಾದುದು. ಆರ್ಯಸಂಸ್ಕೃತಿಯ ಸಾತ್ವಿಕ ಸಮತಾವಾದದಲ್ಲಿರುವಂಥ ಭೂತದಯೆಯ ಲಕ್ಷಣವನ್ನು ತಿಳಿಹಿಸುವುದಾದರೆ ಮಹಾರಾಜ ರಂತೀದೇವನ ಉದಾಹರಣ ವೊಂದೇ ಸಾಕು.

ನತ್ವಹಂ ಕಾಮಯೇ ರಾಜ್ಯಂ ನ ಸ್ವರ್ಗಂ ನಾಪುನರ್ಭವಂ ।
ಕಾಮಯೇ ದುಃಖತಪ್ತಾನಾಂ ಪ್ರಾಣಿನಾಂ ಆರ್ತಿನಾಶನಂ ॥ (ಭಾರತ)

ನಾನು ರಾಜ್ಯವನ್ನೂ ಇಚ್ಛಿಸುವುದಿಲ್ಲ; ಸ್ವರ್ಗವನ್ನೂ ಇಚ್ಛಿಸುವುದಿಲ್ಲ; ಪುನಃ ಜನ್ಮಕ್ಕೆ ಬಾರದಿರಬೇಕೆಂದೂ ಕೋರುವುದಿಲ್ಲ. ದುಃಖ ಸಂತಪ್ತರಾದ ಪ್ರಾಣಿಗಳ ಕಷ್ಟಗಳನ್ನು ಹೋಗಲಾಡಿಸುವುದೊಂದನ್ನೇ ನಾನು ಅಭಿಲಾಷಿಸುತ್ತೇನೆ ಎಂಬಿವೇ ಆತನ ಉದ್ಗಾರಗಳಾಗಿರುವುವು.

## ವಿಶ್ವದ ದಿವ್ಯಜೀವನ

ಆರ್ಯಸಂಸ್ಕೃತಿಯು ವೇದವಿಹಿತ ನಿಷ್ಕಾಮಕರ್ಮ, ಏಕಾಂತಭಕ್ತಿ, ವಿಷಯವಿರಕ್ತಿ, ಅದ್ವಿತೀಯ ಆತ್ಮರೂಪದ ಜ್ಞಾನ, ದೇಹಾತ್ಮಸುಖದ ಪಶುವೃತ್ತಿಯನ್ನು ಬಿಡಿಸಿ, ಹಿಂಸೆಯನ್ನು ಹೋಗಲಾಡಿಸಿ, ರಾಗದ್ವೇಷ ಗಳನ್ನು ನಷ್ಟಪಡಿಸಿ ವಿಶ್ವದಲ್ಲಿ ನಿಜವಾದ ಸಮತ್ವವನ್ನು ನೆಲೆಗೊಳಿಸುವುದು. ಈ ಆರ್ಯಸಂಸ್ಕೃತಿಯ ಸಾತ್ವಿಕ ಸಮತಾವಾದವನ್ನು ಗಮನಿಸಿದರೆ ಈ ಬಂಡವಾಳಶಾಹಿ ಮತ್ತು ಕೂಲಿಕಾರರುಗಳಲ್ಲಿ ಆಗುತ್ತಿರುವ ಚಿತ್ರ ಹಿಂಸೆಯ ರಾಕ್ಷಸೀ ಕೃತ್ಯಗಳು ತಾವಾಗಿಯೇ ನಿಂತುಹೋಗುವುವು. ಈಗಿನ ಸಮತೆಯಲ್ಲಿರುವಂತಹ ವಿಷಮತೆಯೂ ನಷ್ಟವಾಗಿಹೋಗುವುದು. ಈಗಿನ ಅಹಿಂಸೆಯಲ್ಲಿ ಅನುಭವಿಸಲ್ಪಡುವ ಹಿಂಸೆಯೂ ತಲೆದೋರದು. ಹೊರ ನಾಗರೀಕತೆಯ ಅಂತರಂಗದಲ್ಲಿ ತೋರಿಬರುವ ವನ್ಯಜಾತಿಯ ಕ್ರೂರ ಆಚಾರವು ಮಾಯವಾಗುವುದು. ಸಭ್ಯತೆಯಲ್ಲಿರುವ ನಿಂದ್ಯ ಆಚರಣೆಗಳು ತಮ್ಮ ಅಸ್ತಿತ್ವವನ್ನು ಮುಗಿಸುವುವು. ಪರರನ್ನೂ ಹಿಂಸಿಸಿ ಬಾಳುವ ದುಷ್ಟ

ಮನೋವೃತ್ತಿಯು ಒಂದು ಕ್ಷಣವೂ ಜೀವಗೂಡಿ ಇರದು. ಆಟಂಬಾಂಬಿನಂಥ ಶೋಧಗಳು ಅಲ್ಲಲ್ಲಿಯೇ ಕೈಬಿಟ್ಟುಹೋಗುವುವು. ಭಯ, ಶೋಕ, ಮೃತ್ಯು, ದುಃಖದ ಅನಿಷ್ಟ ವಾತಾವರಣವು ಶಾಂತವಾಗುವುದು. ನಿರ್ಭಯತೆಯು, ಸುಖಶಾಂತಿಯು, ಪರಮಪವಿತ್ರವಾದ ಮಂಗಲಮಯ ಸಾಮ್ರಾಜ್ಯವು ವಿಶ್ವದಲ್ಲೆಲ್ಲಾ ಹಬ್ಬುವುದು. ಭಾರತದೇಶವು ತನ್ನ ದಿವ್ಯ ಪಿತ್ರಾರ್ಜಿತವಾದ ಹಕ್ಕನ್ನು ಪಡೆದ ಕ್ಷಣದಲ್ಲಿಯೇ ಈಗ ಕಂಡುಬರುವ ಪ್ರಕ್ಷೋಭಗಳು, ಉತ್ಪಾತಗಳು, ಅಶಾಂತಿ, ಅಸಮಾಧಾನ, ಪರಸ್ಪರ ವಿದ್ವೇಷ, ಕುಟಿಲನೀತಿ, ರಾಕ್ಷಸೀ ಮಹತ್ವಾಕಾಂಕ್ಷೆ, ಅಪಸ್ವಾರ್ಥ, ದುಷ್ಟ ಪ್ರವೃತ್ತಿ, ಪ್ರಾಂತಗಳ ವಿಭಾಗ ಮತ್ತು ಅವುಗಳ ಆವಶ್ಯಕತೆ, ದಂಗೆ, ಲೂಟಿ, ಲಂಚ, ಅತ್ಯಾಚಾರ, ಯಾದವೀ ಈ ಎಲ್ಲವೂ ಅಡಗಿ, ಸುಖ ಶಾಂತಿಯ ದಿವ್ಯ ಜೀವನವು ನೆಲೆ ನಿಲ್ಲುವುದು. ವಿಶ್ವಶಾಂತಿಕರವಾದ ದೈವೀ ಸಂಪತ್ತಿನ, ಆತ್ಮಸುಖದ, ಮಂಗಲಮಯವಾದ ಪವಿತ್ರ ಏಕಾಧಿಪತ್ಯವು ಕೈಗೂಡುವುದು. ಐಹಿಕ ಸುಖಗಳಿಗಿಂತ ನಿಜವಾದ ಸುಖವೊಂದು ಬೇರೆ ಇದೆ ಎಂಬೀ ತಿಳಿವಳಿಕೆಯಿಂದಲೂ, ಎಲ್ಲವನ್ನೂ ಬಿಟ್ಟುಬಿಟ್ಟು ಹೋಗಬೇಕಾಗುವ ಮರಣಕಾಲದ ನೆನವರಿಕೆಯಿಂದಲೂ, ಪದೇ ಪದೇ ಅನುಭವಿಸಲ್ಪಡುವ ವಿಷಯಸುಖದ ವೈಯರ್ಥ್ಯದ ನಿಶ್ಚಯದಿಂದಲೂ, ಜಿಹಾಸೆಯನ್ನುಂಟುಮಾಡುವ ದೇಹದ್ರವ್ಯಗಳ ಸ್ಮರಣದಿಂದಲೂ, ಎಲ್ಲೆಡೆಯಲ್ಲಿಯೂ ಮಂಗಲಮಯ ಪರಮಾತ್ಮನ ಇರುವಿಕೆಯ ಜ್ಞಾನದಿಂದಲೂ, ಪರಮಾತ್ಮನೇ ಒಬ್ಬ ನಿಜವಾದ ಆನಂದರೂಪಿಯಾದುದರಿಂದ ಅವನ ಪ್ರಾಪ್ತಿಯೇ ಜೀವನದ ಗುರಿಯೆಂದು ನಿಶ್ಚಯಿಸುವುದರಿಂದಲೂ, ಈ ಪರಮಾತ್ಮಪ್ರಾಪ್ತಿಯ ಸಾಧನೆಗಳಲ್ಲಿ ಪರಸ್ಪರರಿಗೆ ಸಹಾಯವನ್ನು ನೀಡುತ್ತಾ ಅವುಗಳಲ್ಲಿ ಅಖಂಡವಾಗಿ ತೊಡಗಿರುವುದೇ ಮಾನವೀಯ ಧರ್ಮವೆಂದು ಗ್ರಹಿಸಲ್ಪಡುವುದರಿಂದಲೂ, ಆಧ್ಯಾತ್ಮಿಕ ನಿಷ್ಠೆಯಲ್ಲಿ ಜೀವನವನ್ನು ಸಾಗಿಸುವುದರಿಂದಲೂ, ಎಲ್ಲಾ ವಿಶ್ವದ ಮಂಗಲಮಯ ಜೀವನವಾಗುವುದು. ವಿಶ್ವದಲ್ಲಿ ಸಮತ್ವವು ನೆಲೆಗೊಳ್ಳುವುದು. ಸುಖಶಾಂತಿಯೂ ಉಂಟಾಗುವುದು. ಮೋಕ್ಷಮಾರ್ಗವಲ್ಲಿರುವ ನಿರವಧಿ ಸುಖವೂ ಕೈಸೇರುವುದು ಮಂಗಲ ಜೀವನವಾಗುವುದು, ಪಾವಿತ್ರ್ಯವು

ಪೈಗೊಳ್ಳುವುದು, ಸೌಹಾರ್ದದ ಸಾಮ್ರಾಜ್ಯವು ಹಬ್ಬುವುದು, ನೀತಿಯ ಅಧಿಕಾರವು ನಡೆಯುವುದು. ಆಗ್ಗೆ ನಿಜವಾದ ಧರ್ಮವು ಜಗತ್ತನ್ನು ಆಳುವುದು. ಆವಾಗಲೇ ಕೋರಿರುವ ಎಲ್ಲಾ ಅನಿಷ್ಟದ ನಿವೃತ್ತಿಯಾಗಿ ಸಕಲೇಷ್ಟಪ್ರಾಪ್ತಿಯಾಗುವುದು. ಅಲ್ಲಿಗೆ ಈ ಜಗತ್ತು ತೃಪ್ತವಾಗುವುದು.

## ವಿಶ್ವಕ್ಕೆ ವೇದದ ಉಪದೇಶ

ಸಹೃದಯಂ ಸಾಂ ಮನಸ್ಯಮವಿದ್ವೇಷಂ ಕೃಣೋಮಿ ವಃ ।
ಅನ್ಯೋನ್ಯಮಭಿಹರ್ಯತ ವತ್ಸಂ ಜಾತಮಿವಾಘ್ನ್ಯಾ ॥
(ಅಥರ್ವ. ಅ. ಪಿ. ೫–೧೯)

ನಿಮ್ಮೆಲ್ಲರಲ್ಲಿ ಪರಸ್ಪರ ಇರುವ ದ್ವೇಷಾಸೂಯೆಗಳನ್ನು ಹೋಗಲಾಡಿಸಿ ನಾನು ನಿಮ್ಮೆಲ್ಲರಲ್ಲಿ ಸಹೃದಯತೆಯನ್ನೂ, ಸೌಮನಸ್ಯವನ್ನೂ ಉಂಟು ಮಾಡುವೆನು.

ಆಕಳು ತನ್ನ ಸಣ್ಣ ಕರುವಿನಲ್ಲಿ ಹೇಗೆ ಪ್ರೀತಿಯನ್ನಿಡುವುದೋ, ಅದರ ಪ್ರೀತಿಯಿಂದ ಆಕರ್ಷಿಸಲ್ಪಡುವುದೋ ಅದರಂತೆಯೇ ನಿಮ್ಮ ನಿಮ್ಮಲ್ಲಿ ನೀವು ಪ್ರೀತಿಯನ್ನಿಡತಕ್ಕದ್ದು. ಪರಸ್ಪರ ಪ್ರೇಮದಿಂದ ಆಕರ್ಷಿಸಲ್ಪಡತಕ್ಕದ್ದು.

ಅನುವ್ರತಃ ಪಿತುಃ ಪುತ್ರೋ ಮಾತ್ರಾ ಭವತಿ ಸಂಯತಃ ।
ಜಾಯಾ ಪತ್ಯೇ ಮಧುಮತೀಂ ವಾಚಂ ವದತು ಶಾಂತಿವಾನ್ ॥ ೨ ॥
(ಅ. ಪಿ. ೫–೧೯)

ಪುತ್ರನು ಪಿತೃಭಕ್ತನೂ, ಮಾತೃಭಕ್ತನೂ, ಮಾತಾಪಿತೃಗಳ ಆಜ್ಞೆಯನ್ನು ಪರಿಪಾಲಿಸತಕ್ಕವನೂ ಆಗಿರಬೇಕು. ಸತಿ ಪತಿಗಳು ಪಾತಿವ್ರತ್ಯ ಮತ್ತು ಏಕಪತ್ನೀವ್ರತವನ್ನು ಪರಿಪಾಲಿಸಿ ಪರಸ್ಪರರಲ್ಲಿ ಅನ್ಯೋನ್ಯ ವಿಶ್ವಾಸವನ್ನಿಟ್ಟು ಪ್ರೀತಿಯ ಮೃದು-ಮಧುರ ನುಡಿಗಳನ್ನು ಆಡುತ್ತಿರಬೇಕು.

ಮಾ ಭ್ರಾತಾ ಭ್ರಾತರಂ ದ್ವಿಕ್ಷನ್ ಮಾ ಸ್ವಸಾರಮುತ ಸ್ವಸಾ ।
ಸಮ್ಯಂಚಃ ಸವ್ರತಾ ಭೂತ್ವಾ ವಾಚಂ ವದತ ಭದ್ರಯಾ ॥ ೩ ॥
(ಅ. ಪಿ. ೪–೧೯)

ಅಣ್ಣ ತಮ್ಮಂದಿರು ಪರಸ್ಪರರನ್ನು ದ್ವೇಷಿಸದಿರಲಿ. ಅಕ್ಕತಂಗಿಯರು ಸಹ ಪರಸ್ಪರರಲ್ಲಿ ದ್ವೇಷಾಸೂಯೆಗಳನ್ನು ಇಟ್ಟುಕೊಳ್ಳದಿರಲಿ. ನೀವೆಲ್ಲರೂ ಒಮ್ಮನಸ್ಸಿನಿಂದ ಒಮ್ಮತವಾಗಿ ಇರಬೇಕು. ಸದ್ವ್ರತದ ಪಾಲನೆಯನ್ನು ಮಾಡಬೇಕು. ಪವಿತ್ರವಾಗಿ ನಡೆಯಬೇಕು. ಎಲ್ಲರ ಹಿತವನ್ನು ಕೋರಿ ಎಲ್ಲರ ಸುಖಕ್ಕಾಗಿ ಮಂಗಲವಾದ ನುಡಿಗಳನ್ನು ನುಡಿಯಬೇಕು.

ಯೇನ ದೇವಾ ನ ವಿಯನ್ತಿ ನೋ ಚ ವಿದ್ವಿಷತೇ ಮಿಥಃ ।
ತತ್ಕೃಣ್ಮೋ ಬ್ರಹ್ಮ ವೋ ಗೃಹೇ ಸಂಜ್ಞಾನಂ ಪುರುಷೇಭ್ಯಃ ॥ ೪ ॥

(ಅ. ಪಿ. ೫–೧೯)

ಯಾವ ಬ್ರಹ್ಮಜ್ಞಾನದಿಂದ ದೇವತೆಗಳು ಪರಸ್ಪರರಲ್ಲಿ ಪರಮ ಪ್ರೀತಿಯ ವ್ಯವಹಾರವನ್ನಿಟ್ಟು ನಡೆದುಕೊಳ್ಳುವರೋ, ಎಂದೆಂದಿಗೂ ಪರಸ್ಪರರ ದ್ವೇಷವನ್ನು ಮಾಡರೋ, ಪರಸ್ಪರರಲ್ಲಿ ಭೇದವನ್ನೆಣಿಸರೋ ಅದರಂತೆ ನೀವೆಲ್ಲರೂ ಆಗಬೇಕೆಂದು ನಿಮ್ಮೆಲ್ಲರಲ್ಲಿ ಆ ಬ್ರಹ್ಮಜ್ಞಾನವನ್ನು ಬಿತ್ತರಿಸುವೆನು. ಆತ್ಮೀಯ ಭಾವನೆಯ ನಿರ್ದುಷ್ಟ ವ್ಯವಹಾರ ಸಾಗಲಿ. ನೀತಿ ನಡವಳಿಕೆಯ ಆಚಾರ ವಿಚಾರವಿರಲಿ. ಸ್ವಧರ್ಮೋಕ್ತ ದಿವ್ಯಜೀವನ ವಾಗಲಿ.

ಜ್ಯಾಯಸ್ವಂತಶ್ಚಿತ್ತಿನೋ ಮಾ ವಿ ಯೌಷ್ಟ
ಸಂರಾಧಯನ್ತಃ ಸಧುರಾಶ್ಚರಂತಃ ।
ಅನ್ಯೋನ್ಯಸ್ಮೈವಲ್ಗು ವದನ್ತೋ ಯಾತ
ಸಮಗ್ರಾಸ್ಥ ಸಧ್ರೀಚೀನಾನ್ ॥ ೫ ॥

(ಅ. ಪಿ. ೫–೧೯)

"ಅನ್ಯೋನ್ಯಸ್ಮೈವಲ್ಗುವದಂತ ಏತ ಸಧ್ರೀಚೀನಾನ್ ವಸ್ಸಮನಸಸ್ಕೃಣೋಮಿ." ಒಮ್ಮನಸ್ಕರಾಗಿ ಜ್ಯೇಷ್ಠ ಕನಿಷ್ಠವೆಂಬ ನಿಯಮದ ಅನುಸಾರ ಇಹಪರ ಸುಖದ ಲಕ್ಷ್ಯವನ್ನು ಮುಂದಿಟ್ಟು ತಮ್ಮ ತಮ್ಮ ಕಾರ್ಯಭಾರವನ್ನು ಸಾಗಿಸಿರಿ. ಪರಸ್ಪರರಿಗೆ ನೀವು ಸಹಾಯಕ ರಾಗಿರಿ. ಭಿನ್ನ ಭಿನ್ನ ಅಭಿಪ್ರಾಯವುಳ್ಳವರಾಗಬೇಡಿರಿ. ಎಲ್ಲರೂ ಒಟ್ಟಾಗಿ ದೊಡ್ಡ ದೊಡ್ಡ ಸಾಮಾಜಿಕ, ಧಾರ್ಮಿಕ, ರಾಜಕೀಯ ಕಾರ್ಯ ಗಳನ್ನು ಮಾಡಿರಿ. ಪರಸ್ಪರರಲ್ಲಿ ಅಮೃತದಂತಿರುವ ನುಡಿಗಳಿಂದ ಪ್ರೀತಿಯ

ವರ್ತನೆಯನ್ನಿಡಿರಿ. ಪ್ರಗತಿಯ ಪಥದಲ್ಲಿ ಅಗ್ರೇಸರರಾಗಿರಿ. ಪಾರಮಾರ್ಥಿಕ ದಿವ್ಯ ಜೀವನವನ್ನು ಸಾಗಿಸಿರಿ. ಪರಮಾತ್ಮನ ದಿವ್ಯಾನಂದ ಸ್ವರೂಪದಲ್ಲಿ ನೆಲೆ ನಿಲ್ಲಲು, ನಿಮ್ಮೆಲ್ಲರನ್ನೂ ಸುಮನಸ್ಕರನ್ನಾಗಿ ಮಾಡುವೆನು.

ಸಮಾನೀ ಪ್ರಪಾ ಸಹ ವೋಽನ್ನಭಾಗಃ
ಸಮಾನೇ ಯೋಕ್ತ್ರೇ ಸಹ ವೋ ಯುನಜ್ಮಿ ।
ಸಮ್ಯಞ್ಚೋಽಗ್ನಿಂ ಸಪರ್ಯತಾರಾ
ನಾಭಿಮಿವಾಭಿತಃ ॥ ೬ ॥
(ಅಥರ್ವ. ಪೈಪ್ಪಲಾದ ಶಾಖಾ ೫–೧೯)

ಒಂದೇ ಛತ್ರದಲ್ಲಿ ಯಥಾಸ್ಥಾನವಾಗಿ ಪ್ರೀತಿಯಿಂದ ಊಟಮಾಡಿರಿ. ಒಂದೇ ಅರವಟ್ಟಿಗೆಯಲ್ಲಿ ನೀರು ಕುಡಿಯಿರಿ. ನಿಮ್ಮೆಲ್ಲರಿಗೂ ಅನ್ನ ನೀರಿನ ವಿಭಾಗವು ಸಮವಾಗಿರಲಿ. ನಿಮ್ಮೆಲ್ಲರನ್ನೂ ಒಂದೇ ಒಂದು ಆತ್ಮಸ್ನೇಹದ ರಜ್ಜುವಿನಿಂದ ಏಕತ್ರವಾಗಿ ಸಂಬಂಧಿಸುತ್ತೇನೆ. ಆತ್ಮೋದ್ಧಾರದ ದೃಷ್ಟಿಯಿಂದಲೂ, ಜೀವನ ನಿರ್ವಾಹಕ ಕಾರ್ಯಗಳಿಂದಲೂ, ವರ್ಣಾಶ್ರಮ ಧರ್ಮಗಳಿಂದಲೂ, ಏಕಾತ್ಮ ದೃಷ್ಟಿಯಿಂದಲೂ ಸತತ ಸಂಯುಕ್ತರಾಗಿ ಪರಮಾತ್ಮನ ಆರಾಧನೆಯನ್ನು ನಡೆಸಿರಿ. ಅಗ್ನಿ ಮುಂತಾದ ದೇವತೆಗಳ ಉಪಾಸನೆಗಳನ್ನು ನಡೆಸಿರಿ. ಚಕ್ರದ ಕಣ್ಣಿನಲ್ಲಿ ಅಡ್ಡ ತುಂಡುಗಳು ಸೇರಿರುವಂತೆ ಒಂದೇ ಧ್ಯೇಯದಲ್ಲಿ ಮತ್ತು ಒಂದೇ ಆದರ್ಶದಲ್ಲಿ, ಒಂದೇ ಪರಮಾತ್ಮನ ಆರಾಧನೆಯಲ್ಲಿ ನೀವು ಸಂಪ್ರತಿಷ್ಠಿತರಾಗಬೇಕು. ನಿಮ್ಮ ನಿಮ್ಮ ವರ್ಣಾಶ್ರಮ ಧರ್ಮದ ಅನುಷ್ಠಾನದಿಂದ ಪರಮಾತ್ಮನನ್ನು ಆರಾಧಿಸಿರಿ.

ಸಧ್ರೀಚೀನಾನ್ ವಃ ಸಮನಸಃ ಕೃಣೋಮ್ಯೇ
ಕಶ್ನುಷ್ಟೀನ್ ಸಂವನನೇನ ಸಹೃದಃ ।
ದೇವಾ ಇವೇದಮೃತಂ ರಕ್ಷಮಾಣಾಃ
ಸಾಯಂಪ್ರಾತಃ ಸುಸಮಿತಿರ್ವೋ ಅಸ್ತು ॥ ೭ ॥
(ಅಥರ್ವ. ಪೈಪ್ಪಲಾದ ಶಾಖಾ ೫–೧೯)

ಪರಸ್ಪರ ಪ್ರೀತಿಯ ಮೂಲಕ ಸಮಾನವಾದ ಪರಮಗತಿಯನ್ನು ಹೊಂದಲಿಚ್ಛಿಸುವ, ನಿಮ್ಮನ್ನು, ಮನಸ್ಸನ್ನು ಜಯಿಸುವವರನ್ನಾಗಿ ಮಾಡುವೆನು. ನೀವೆಲ್ಲರೂ ಪರಸ್ಪರ ಪ್ರೀತಿಯ ಮೂಲಕ ಸಮಾನತೆ

ಯಿಂದ, ಒಬ್ಬ ನಾಯಕನನ್ನು ಅನುಸರಿಸುವಂತೆ ಮಾಡುವೆನು. ದೇವತೆಗಳು ಒಂದೇ ಮನಸ್ಸಿನಿಂದ, ಹೇಗೆ ಅಮೃತದ ರಕ್ಷಣೆಯನ್ನು ಮಾಡುವರೋ ಅಂತೆಯೇ ಹಗಲಿರುಳೂ ನೀವು ಧರ್ಮದ ಮತ್ತು ರಾಷ್ಟ್ರದ ತನ್ನ ಸಂಸ್ಕೃತಿಯ ರಕ್ಷಣೆಯನ್ನು ಮಾಡತಕ್ಕದ್ದು. ಅದಕ್ಕಾಗಿ ರಾತ್ರಿಂದಿವವಾಗಿ ನಿಮ್ಮ ಐಕಮತ್ಯದ ಸಭೆಯು ಸೇರುತ್ತಲಿರಲಿ.

"ವೇದಮನೂಚ್ಯಾಚಾರ್ಯೋಂತೇ ವಾಸಿನ ಮನುಶಾಸ್ತಿ ॥" (ತೈ. ಶೀಕ್ಷಾ. ಅ. ೧೧-೧). ವೇದವನ್ನು ಹೇಳಿಕೊಟ್ಟು ಮನೆಗೆ ಕಳುಹಿಸುವಾಗ ಆಚಾರ್ಯನಾದವನು ಗೃಹಸ್ಥಾಶ್ರಮವನ್ನು ಸ್ವೀಕರಿಸುವ ಇಚ್ಛೆಯುಳ್ಳ ಶಿಷ್ಯನನ್ನು ಕುರಿತು ಈ ಪರಿ ಬೋಧಿಸುವನು. ವೇದಾಧ್ಯಯನವನ್ನು ಮಾಡಿದ ಮೇಲೆ ಧರ್ಮಜಿಜ್ಞಾಸೆಯನ್ನು ಮಾಡುವಂಥ ಪದ್ಧತಿಯು ಮೊದಲಿತ್ತು. ಧರ್ಮಕರ್ಮದ ಯಥಾವಜ್ಞಾನವನ್ನು ಬ್ರಹ್ಮಚರ್ಯಾಶ್ರಮದಲ್ಲಿ ಮಾಡಿಕೊಂಡು ಗೃಹಸ್ಥಾಶ್ರಮದಲ್ಲಿ ಅವರ ಅನುಷ್ಠಾನವನ್ನು ಮಾಡುವಂಥ ಪದ್ಧತಿಯು ಮೊದಲಾಗಿತ್ತು. ಅದೇ ಈ ಉಪದೇಶ.

"ಸತ್ಯಂ ವದ। ಧರ್ಮಂ ಚರ। ಸ್ವಾಧ್ಯಾಯಾನ್ಮಾ ಪ್ರಮದಃ। ಆಚಾರ್ಯಾಯ ಪ್ರಿಯಂ ಧನ ಮಾಹೃತ್ಯ ಪ್ರಜಾತಂತುಂ ಮಾವ್ಯವಚ್ಛೇತ್ಸೀಃ। ಸತ್ಯಾನ್ನ ಪ್ರಮದಿತವ್ಯಂ। ಧರ್ಮಾನ್ನ ಪ್ರಮದಿತವ್ಯಂ। ಕುಶಲಾನ್ನ ಪ್ರಮದಿತವ್ಯಂ। ಭೂತ್ಯೈನ ಪ್ರಮದಿತವ್ಯಂ। ಸ್ವಾಧ್ಯಾಯ ಪ್ರವಚನಾಭ್ಯಾಂ ನ ಪ್ರಮದಿತವ್ಯಂ॥" (ತೈ. ಶೀಕ್ಷಾ. ೧೧-೧). ಮಗು ಸತ್ಯವನ್ನೇ ನುಡಿ. ಧರ್ಮವನ್ನು ಪರಿಪಾಲಿಸು. ವರ್ಣಾಶ್ರಮದ ಅನುಸಾರವಾಗಿ ನಡೆ. ಗುರುದಕ್ಷಿಣೆಯನ್ನು ಕೊಟ್ಟು ಆಚಾರ್ಯರಿಂದ ಅನುಜ್ಞೆಯನ್ನು ಪಡೆದು ಕುಲ-ಶೀಲ-ಜಾತಿಗೆ ಅನುರೂಪವಾದ ಯೋಗ್ಯ ವಧುವಿನ ಪಾಣಿಗ್ರಹಣವನ್ನು ಮಾಡು. ಸಂತತಿ ವಿಚ್ಛೇದವನ್ನು ಮಾಡಬೇಡ. ಸುಪುತ್ರವಂತನಾಗು. ಪುತ್ರನಾಗದಿದ್ದರೆ ಪುತ್ರಕಾಮೇಷ್ಟಿಯಾದಿಗಳ ಅನುಷ್ಠಾನವನ್ನು ಮಾಡಿ ಪುತ್ರನನ್ನು ಪಡೆ. ಸತ್ಯಸ್ವರೂಪವಾದಂಥಾ ಪರಮಾತ್ಮನನ್ನು ಸಂಸಾರದಲ್ಲಿ ಮರೆಯಕೂಡದು. ಮರೆತು ಪ್ರಪಂಚವನ್ನು ಸತ್ಯವೆಂದು ನಂಬಬೇಡ. ಕರ್ತವ್ಯಗಳನ್ನು ಮರೆಯಬೇಡ. ಯಥಾರ್ಥ ಭಾಷಣವನ್ನು ಬಿಡಬೇಡ. ಮೋಕ್ಷ ಧರ್ಮದ

ಅನುಷ್ಠಾನದಲ್ಲಿಯೂ ತಪ್ಪಬೇಡ. ವೈಯುಕ್ತಿಕ, ಸಾಮಾಜಿಕ ಧರ್ಮಗಳನ್ನು ಉಲ್ಲಂಘಿಸಬೇಡ. ಕುಲಧರ್ಮ, ಕುಲಾಚಾರಗಳನ್ನೂ ಬಿಡಬೇಡ. ಆಯಾ ವ್ಯಕ್ತಿಯ ಸಂಗಡ ಆಯಾ ಧರ್ಮದಂತೆ ನಡೆದುಕೊ. ಕುಟುಂಬದ ಪೋಷಣೆಗಾಗಿಯೂ, ದೇವಪಿತೃಗಳ ಕಾರ್ಯದ ನಿರ್ವಹಣೆಗಾಗಿಯೂ, ಅತಿಥಿಯ ಸೇವೆಗಾಗಿಯೂ, ಬಡಬಗ್ಗರಿಗಾಗಿ ಸಹಾಯ ಮಾಡುವುದಕ್ಕಾಗಿಯೂ ತಪ್ಪದೇ ನ್ಯಾಯವಾಗಿ ಧನಸಂಪಾದನೆಯನ್ನು ಮಾಡು. ದಾನಧರ್ಮವನ್ನು ಬಿಡಬೇಡ. ಆತ್ಮಹಿತದಿಂದ ವಂಚಿತನಾಗಬೇಡ. ಆತ್ಮಹಿತವನ್ನು ಸಾಧಿಸು. ಐಶ್ವರ್ಯವನ್ನು ತಂದುಕೊಡುವ ಮಂಗಳಕಾರ್ಯಗಳಲ್ಲಿ ಉದಾಸೀನತೆಯನ್ನು ತಾಳಬೇಡ. ಸದ್ಗ್ರಂಥಗಳ ಅಭ್ಯಾಸದಲ್ಲಿಯೂ ಮತ್ತು ವೇದಗಳ ಅಧ್ಯಯನ ಅಧ್ಯಾಪನೆಗಳಲ್ಲಿಯೂ ದುರ್ಲಕ್ಷ್ಯ ಮಾಡಬೇಡ.

“ದೇವಪಿತೃಕಾರ್ಯಾಭ್ಯಾಂ ನ ಪ್ರಮುದಿತವ್ಯಂ। ಮಾತೃದೇವೋ ಭವ। ಪಿತೃ ದೇವೋ ಭವ। ಆಚಾರ್ಯ ದೇವೋ ಭವ। ಅತಿಥಿ ದೇವೋ ಭವ। ಯಾನ್ಯನವದ್ಯಾನಿ ಕರ್ಮಾಣಿ। ತಾನಿ ಸೇವಿತವ್ಯಾನಿ। ನೋ ಇತರಾಣಿ। ಯಾನ್ಯಸ್ಮಾಕꣳ ಸುಚರಿತಾನಿ। ತಾನಿ ತ್ವಯೋಪಾಸ್ಯಾನಿ। ನೋ ಇತರಾಣಿ” (ತೈ. ಶೀಕ್ಷಾ೧೧–೨). ದೇವ ಪಿತೃಕಾರ್ಯಗಳಲ್ಲಿ ಯಾವ ಪ್ರಮಾದವೂ ಆಗಕೂಡದು. ತಾಯಿಯಲ್ಲಿ ದೇವತಾ ಬುದ್ಧಿಯನ್ನಿಡು. ತಂದೆಯಲ್ಲಿ ದೇವತಾ ಬುದ್ಧಿಯನ್ನಿಡು. ಆಚಾರ್ಯರಲ್ಲಿ ಮತ್ತು ಅತಿಥಿಗಳಲ್ಲಿಯೂ ದೇವತಾ ಬುದ್ಧಿಯನ್ನಿಡು. ಈ ಎಲ್ಲರನ್ನು ದೇವರಂತೆ ಸೇವಿಸು. ಅನಿಂದಿತವಾದ ಶಾಸ್ತ್ರೋಕ್ತ ಕರ್ಮಗಳನ್ನು ನೀನು ನಡೆಸತಕ್ಕದ್ದು. ಶಿಷ್ಟಾಚಾರವನ್ನು ಪರಿಪಾಲಿಸತಕ್ಕದ್ದು. ದೊಡ್ಡವರ ಸದೋಷ ಅಕರ್ತವ್ಯಗಳನ್ನು ಎಂದಿಗೂ ಅನುಸರಿಸಬಾರದು. ನಮ್ಮ ಸತ್ಕರ್ಮಗಳನ್ನು ಮಾತ್ರ ನೀನು ಅನುಸರಿಸತಕ್ಕದ್ದು. ಬೇರೆ ಯಾವ ಕಾರಣದಿಂದಲೂ ಆಗಿರಲಿ ಅಂತಹ ಅಕ್ರಮವಾದ ಆಚರಣೆಯನ್ನು ನೀನು ಅನುಕರಿಸಕೂಡದು.

“ಯೇ ಕೇ ಚಾಸ್ಮಚ್ಛ್ರೇಯಾಂಸೋ ಬ್ರಾಹ್ಮಣಾಃ। ತೇಷಾಂ ತ್ವಯಾಽಽಸನೇನ ಪ್ರಶ್ವಸಿತವ್ಯಂ ॥” (ತೈ. ಶೀಕ್ಷಾ. ೧೧–೩). ಸಚ್ಛೀಲ

ಮತ್ತು ಸದ್ಧರ್ಮಪರಾಯಣರಾದ ಜ್ಞಾನವಿಜ್ಞಾನದಿಂದ ನಮಗಿಂತಲೂ ಅಧಿಕ ಸಂಪನ್ನರಾದ ಬ್ರಾಹ್ಮಣರನ್ನು ಮಾತ್ರ ನೀನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಬೇಕು. ಪಾದಸೇವನಾದಿಗಳಿಂದ ಅವರ ಶ್ರಮವನ್ನು ಹೋಗಲಾಡಿಸಬೇಕು. ಅವರು ಉಪದೇಶಿಸಿದುದನ್ನು ನೀನು ಕಿವಿಗೊಟ್ಟು ಕೇಳಬೇಕು. ಅದನ್ನು ಆಚರಣದಲ್ಲಿ ತರಬೇಕು.

"ಶ್ರದ್ಧಯಾ ದೇಯಂ । ಅಶ್ರದ್ಧಯಾ ದೇಯಮ್ । ಶ್ರಿಯಾ ದೇಯಮ್ । ಹ್ರಿಯಾ ದೇಯಮ್ । ಭಿಯಾ ದೇಯಮ್ । ಸಂವಿದಾ ದೇಯಮ್ । ಅಥ ಯದಿ ತೇ ಕರ್ಮವಿಚಿಕಿತ್ಸಾ ವಾ ವೃತ್ತ ವಿಚಿಕಿತ್ಸಾ ವಾ ಸ್ಯಾತ್ । ಯೇ ತತ್ರ ಬ್ರಾಹ್ಮಣಾಃ ಸಂಮರ್ಶಿನಃ। ಯುಕ್ತಾ ಆಯುಕ್ತಾಃ। ಅಲೂಕ್ಷಾ ಧರ್ಮ ಕಾಮಾಃ ಸ್ಯುಃ। ಯಥಾ ತೇ ತತ್ರ ವರ್ತೇರನ್ । ತಥಾ ತತ್ರ ವರ್ತೇಥಾಃ । ಅಥಾಭ್ಯಾಖ್ಯಾತೇಷು । ಯೇ ತತ್ರ ಬ್ರಾಹ್ಮಣಾಃ ಸಂಮರ್ಶಿನಃ । ಯುಕ್ತಾ ಆಯುಕ್ತಾಃ । ಅಲೂಕ್ಷಾ ಧರ್ಮ ಕಾಮಾಃ ಸ್ಯುಃ । ಯಥಾ ತೇ ತೇಷು । ವರ್ತೇರನ್ ತಥಾ ತೇಷು ವರ್ತೇಥಾಃ ।" (ತೈ. ಶೀಕ್ಷಾ. ೧೧-೪). ಯಾವುದನ್ನು ದಾನ ಕೊಡುವುದಾದರೂ ದೇಶ, ಕಾಲ, ಪಾತ್ರಗಳನ್ನು ಅನುಲಕ್ಷಿಸಿ ಶ್ರದ್ಧೆಯಿಂದ ಮಾಡತಕ್ಕದ್ದು. ಅಶ್ರದ್ಧೆಯಿಂದ ಮಾಡಬಾರದು. ಅಶ್ರದ್ಧೆಯಿಂದ ಮಾಡಿದ ಕರ್ಮಕ್ಕೆ ದುಷ್ಫಲವಾಗುವುದು. ತನ್ನ ಐಶ್ವರ್ಯಕ್ಕೆ ಶೋಭಿಸುವ ಹಾಗೆ ದಾನವನ್ನು ಮಾಡಬೇಕು. ತನ್ನ ಶಕ್ತಿಯ ಅನುಸಾರ ಸೇವೆಯನ್ನು ಸಲ್ಲಿಸಬೇಕು. ಲಜ್ಜೆಯಿಂದಾಗಲೀ ಭೀತಿಯಿಂದಾಗಲೀ ನಾನು ಕೊಡತಕ್ಕದ್ದು ಅತಿ ಸ್ವಲ್ಪವಾಗಿದೆ ಎಂಬ ಭಾವನೆ ಇಟ್ಟುಕೊಳ್ಳುವಲ್ಲಿ ಅಹಂಕಾರಕ್ಕೆ ಎಡೆ ಸಿಗದು. ಎಲ್ಲಾ ಸಂಪತ್ತೂ ಪರಮಾತ್ಮನದೇ ಆಗಿರುವುದು. ನಾನು ವೃಥಾ ನನ್ನದೆಂದು ಅಭಿಮಾನಿಸುವೆನು. ತನ್ನ ಧನವೆಂದೆನ್ನುವಲ್ಲಿ ಭಗವಂತನ ಧನವನ್ನು ಅಪಹರಿಸಿದಂತಾಗುವುದು. ಇದರಿಂದ ಆ ಲಕ್ಷ್ಮೀಪತಿಯ ದ್ರೋಹಕ್ಕೆ ಪಾತ್ರನಾಗುವೆನು. ಈ ವಿಧದ ವಿಚಾರದಿಂದಾದರೂ ದಾನ ಕೊಡತಕ್ಕದ್ದು. ಆಚಾರ ವ್ಯವಹಾರ ವಿಷಯದಲ್ಲಿಯೂ, ಶೀಕ್ಷೆ ದೀಕ್ಷೆಯ ವಿಷಯದಲ್ಲಿಯೂ, ಶ್ರೌತ ಸ್ಮಾರ್ತ ಕರ್ಮಗಳಲ್ಲಿಯೂ, ನಿನ್ನ ಜೀವನ ವೃತ್ತಿಯಲ್ಲಿಯೂ, ಆಯಾ

ನರ ಸಂಗಡ ನಡೆದುಕೊಳ್ಳುವ ವಿಷಯದಲ್ಲಿ ಯಾವುದಾದರೂ ಸಂದೇಹ ಂದೊದಗುವಲ್ಲಿ ಬ್ರಹ್ಮನಿಷ್ಠರಾದ ಊಹಾಪೋಹ ಕುಶಲರಾದ ಶ್ರುತಿ ಸ್ತ್ರಾನುವಿಚಾರವಾಗಿ ಉಚಿತ ನಿರ್ಣಯವನ್ನು ಕೊಡುವುದರಲ್ಲಿ ದಕ್ಷ ವ, ಸದಾಚಾರ ಸಂಪನ್ನರಾದ, ದಯಾದಾನ ಧರ್ಮಶೀಲರಾದ ಸ್ವಧರ್ಮ ನಿರತರಾದ, ರಾಗದ್ವೇಷ ರಹಿತರಾದ, ಪರಪ್ರೇರಣೆಯಂತೆ ನಡೆದುಕೊಳ್ಳದ, ಸೌಮ್ಯಸ್ವಭಾವದ, ಆನಿರ್ವಿಕಾರ ಸನ್ಮಾನ್ಯ ಬ್ರಾಹ್ಮಣರು ತ ಪ್ರಸಂಗದಲ್ಲಿ ಹೇಗೆ ವರ್ತಿಸುವರೋ ಅದರಂತೆಯೇ ನೀನು ವರ್ತಿಸು. ದೋಷಾರೋಪಣೆಯಿಂದ ಕೂಡಿದ ಮನುಷ್ಯರ ಸಂಗಡ ವರ್ತಿಸುವ ಪ್ರಸಂಗ ಬಂದರೆ, ಆತನ ವಿಷಯದಲ್ಲಿ ವಿವೇಕ-ವಿಚಾರ ಸಂಪನ್ನರಾದ, ಯೋಗ್ಯರಾದ, ಧರ್ಮದಲ್ಲಿ ಆಸಕ್ತರಾಗಿದ್ದ, ಮೃದು-ಮಧುರ ಸ್ವಭಾವ ಳ್ಳ ನ್ಯಾಯಪ್ರಿಯ ಬ್ರಾಹ್ಮಣರು ಆತನ ವಿಷಯದಲ್ಲಿ ನಡೆದುಕೊಂಡಂತೆ ನೀನೂ ನಡೆದುಕೋ.

"ಏಷ ಆದೇಶಃ। ಏಷ ಉಪದೇಶಃ। ಏಷಾ ವೇದೋಪನಿಷತ್। ಏತದನುಶಾಸನಮ್। ಏವ ಮುಪಾಸಿತವ್ಯಮ್। ಏವ ಮುಚೈತದು ಪಾಸ್ಯಮ್॥" (ತೈ. ಉ.). ಇದೇ ಶ್ರುತಿಯ ಆದೇಶವಿದೆ. ಇದೇ ಗುರುಗಳು ಶಿಷ್ಯರನ್ನೂ, ತಂದೆಯವರು ಪುತ್ರನನ್ನೂ ಉಪದೇಶಿಸುವ ಧರ್ಮ ಕರ್ಮ. ಇದೇ ವೇದೋಪನಿಷತ್ತುಗಳ ರಹಸ್ಯ. ಇದೇ ಈಶ್ವರವಾಕ್ಯ. ಈ ವಿಧವಾಗಿಯೇ ಧರ್ಮ ಕರ್ಮಗಳನ್ನು ಅನುಷ್ಠಿಸತಕ್ಕದ್ದು. ಈ ಪ್ರಕಾರ ವಾಗಿಯೇ ಆಚರಿಸತಕ್ಕದ್ದು.

ಸನಾತನ ವೈದಿಕಧರ್ಮ ಸಂಸ್ಕೃತಿಯು ಹೇಗಿದೆ ಎಂಬುದನ್ನು ತಿಳಿದು ಅದನ್ನು ಆಚರಣದಲ್ಲಿ ತರುವುದಕ್ಕಾಗಿಯೂ ಅದರಂತೆ ಕುಟುಂಬ ಸಮಾಜಗಳನ್ನು ತಿದ್ದುವುದಕ್ಕಾಗಿಯೂ, ವಿಶ್ವಮಾನ್ಯವಾಗಿರುವ ಈ ಸಂಸ್ಕೃತಿಯ ರಕ್ಷಣೆಗಾಗಿಯೂ, ಈವರೆಗಿನ ವಿವೇಚನೆಯು ಮಾರ್ಗ ದರ್ಶಕವಾಗಬಹುದು.

## ವೈದಿಕ ಪ್ರಾರ್ಥನೆ

"ಓ ಇಷೇ ತ್ವೋರ್ಜೇತ್ವಾ ವಾಯವಃಸ್ಥೋ ಪಾಯವಃಸ್ಥ ದೇವೋ ವಃ ಸವಿತಾ ಪ್ರಾರ್ಪಯತು ಶ್ರೇಷ್ಠತಮಾಯ ಕರ್ಮಣ

೧

**ಆಪ್ಯಾಯಧ್ವಮಘ್ನಿ ಯಾ ದೇವಭಾಗ ಮೂರ್ಜಸ್ವತೀಃ ಪಯಸ್ವತೀಃ ಪ್ರಜಾವತೀರನಮೀವಾ ಅಯಕ್ಷ್ಮಾ ಮಾವಃ ಸ್ತೇನ ಈಶತ ಮಾಘ ಶಂ ಸೋರುದ್ರಸ್ಯ ಹೇತಿಃ ಪರಿವೋ ವೃಣಕ್ತು ಧ್ರುವಾ ಅಸ್ಮಿನ್ ಗೋಪತೌಸ್ಯಾತ ಬಹ್ವೀರ್ಯಜಮಾನಸ್ಯ ಪಶೂನ್ ಪಾಹಿ । ೩"** (ಯಜು. ೧-೧-೧). ಹೇ ಪರಮಾತ್ಮನೇ! ನಿನ್ನ ಬ್ರಹ್ಮತತ್ವ ಮತ್ತು ವಿವೇಕ ಗಳಿಗಾಗಿ ನಾನು ನಿನ್ನನ್ನು ಪ್ರಾರ್ಥಿಸುತ್ತೇನೆ. ಯಥೇಷ್ಟವಾದ ಮಳೆಬೆಳೆ ಗಳಿಗಾಗಿ ನಾನು ನಿನ್ನನ್ನು ಪ್ರಾರ್ಥಿಸುತ್ತೇನೆ. ಸುಪ್ರಜೆ ಮತ್ತು ಅಭ್ಯುದಯ ಗಳಿಗಾಗಿ ನಾನು ನಿನ್ನನ್ನು ಪ್ರಾರ್ಥಿಸುತ್ತೇನೆ. ಸತ್ವದ ಅಧಿಕಾರದ ಬಗ್ಗೆಯೂ ಮತ್ತು ಉತ್ಕೃಷ್ಟವಾದ ಸದಾಚಾರದ ಬಗ್ಗೆಯೂ ನಾನು ನಿನ್ನನ್ನು ಪ್ರಾರ್ಥಿಸುತ್ತೇನೆ. ನಿನ್ನ ಗತಿಯು ಸರ್ವತ್ರವಿದೆ. ಎಲ್ಲರ ಹಿತದ ಚಿಂತೆ ನಿನಗಿರುವುದು. ಎಲ್ಲರನ್ನೂ ಸೃಜಿಸುವ ಪರಮಾತ್ಮನು ನನ್ನಿಂದ ಶ್ರೇಷ್ಠ ಕರ್ಮಗಳನ್ನು ಮಾಡಿಸುವುದಕ್ಕಾಗಿ ಕಾರಣವಾಗಲಿ. ಮತ್ತು ನಮ್ಮನ್ನು ಅಂಥಾ ಶ್ರೇಷ್ಠ ಕರ್ಮಗಳಲ್ಲಿಯೇ ಪ್ರೇರಿಸಲಿ. ದೇವತೆಗಳಿಗಾಗಿ ಎಸಗುವ ಕರ್ಮಗಳಿಗೆಲ್ಲಾ ಜ್ಞಾನಸಾಧನವಾಗಿರುವಂಥ ಇಂದ್ರಿಯಗಳು, ಕೃಷಿ, ಹಾಲು ಮುಂತಾದುವುಗಳಿಂದ ಜೀವನಕ್ಕೆ ಸಾಧನವಾಗುವ ಗೋವುಗಳು, ಸುಖಕ್ಕೆ ಕಾರಣವಾಗುವ ಸದಾಚರಣೆ ಮತ್ತು ಜ್ಞಾನವಿಚಾರ ಇವು ದೇವರ ಸೇವೆಗೂ ತನ್ನ ಅಭ್ಯುದಯ ನಿಃಶ್ರೇಯಸ್ಸುಗಳಿಗೂ ಕಾರಣವಾದವುಗಳು. ಆದುದರಿಂದ ಇವು ಯಾವ ವಿಧದಿಂದಲೂ ನಷ್ಟಪಡಿಸಲು ಯೋಗ್ಯವಾದವು ಗಳಲ್ಲ. ಪರಮಾತ್ಮನ ಕೃಪೆಯಿಂದ ಆಕಳುಗಳು, ಸ್ತ್ರೀಯರು, ಅಣ್ಣಂದಿರ ತಮ್ಮಂದಿರ ಹೆಂಡಿರು ಇವರೆಲ್ಲಾ ಆರೋಗ್ಯಶೀಲರಾಗಿರಬೇಕು ಮತ್ತು ಸಂತತಿ ಸಂವರ್ಧನಕ್ಕಾಗಿ ಇವರಲ್ಲಿ ತುಂಬಾ ಹಾಲೂ ಇರಬೇಕು. ಇವರಿಗೆಲ್ಲಾ ಯಾವ ರೋಗವೂ ಆಗಬಾರದು. ಇವರು ಕ್ಷಯರೋಗ ದಿಂದ ರಹಿತರಾಗಿರಬೇಕು. ಇವರ ಮೇಲೆ ಕಳ್ಳರು ಮತ್ತು ದುಷ್ಟಜನರು ತಮ್ಮ ಅಧಿಕಾರವನ್ನು ನಡೆಸಬಾರದು. ಹೇ ಪರಮಾತ್ಮನೇ! ನಿನ್ನ ಸ್ವಾಮಿತ್ವದಲ್ಲಿ ನಮ್ಮ ಪ್ರಜೆ, ಹಸುಗಳು, ಸ್ತ್ರೀಯರು, ನಮ್ಮ ಬುದ್ಧಿ— ಎಲ್ಲವೂ ನಿನ್ನ ಕೃಪೆಯಿಂದ ನಿಶ್ಚಲವಾಗಿಯೂ, ನಿರ್ದುಷ್ಟವಾಗಿಯೂ ಇರ ಬೇಕು. ನೀನು ಯಜಮಾನನ ಇಂದ್ರಿಯಗಳನ್ನು ಪುಷ್ಟವಾಗಿರಿಸಬೇಕು.

ಜನಗಳ, ಗೋವುಗಳ ಮತ್ತು ಅನ್ಯ ಪಶುಪಕ್ಷ್ಯಾದಿಗಳ ರಕ್ಷಣೆಯನ್ನೂ ಮಾಡು. ಅವರ ಸಂಖ್ಯೆಯನ್ನು ಹೆಚ್ಚಿಸು.

**"ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿ ಹಿತಂ ಮುಖಮ್ । ತತ್ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ ॥"** (ಈಶಾ. ಉ. ೧೫). ಹೇ ಸೂರ್ಯನೇ! ಮೋಹವಶಮಾಡುವಂಥ ಚಿತ್ತಾಕರ್ಷಕವಾದ ಹೆಣ್ಣು, ಹೊನ್ನು, ಮಣ್ಣು ಮುಂತಾದವುಗಳಿಂದಲೂ ಮತ್ತು ಕಣ್ಣು ಕುಕ್ಕುವ ಈ ನಿನ್ನ ಪ್ರಕಾಶದಿಂದಲೂ, ಪಾತ್ರವನ್ನು ಮುಚ್ಚಿಹಾಕಿ ವಸ್ತುವಿನ ದರ್ಶನವನ್ನು ಮಾಡಕೊಡದ ಪರಿಯಲ್ಲಿ ಸತ್ಯಸ್ವರೂಪನಾದ ನಿನ್ನ ಮುಖವು ಆಚ್ಛಾದಿತವಾಗಿದೆ. ಸತ್ಯಸ್ವರೂಪದ ಪ್ರಾಪ್ತಿಗಾಗಿ ಜೀವಿಸುವ ಧರ್ಮವುಳ್ಳ ಮತ್ತು ಸತ್ಯಧರ್ಮದ ಅನುಷ್ಠಾನ ಮಾಡುವ ನನಗೆ ನಿನ್ನ ಯಥಾರ್ಥ ಸಚ್ಚಿದಾನಂದ ಸ್ವರೂಪದ ದರ್ಶನವಾಗುವುದಕ್ಕಾಗಿ ಈ ಪ್ರತಿಬಂಧಕವಾದವುಗಳ ಮೋಹವನ್ನೆಲ್ಲಾ ನೀನು ದೂರಮಾಡು.

**"ಪೂಷನ್ನೇಕರ್ಷೇ ಯಮ ಸೂರ್ಯ ಪ್ರಾಜಾಪತ್ಯವ್ಯೂಹ ರಶ್ಮೀನ್ ಸಮೂಹ ॥ ತೇಜೋ ಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ ಯೋಽಸಾವಸೌ ಪುರುಷಃ ಸೋಽಹಮಸ್ಮಿ ॥"** (ಈಶಾ. ಉ. ೧೬). ಜಗತ್ತನ್ನು ಪೋಷಿಸುವ ಹೇ ಸೂರ್ಯನೇ! ಒಬ್ಬ ಜ್ಞಾನಿಯೇ, ಒಬ್ಬ ಪವಿತ್ರನೇ, ತನ್ನ ನಿಯಮಗಳಿಂದ ಜಗತ್ತನ್ನು ನಡೆಸುವ ಯಮನೇ, ರಶ್ಮಿಗಳನ್ನೂ, ಪ್ರಾಣಗಳನ್ನೂ, ರಸಗಳನ್ನೂ ಸ್ವೀಕರಿಸುವ ಸೂರ್ಯನೇ, ಈ ಎಲ್ಲಾ ಪ್ರಜೆಗಳ ಸ್ವಾಮಿತ್ವದ ಅಧಿಕಾರ ಮತ್ತು ಧರ್ಮವುಳ್ಳ ಹೇ ಪ್ರಾಜಾಪತ್ಯನೇ, ನಿನ್ನ ಈ ಸಂತಾಪಜನಕವಾದ ರಶ್ಮಿಗಳ ಜಾಲವನ್ನು ಉಪಸಂಹರಿಸು. ನಿನ್ನ ಅತ್ಯಂತ ಸುಖಮಯವಾದ ಆ ಸ್ವಪ್ರಕಾಶ ಸ್ವರೂಪವನ್ನು ನಾನು ನೋಡುವೆನು. ಅಂದರೆ ಸಾಕ್ಷಾತ್ಕರಿಸುವೆನು. ಈ ಪೂರ್ಣಸ್ವರೂಪವೇ ನಾನು.

**"ಅಗ್ನೇನಯ ಸುಪಥಾರಾಯೇ ಅಸ್ಮಾನ್ ವಿಶ್ವಾನಿ ದೇವ ವಯುನಾನಿ ವಿದ್ವಾನ್ ॥ ಯುಯೋಧ್ಯಸ್ಮಜ್ಜುಹುರಾಣಮೇನೋ ಭೂಯಿಷ್ಠಾಂತೇ ನಮ ಉಕ್ತಿಂ ವಿಧೇಮ ॥** (ಈಶಾ. ಉ. ೧೮). ಹೇ ಅಗ್ನಿಯೇ! ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕವಾದ ಉತ್ಕೃಷ್ಟ ವೈಭವದ

ಅನುಭವಕ್ಕಾಗಿ ನಮ್ಮನ್ನು ಎಲ್ಲಾ ವಿಧದ ಅತಿ ಉನ್ನತ ಸನ್ಮಾರ್ಗದಿಂದಲೇ ಒಯ್ಯುವವನಾಗು. ಎಲ್ಲಾ ವಿಧದ ಸನ್ಮಾರ್ಗಗಳನ್ನೂ, ಕರ್ಮ ಉಪಾಸನಾ ಜ್ಞಾನಾದಿ ಸಾಧನಗಳನ್ನೂ ನೀನು ತಿಳಿದವನಾಗಿದ್ದೀಯೆ. ನಮ್ಮನ್ನು ವಿನಾಶಗೊಳಿಸುವ ಈ ಎಲ್ಲಾ ಪಾಪಗಳನ್ನು ನೀನು ನಷ್ಟಪಡಿಸು. ಈ ಪಾಪಗಳು ನಿವೃತ್ತಿಯಾದಮೇಲೆಯೇ ನಮ್ಮ ಸ್ವರೂಪಭೂತವಾಗಿರುವ ನಿನ್ನ ಆ ಸಚ್ಚಿದಾನಂದ ಸ್ವರೂಪವನ್ನು ಹೊಂದಲು ನಾವು ಅರ್ಹರಾಗುತ್ತೇವೆ. ನಿನ್ನ ಯಥಾರ್ಥ ಉಪಾಸನೆಯನ್ನು ನಡೆಸಲು ಅಸಮರ್ಥರಾದ ನಾವು ನಿನ್ನ ಶರಣಾಗತಿರೂಪವಾದ ಕೇವಲ ಈನಮನದ ಒಂದು ಭಾವನೆಯನ್ನೇ ಪ್ರಕಟಪಡಿಸುತ್ತೇವೆ. ಕೇವಲ ನಮಸ್ಕಾರದಿಂದಲೇ ನಿನಗೆ ಎಲ್ಲಾ ಉಪಚಾರಗಳನ್ನು ಸಲ್ಲಿಸುತ್ತೇವೆ. ನಿನ್ನ ಸೇವೆಯನ್ನು ಮಾಡುತ್ತೇವೆ. ಈನಮನದ ಹೊರ್ತು ಅನಂತಸ್ವರೂಪಿಯಾಗಿಯೂ, ಮಹಾಮಹಿಮಶಾಲಿಯಾಗಿಯೂ, ಅಖಂಡ ಆನಂದಘನನಾಗಿಯೂ ಇರುವ ನಿನ್ನ ಇನ್ನಾವ ಸೇವೆ ಮಾಡಲೂ ನಮಗೆ ಶಕ್ತಿಯಿಲ್ಲ.

"ತ್ವಮಗ್ನೇ ಯಜ್ಞಾನಾಂ ಹೋತಾ ವಿಶ್ವೇಷಾಂ ಹಿತಃ। ದೇವೇಭಿರ್ಮಾನುಷೇ ಜನೇ॥" (ಸಾಮ. ೧-೧-೧-೨). ಹೇ ಅಗ್ನಿಯೇ! ನೀನು ನಮ್ಮ ಎಲ್ಲಾ ವಿವಿಧ ಯಜ್ಞಗಳನ್ನು ಪೂರ್ಣಪಡಿಸುವವನಾಗಿದ್ದೀಯೆ, ಹಾಗೂ ವಿಶ್ವಕ್ಕೆಲ್ಲಾ ದೈವೀಗುಣಗಳನ್ನು ನೀಡಿ ಎಲ್ಲರ ಹಿತವನ್ನೂ ಸಾಧಿಸುವವನಾಗಿದ್ದೀಯೇ. ಎಲ್ಲರನ್ನೂ ಉದ್ಧರಿಸುವವನಾಗಿದ್ದೀಯೆ.

"ಭದ್ರಂ ಕರ್ಣೇಭಿಃ ಶೃಣುಯಾಮದೇವಾಃ। ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ। ಸ್ಥಿರೈ ರಂಗೈ ಸ್ತುಷ್ಟುವಾಂಸಸ್ತನೂಭಿಃ। ವ್ಯಶೇಮ ದೇವ ಹಿತಂ ಯದಾಯುಃ॥ ಸ್ವಸ್ತಿನ ಇಂದ್ರೋ ವೃದ್ಧಶ್ರವಾಃ। ಸ್ವಸ್ತಿನಃ ಪೂಷಾವಿಶ್ವವೇದಾಃ। ಸ್ವಸ್ತಿನಸ್ತಾರ್ಕ್ಷ್ಯೋ ಅರಿಷ್ಟನೇಮಿಃ। ಸ್ವಸ್ತಿನೋ ಬೃಹಸ್ಪತಿರ್ದಧಾತು॥" (ಯಜು. ಆರಣ್ಯ. ೧-೧೧). ದೇವ ದೇವತೆಗಳಿರಾ! ನಾವು ನಮ್ಮ ಕಿವಿಗಳಿಂದ ಮಂಗಲಪ್ರದವಾದ ಮತ್ತು ಶಾಂತಿಯನ್ನೀಯುವ, ಅಚಲ ಸುಖವನ್ನು ಕೊಡುವ ಶಬ್ದಗಳನ್ನೇ ಕೇಳಬೇಕು. ಯಜ್ಞವನ್ನು ಮಾಡುವ ಜನರನ್ನು ತಮ್ಮ ಕೃಪೆಯಿಂದ ಉದ್ಧರಿಸುವ ದೇವತೆಗಳಿರಾ! ನಮ್ಮ ಕಣ್ಣುಗಳಿಂದ ನಾವು

ಯಾವಾಗಲೂ ಮಂಗಲಕರವಾದ ಶುದ್ಧ ಸಾತ್ವಿಕ ದೃಶ್ಯವನ್ನೇ ನೋಡ ಬೇಕು. ನಿಮ್ಮ ಕೃಪೆಯಿಂದ ಅಕುಂಠಿತವಾದ ಇಂದ್ರಿಯಶಕ್ತಿಯುಳ್ಳ ಸ್ವಸ್ಥಕಾಯರಾದ ನಾವು ನಿಮ್ಮನ್ನು ಸ್ತುತಿಸುತ್ತಾ ನಿಮ್ಮ ಹಿತದ ದಿವ್ಯ ಜೀವನವನ್ನು ನಾವು ಪಡೆಯಬೇಕು. ಇಂದ್ರನೂ ನಮಗೆ ಕ್ಷೇಮವನ್ನೀ ಯಲಿ. ಸೂರ್ಯನೂ ನಮಗೆ ಕ್ಷೇಮವನ್ನೀಯಲಿ. ಗರುಡನೂ ಕ್ಷೇಮ ವನ್ನೀಯಲಿ. ಅರುಣನೂ ಕ್ಷೇಮವನ್ನೀಯಲಿ. ಬೃಹಸ್ಪತಿಯೂ ಕ್ಷೇಮ ವನ್ನೀಯಲಿ.

**ಸಹನಾವವತು । ಸಹನೌ ಭುನಕ್ತು । ಸಹ ವೀರ್ಯಂಕರ ವಾವಹೈ । ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ ॥** (ತೈ. ಉ). ಪರಮಾತ್ಮನು ನಮ್ಮ ಗುರುಶಿಷ್ಯರ ರಕ್ಷಣೆಯನ್ನು ಮಾಡಲಿ. ಅನ್ನಪಾನಾದಿಗಳಿಂದ ನಮ್ಮಿಬ್ಬರನ್ನೂ ಪೋಷಿಸಲಿ. ನಮ್ಮಿಬ್ಬರಿಂದಲೂ ಅನೇಕ ವೀರ್ಯವತ್ತರವಾದ ಮಹತ್ಕಾರ್ಯಗಳನ್ನು ಸಂಪೂರ್ಣವಾಗಿ ನೆರವೇರಿಸಲಿ. ಬ್ರಹ್ಮವರ್ಚಸ್ಸಿನಿಂದ ಕೂಡಿದ್ದ ನಮ್ಮ ಅಧ್ಯಯನವೆಲ್ಲಾ ಎಂದಿಗೂ ಮಲಿನವಾಗದೆ ಯಾವಾಗಲೂ ತೇಜಸ್ವಿಯಾಗಿ ಉಳಿಯಲಿ. ನಮ್ಮೀರ್ವರಲ್ಲಿಯೂ ಯಾವ ವಿಧದಿಂದಲೂ ವೈಮನಸ್ಯ, ಮನಸ್ತಾ ಪವೂ ಎಂದೆಂದಿಗೂ ಉಂಟಾಗದಿರಲಿ.

**ಸಹನೌ ಯಶಃ । ಸಹನೌ ಬ್ರಹ್ಮವರ್ಚಸಮ್ ॥** (ತೈ. ಶಾಂತಿ.). ಗುರುಶಿಷ್ಯರಾದ ನಮಗೆ ಒಮ್ಮೆಲೇ ಯಶಸ್ಸು ಒದಗಲಿ. ಒಮ್ಮೆಲೇ ನಮಗೆ ಬ್ರಹ್ಮವರ್ಚಸ್ಸು ಉಂಟಾಗಲಿ.

**ಆಪ್ಯಾಯಂತು ಮಮಾಂಗಾನಿ ವಾಕ್ ಪ್ರಾಣಶ್ಚಕ್ಷುಃ ಶ್ರೋತ್ರ ಮಥೋ ಬಲಮಿಂದ್ರಿಯಾಣಿ ಚ ಸರ್ವಾಣಿ ಸರ್ವಂ ಬ್ರಹ್ಮೌಪ ನಿಷದಂ ಮಾಹಂ ಬ್ರಹ್ಮ ನಿರಾಕುರ್ಯಾಂ ಮಾ ಮಾ ಬ್ರಹ್ಮ ನಿರಾಕರೋದನಿರಾಕರಣಮಸ್ತ್ವನಿರಾಕರಣಂ ಮೇಽಸ್ತು ತದಾತ್ಮನಿ ನಿರತೇ ಯ ಉಪನಿಷತ್ಸು ಧರ್ಮಾಸ್ತೇ ಮಯಿ ಸಂತು ತೇ ಮಯಿ ಸಂತು । ಓಂ ಶಾಂತಿಃ ಶಾಂತಿಃ ಶಾಂತಿಃ ॥** (ಛಾಂ. ಶಾಂತಿಪಾಠ). ನನ್ನ ಕೈಕಾಲು ಮುಂತಾದ ಅವಯವಗಳು, ವಾಕ್ಚಕ್ಷುಷಾದಿ ಇಂದ್ರಿಯ ಗಳು, ಪ್ರಾಣಗಳು, ಅಮೃತದಿಂದ ಆಪ್ಯಾಯಮಾನವಾದಂತೆ ಪುಷ್ಟ

ಮತ್ತು ಮಹಾ ತೇಜಸ್ಸುಳ್ಳವುಗಳಾಗಲಿ. ಬ್ರಹ್ಮವಿದ್ಯೆಯ ಅಭ್ಯಾಸಕ್ಕೆ ಸರ್ವತೋಪರಿ ಸಮರ್ಥವಾಗಿರಲಿ. ಆ ಬ್ರಹ್ಮತತ್ವವನ್ನು ಗ್ರಹಿಸುವುದಕ್ಕಾಗಿ ಮತ್ತು ಬ್ರಹ್ಮಪ್ರಾಪ್ತಿಯ ಸಾಧನೆಗಳನ್ನು ಮಾಡಲು ಬೇಕಾಗತಕ್ಕ ಎಲ್ಲಾ ಬಲವೂ ನನ್ನ ಮನ, ಇಂದ್ರಿಯಗಳಲ್ಲಿರಲಿ. ಎಲ್ಲಾ ಉಪನಿಷತ್ತುಗಳಲ್ಲಿಯೂ ಯಾವುದರ ಪ್ರತಿಪಾದನವು ಆಗಿರುವುದೋ ಆ ಬ್ರಹ್ಮವೇ ಇದೆಲ್ಲಾ ಎಂಬ ನಿಶ್ಚಯವು ನನಗಾಗಲಿ.

**ಸರ್ವಂ ಖಲಿದ್ವಂ ಬ್ರಹ್ಮ ॥** (ಛಾಂ. ೧೩–೧). ಶ್ರುತಿಯು ಈ ಎಲ್ಲವೂ ಬ್ರಹ್ಮವೆಂದು ಹೇಳಬೇಕಾದರೆ ನಾನೂ ಸಹ ಬ್ರಹ್ಮವೇ ಆಗುವೆನು. "ನಾನು ಬ್ರಹ ಹೇಗೆ ಎಂಬ ಸಂಶಯವನ್ನು ಉಳಿಸಿ ನಾನು ಎಂದೆಂದಿಗೂ ಬ್ರಹ್ಮಸ್ವರೂಪದ ನಿರಾಕರಣೆಯನ್ನು ಮಾಡಬಾರದು. ಬ್ರಹ್ಮಸಾಕ್ಷಾತ್ಕಾರವಾಗದಿರುವಾಗಲೇ ಸಂಶಯ ಬಾಧಿಸುವುದಾದ್ದರಿಂದ ಆ ಬ್ರಹ್ಮಸಾಕ್ಷಾತ್ಕಾರಕ್ಕೆ ನನ್ನನ್ನು ಯೋಗ್ಯನನ್ನಾಗಿ ಮಾಡದೆ ಆ ಬ್ರಹ್ಮವು ನನ್ನನ್ನು ನಿರಾಕರಿಸದಿರಲಿ. ಆ ಬ್ರಹ್ಮವು ನನ್ನನ್ನು ಬ್ರಹ್ಮಸಾಕ್ಷಾತ್ಕಾರಕ್ಕೆ ಅಯೋಗ್ಯನೆಂದು ಭಾವಿಸದಿರಲಿ. ಆ ಬ್ರಹ್ಮವು ತನ್ನ ಸಾಕ್ಷಾತ್ಕಾರದಿಂದ ಆದಷ್ಟು ಬೇಗ ನನ್ನನ್ನು ಪುನೀತನನ್ನಾಗಿ ಮಾಡಲಿ. ನನ್ನ ತ್ಯಾಗವಾಗದಿರಲಿ. ನನ್ನ ತ್ಯಾಗವಾಗದಿರಲಿ. ಉಪನಿಷತ್ ಪ್ರತಿಪಾದ್ಯವಾದ ಎಲ್ಲಾ ಆತ್ಮಲಕ್ಷಣಗಳೂ ನನ್ನಲ್ಲಿ ತೋರಿಕೊಳ್ಳಲಿ ಎಂಬುದಾಗಿ ಕೋರಿ ಅದಕ್ಕಾಗಿ ಅಖಂಡ ಸಾಧನದಲ್ಲಿ ತೊಡಗಿರುವ ನನ್ನಲ್ಲಿ ಆ ಉಪನಿಷದ್ಧರ್ಮಗಳು ಆ ಆತ್ಮಲಕ್ಷಣಗಳು ಉಂಟಾಗಲಿ. ನನ್ನಲ್ಲಿ ಆದಷ್ಟು ಬೇಗ ಉಂಟಾಗಲಿ.

**ಭದ್ರನ್ನೋ ಅಪಿವಾತಯ ಮನಃ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥** ನಮ್ಮ ಮನಸ್ಸನ್ನು ಆ ಸಚ್ಚಿದಾನಂದ ಸ್ವರೂಪದ ಬದಿಗೆ ಹರಿಸು.

ಈ ವೈದಿಕ ಪ್ರಾರ್ಥನೆಗಳಿಂದ ಆರ್ಯಸಂಸ್ಕೃತಿ ಏನೆಂಬುದು ಅದರಿಂದ ಪ್ರತಿಪಾದ್ಯವಾದದ್ದು ಯಾವುದೆಂಬುದು ಸ್ಪಷ್ಟವಾಗುವುದು. ಅಂತೆಯೇ ಆರ್ಯಸಂಸ್ಕೃತಿಯ ಮಹತ್ವವು ಮನಗೊಳ್ಳುವುದು. ವಿಶ್ವಾದರಣೀಯ ಮತ್ತು ವಿಶ್ವಾನುಕರಣೀಯವಾದ ಈ ಆರ್ಯಸಂಸ್ಕೃತಿಯ ಹಿರಿಮೆಯನ್ನು ಮನಗೊಂಡೇ ನಾವು ನಡೆಯತಕ್ಕದ್ದು. ನಮ್ಮ ಭಾರತ ವರ್ಷದಲ್ಲಿ ಇದು ಬೇರುಬಿಟ್ಟು ಬೆಂಬಲಕೊಟ್ಟು, ಪೂರ್ಣ ಕೊಬ್ಬಿ ಎಲ್ಲೆಡೆ

ಖುಲ್ಲಿಯೂ ಹುಬ್ಬುವಂತೆ ಮಾಡತಕ್ಕದ್ದು. ರಾಜ್ಯ ಸೂತ್ರಧಾರಕರು ಸ್ವಪರ
ಹಿತಕ್ಕಾಗಿ ಈ ಬದಿಗೆ ವಿಶೇಷವಾಗಿ ಗಮನಕೊಟ್ಟು ನಡೆಯತಕ್ಕದ್ದು.

## ಲೋಕನಾಯಕರ ಹೊಣೆಗಾರಿಕೆ

ಯದ್ಯದಾ ಚರತಿ ಶ್ರೇಷ್ಠಃ ತತ್ತ ದೇವೇತರೋ ಜನಃ ।
ಸ ಯತ್ ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ ೨೧ ॥
(ಗೀತಾ ಅ. ೩. ಶ್ಲೋ.)

ರಾಜಸೂತ್ರವನ್ನು ವಹಿಸಿಕೊಂಡು ಮುಂದಾಳಾಗಿರುವವರು ಎಲ್ಲಾ ವಿಧದಿಂದಲೂ ಸಮಾಜದ ಐಹಿಕ, ಪಾರಲೌಕಿಕ ಏಳಿಗೆಗೆ ಕಾರಣರಾಗಿರುವವರು ತನ್ನನ್ನು ಹಿಂಬಾಲಿಸುವ ಸಮಾಜವು ತನ್ನ ಜೊತೆಗೇ ಉನ್ನತ ಅಥವಾ ಅವನತವಾಗುವುದೆಂಬುದನ್ನು ಅವರು ಚೆನ್ನಾಗಿ ತಿಳಿದಿರಬೇಕು.

ರಾಜ್ಞಿಧರ್ಮಿಣಿ ಧರ್ಮಿಷ್ಠಾಃ ಪಾಪೇ ಪಾಪಾಃ ಸಮೇ ಸಮಾಃ ।
ರಾಜಾನಮನುವರ್ತಂತೇ ಯಥಾ ರಾಜಾ ತಥಾ ಪ್ರಜಾಃ ॥ (ಮಹಾಭಾರತ)

ರಾಜರು ಅಥವಾ ಮಂತ್ರಿಗಳು ಧಾರ್ಮಿಕರಾಗಿದ್ದರೆ ಪ್ರಜೆಯೂ ಧಾರ್ಮಿಕವಾಗಿರುತ್ತದೆ. ಪಾಪಿಗಳಾದರೆ ಪ್ರಜೆಯೂ ಪಾಪಾಚರಣೆಯುಳ್ಳದ್ದಾಗುತ್ತದೆ. ವರ್ಣಸಂಕರ ಮಾಡುವುದಾದರೆ ಪ್ರಜೆಯೂ ವರ್ಣಸಂಕರ ಮಾಡುತ್ತದೆ. ಪ್ರಜೆಯು ರಾಜರನ್ನು ಅಥವಾ ಮಂತ್ರಿಗಳನ್ನು ಅನುಕರಿಸುತ್ತದೆ. ರಾಜರು ಅಥವಾ ಮಂತ್ರಿಗಳು ಇದ್ದಂತೆ ಪ್ರಜೆಯೂ ಆಗುತ್ತದೆ. ತಮ್ಮ ಆಚರಣವೇ ಸಮಾಜಕ್ಕೆ ಅನುಕರಣೀಯವಾಗಿ ತಮ್ಮ ವಿಚಾರಗಳೇ ಪ್ರಮಾಣವಾಗುವುವು ಎಂಬುದನ್ನು ಮರೆಯದೆ, ಯಾವ ವಿಧದಿಂದಲೂ ತನ್ನ ನಡೆನುಡಿಗಳಿಂದ ಸಮಾಜಕ್ಕೆ ಆದರ ಇಹಪರದ ಉನ್ನತಿಯಲ್ಲಿ ಯಾವ ಹಾನಿಯೂ ಆಗದಂತೆ ಆಳವಾದ ವಿಚಾರ ಮಾಡಿ, ದೀರ್ಘದೃಷ್ಟಿಯಿಂದ ವೇದಶಾಸ್ತ್ರಗಳ ಪರ್ಯಾಲೋಚನೆಮಾಡಿ ರಾಜರು ಅಥವಾ ಮಂತ್ರಿಗಳು ಶಾಸನಪದ್ಧತಿಯನ್ನು ಕೈಗೊಳ್ಳತಕ್ಕದ್ದು. ಶಾಸನನಿಯಮಗಳನ್ನು ಮಾಡತಕ್ಕದ್ದು.

ಆಧಿವ್ಯಾಧಿಪರೀತಾಯ ಅದ್ಯಶ್ವೋ ವಾ ವಿನಾಶಿನೇ ।
ಕೋಹಿ ರಾಜಾ ಶರೀರಾಯ ಧರ್ಮಾಪೇತಂ ಸಮಾಚರೇತ್ ॥
(ಅಗ್ನಿಪುರಾಣ ೨೪-೧೨)

ಆಧಿವ್ಯಾಧಿಗಳಿಂದ ಗ್ರಸ್ತ ಮತ್ತು ತ್ರಸ್ತವಾಗಿರುವ, ಇವತ್ತೋ ನಾಳೆಯೋ ನಷ್ಟವಾಗುವ ಈ ಶರೀರಕ್ಕಾಗಿ ಯಾವ ರಾಜನು, ಯಾವ ಮಂತ್ರಿಯು, ಯಾವ ಪ್ರಜೆಯು ಏತಕ್ಕಾಗಿ ಧರ್ಮವಿರುದ್ಧ ಆಚರಣ ಮಾಡುವುದು ?

ಆಯುಷ್ಮಾಮಿಾಯುಚಕ್ಷಸಾ ಮಿತ್ರವಯಂ ಚ ಸೂರಯುಃ ।
ವ್ಯಚಿಷ್ಠೇ ಬಹುಪಾಯ್ಯೇ ಯತೇ ಮಹಿ ಸ್ವರಾಜ್ಯೇ ॥

(ಋಗ್ವೇದ ೫-೬೬-೬)

ಹೇ ವ್ಯಾಪಕದೃಷ್ಟಿಯುಳ್ಳವರಿರಾ! ಹೇ ಪರಸ್ಪರರಲ್ಲಿ ಮಿತ್ರಭಾವನೆಯನ್ನಿಟ್ಟು ವರ್ತಿಸುವ ಜನಗಳಿರಾ! ನಿಮ್ಮೆಲ್ಲರ ಜೊತೆಗೆ ನಾವೆಲ್ಲ ವಿದ್ವಾಂಸರೂ ಸೇರಿ ಸ್ವರಾಜ್ಯದ ಎಲ್ಲಾ ಪ್ರಜೆಗಳ ಅಭ್ಯುದಯ ನಿಶ್ರೇಯಸ್ಸಗಳಿಗಾಗಿ ಪ್ರಯತ್ನಿಸುತ್ತೇವೆ ಎಂದು ಈ ಮಂತ್ರದ ಅರ್ಥ. ವಿಶಾಲವಾದ ಅನೇಕ ಜನರಿಂದ ಬಹು ಉಪಾಯಗಳಿಂದ ರಕ್ಷಿಸಲ್ಪಡುವ ವಿಸ್ತೃತವಾದ ಸ್ವರಾಜ್ಯ ಶಾಸನದಲ್ಲಿ ನಾವು ನಿಯುಕ್ತರಾದವರು. ಜನತೆಯ ಐಹಿಕ, ಪಾರಲೌಕಿಕ ಸುಖಕ್ಕಾಗಿ ಸಾಧ್ಯವಾದ ಪರಾಕಾಷ್ಠೆ ಪ್ರಯತ್ನವನ್ನು ಮಾಡುತ್ತಿರುತ್ತೇವೆ ಎಂಬುದಾಗಿ ವೇದದಲ್ಲಿಯೂ ಹೇಳಿದೆ. ಇದೇ ಸಂಸ್ಕೃತಿಗೆ ಎಲ್ಲಾ ಲೋಕನಾಯಕರ, ಸಮಾಜದ, ಮುಂದಾಳುಗಳ ಮತ್ತು ಮಂತ್ರಿಗಳ ಧ್ಯೇಯವಿರಬೇಕು.

ಅಖಿಲ ಮಾನವ ಜಾತಿಯ ಐಹಿಕ ಮತ್ತು ಪಾರಲೌಕಿಕ ಉನ್ನತಿಗಳಿಗಾಗಿ, ಅಭ್ಯುದಯ ನಿಶ್ರೇಯಸ್ಸಗಳಿಗಾಗಿ ಅನುಕೂಲವಾದ ಆಚಾರ ವಿಚಾರಗಳಿಂದ ವೈದಿಕ ಆರ್ಯಸಂಸ್ಕೃತಿಯು ವಿಶ್ವಮಾನ್ಯವಾಗಿರುವುದು. ಆಯಾ ಸಂಸ್ಕೃತಿಗೆ ಆಯಾ ಧರ್ಮಗ್ರಂಥಗಳೇ ಕಾರಣವಾಗಿರುವುವು. ಆಯಾ ಧರ್ಮಗ್ರಂಥಗಳ ವಿಚಾರವನ್ನು ಕೈಕೊಂಡು ಆಯಾ ಸಂಸ್ಕೃತಿಯ ದೃಢತೆಗಾಗಿ ಪ್ರಯತ್ನಪಡತಕ್ಕದ್ದು. ವಿಶ್ವಾನುಕರಣೀಯವಾದ ಈ ಆರ್ಯಸಂಸ್ಕೃತಿಗೆ ವಿಶ್ವವಂದ್ಯ ವೇದಶಾಸ್ತ್ರಗಳೇ ಪ್ರಮಾಣಗ್ರಂಥಗಳಾಗಿರುವುವು.

ಶ್ರುತಿಸ್ಮೃತ್ಯುದಿತಂ ಸಮ್ಯಗ್ ನಿಬದ್ಧಂ ಸ್ವೇಷುಕರ್ಮಸು ।
ಧರ್ಮಮೂಲಂ ನಿಷೇವೇತ ಸದಾಚಾರ ಮತನ್ದ್ರಿತಃ ॥

(ಮನು. ೪-೧೫೫)

ಶ್ರುತಿಸ್ಮೃತಿಗಳಿಂದ ಸಾರಲ್ಪಟ್ಟ ತಮ್ಮ ತಮ್ಮ ಕುಲಜಾತಿಗಳಲ್ಲಿದ್ದ ಎಲ್ಲಾ ಧರ್ಮಕ್ಕೂ ಮೂಲವಾದ ಸದಾಚಾರವನ್ನು ನಿರಲಸವಾಗಿ ಅನುಷ್ಠಿಸಬೇಕೆಂದು ಮನುವಿನ ಹೇಳಿಕೆ. ಈ ಕಡೆಗೆ ಗಮನ ಕೊಡಬೇಕು.

## ಶ್ರುತಿಯ ಉಪದೇಶದ ತಾತ್ಪರ್ಯ

"ಯಸ್ಮಿನ್‌ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ಮನಃ ಸಹ ಪ್ರಾಣೈಶ್ಚ ಸರ್ವೈಃ । ತಮೇವೈಕಂ ಜಾನಥ ಆತ್ಮಾನಂ ಅನ್ಯಾ ವಾಚೋ ವಿಮುಂಚಥಾಮೃತಸ್ಯೈಷ ಸೇತುಃ ॥" (ಮುಂ. ೨-೨-೫). ಯಾವುದರಲ್ಲಿ ಎಲ್ಲಾ ಚರಾಚರ ಬ್ರಹ್ಮಾಂಡವು ಮನಃಪ್ರಾಣಾದಿಗಳಿಂದ ಎಲ್ಲದರ ಸಮೇತ ಎಲ್ಲವೂ ಒಳಪಟ್ಟಿರುವುದೋ ಆ ನಿಮ್ಮ ಅದ್ವಿತೀಯ ಆತ್ಮಸ್ವರೂಪವನ್ನು ತಿಳಿಯಿರಿ. ಬಾಕಿ ಎಲ್ಲಾ ಮಾತುಗಳನ್ನು ಬಿಟ್ಟುಬಿಡಿ. ಇದೇ ಸಂಸಾರ ಸಮುದ್ರವನ್ನು ದಾಟಹೋಗಲು ಒಂದು ಸೇತುವೆ. ಏಕಾತ್ಮವಿಜ್ಞಾನವೇ ಶ್ರುತಿಯ ಉಪದೇಶದ ತಾತ್ಪರ್ಯ.

"ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತೀತಿ ॥" (ಮುಂ. ೩-೧-೩). ಯಾವ ಒಂದನ್ನು ತಿಳಿದ ಮಾತ್ರಕ್ಕೆ ಎಲ್ಲವೂ ಒಮ್ಮೆಲೇ ತಿಳಿಯಲ್ಪಡುವುದೋ ಆ ವಸ್ತು ಯಾವುದು? ಎಂಬುದನ್ನು ತಿಳಿಸಿ ಹೇಳುವುದೇ ಶ್ರುತಿಯ ಉಪದೇಶದ ತಾತ್ಪರ್ಯವಾಗಿರುವುದು.

"ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯೋ ಮೈತ್ರೇಯ್ಯಾತ್ಮನೋ ವಾ ಅರೇ ದರ್ಶನೇನ ಶ್ರವಣೇನ ಮತ್ಯಾ ವಿಜ್ಞಾನೇನೇದಂ ಸರ್ವಂ ವಿದಿತಮ್ ॥" (ಬೃ. ೨-೪-೫). ಆತ್ಮಸ್ವರೂಪವನ್ನೇ ಎಲ್ಲೆಡೆಯಲ್ಲಿ ಕಾಣಬೇಕು. ಅದು ಗೊತ್ತಾಗದಿದ್ದರೆ ಗುರುಮುಖದಿಂದ ತಿಳಿದುಕೊಳ್ಳಬೇಕು. ಅದರ ನಿಶ್ಚಯವಾಗದಿದ್ದರೆ ಯುಕ್ತಿಪ್ರಯುಕ್ತಿಗಳಿಂದಲೂ, ಶ್ರುತಿವಾಕ್ಯಗಳಿಂದಲೂ ಮನನ ಮಾಡಬೇಕು. ಅದರ ಸಾಕ್ಷಾತ್ಕಾರವಾಗದಿದ್ದರೆ ಅದರ ಅಖಂಡ ಅನುಸಂಧಾನ ಇಟ್ಟುಕೊಳ್ಳಬೇಕು. ಅದರ ನಿಧಿಧ್ಯಾಸ ಮಾಡಬೇಕು. ಏಕಾತ್ಮದರ್ಶನದಿಂದಲೂ, ಶ್ರವಣದಿಂದಲೂ, ಮನನದಿಂದಲೂ, ನಿಧಿ-

ಭ್ಯಾಸದ ಮೂಲಕವಾಗಿ ಆಗುವ ನಿಶ್ಚಯದಿಂದಲೂ ಆತ್ಮಸಾಕ್ಷಾತ್ಕಾರವಾಗುವುದು. ಆತ್ಮ ವಿಜ್ಞಾನವೆಂದರೆ ತನಗೆ ತನ್ನ ಅರಿವೇ ನಿಶ್ಚಯವಾಗಿ ಆಗುವುದು. ತನ್ನನ್ನೇ ನಿಶ್ಚಯವಾಗಿ ತಿಳಿದುಕೊಳ್ಳುವುದು. ಆತ್ಮಜ್ಞಾನವಾದಮೇಲೆ ತನ್ನ ಸ್ವರೂಪವೊಂದೇ ನಿಲ್ಲುವುದು. ಪ್ರತಿಯೊಬ್ಬರಲ್ಲಿ ನಾನೆಂಬ ನಿಜದ ಅರಿವು ಇದ್ದೇ ಇರುವುದು. ಈ ಅರಿವನ್ನು ಬಿಟ್ಟಿರಲು ಯಾರಿಗೆ ತಾನೆ ಸಾಧ್ಯ? ನಾನೆಂಬ ಅರಿವಿನಲ್ಲಿಯೇ ಈ ಜಗದ್ಭಾನವಾಗುತ್ತಿರುವುದು. ಆದುದರಿಂದ ಈ ಎಲ್ಲಾ ಚರಾಚರ ವಿಶ್ವವು ಒಂದು ನಾನೆಂಬ ಅರಿವಿನಲ್ಲೇ ಪ್ರತಿಬಿಂಬಿಸಿರುವುದು. ನಾನೆಂಬ ಅರಿವು ಎಲ್ಲಾ ದೃಶ್ಯದ ಒಳಗೆ ವ್ಯಾಪಿಸಿಕೊಂಡಿರುವುದು. ನಾನೆಂಬ ಅರಿವಿನಲ್ಲಿ ಕಂಡಿದ್ದೆಲ್ಲವೂ ನಾನೆಂಬ ಅರಿವೇ ಆಗಿರುವುದು. ಏಕಾತ್ಮ ವಿಜ್ಞಾನದಿಂದ ಈ ಎಲ್ಲದರ ಪರಿಜ್ಞಾನವಾಗುವುದು ಎಂಬುದರ ಅರ್ಥವಿಷ್ಟೆ. ಕನ್ನಡಿಯಲ್ಲಿ ಪ್ರತಿಬಿಂಬಿಸಿದ ಪದಾರ್ಥಗಳನ್ನು ಕನ್ನಡಿಯ ಮುಂದಿನಿಂದ ತೆಗೆದುಹಾಕುವಲ್ಲಿ ಒಂದೇ ಒಂದು ಕನ್ನಡಿಯು ಹೇಗೆ ಉಳಿಯುವುದೋ ಅಂತೆಯೇ ಸಂಕಲ್ಪದಿಂದ ಬಹುವಾಗಿ ತೋರಿಬರುವ ಈ ಎಲ್ಲಾ ವಿಶ್ವವೂ ಸಂಕಲ್ಪ ಸಹಿತವಾಗಿ ತೆಗೆದುಹಾಕುವಲ್ಲಿ ನಾನೆಂಬ ಅರಿವು ಒಂದೇ ಉಳಿಯುವುದು. ಅನೇಕ ಕೊಡಗಳನ್ನು ಬರುಮಾಡುವಲ್ಲಿ ಅವುಗಳಲ್ಲಿದ್ದ ನೀರೆಲ್ಲಾ ಒಂದೇ ಆಗುವಂತೆ ಎಲ್ಲಾ ದೇಹದಲ್ಲಿ ಇರುವ ನಾನೆಂಬ ಅರಿವು ಒಟ್ಟು ಸೇರಿಸುವಲ್ಲಿ ಅದು ತಾನೇ ಒಂದು ಉಳಿಯುವುದು. ಶ್ರುತಿಯು ಈ ಏಕಾತ್ಮ ವಿಜ್ಞಾನದ ಬಗ್ಗೆ ಎಲ್ಲಾ ಉಪದೇಶವಿದೆ. ಒಂದೇ ಎಲ್ಲದೂ ಆದುದರಿಂದಲೂ, ಎಲ್ಲದರಲ್ಲಿ ಈ ಒಂದೇ ಒಂದು ಸ್ವರೂಪವು ಇರುವುದರಿಂದಲೂ (ನಿಜವಾದ), ಈ ಅದ್ವಿತೀಯಭಾವನೆಯ ಜೊತೆಗೆ ಭಿನ್ನ ಭಿನ್ನರೂಪವಾಗಿ ಅನೇಕ ವಿಧ ಕಂಡುಬರುವ ಕಾರ್ಯದ ನಿರ್ವಾಹವು ಆಗಬೇಕಾಗಿರುವುದರಿಂದಲೂ "ಏಕೋऽಹಂ ಬಹುಸ್ಯಾಮ್" ಎಂಬ ಸಂಕಲ್ಪದಿಂದ ಪರಮಾತ್ಮನು ತನ್ನಲ್ಲಿ ಸ್ಫುರಿಸಿದ ನಾನೆಂಬ ಈ ಅರಿವಿನ ಮೂಲಕ ಬಹುನಾಗಬೇಕೆಂಬ ಸಂಕಲ್ಪಮಾಡಿ ಈ ಬಹುತ್ವವನ್ನು ತಾಳಿರುವನು. ಈಶ ಸಂಕಲ್ಪದ ಈ ಸೃಷ್ಟಿಯನ್ನು ಅಳಿಸಲು ಜೀವಿಯಿಂದ ಸಾಧ್ಯವಾಗದೆ ಮೋಕ್ಷಕ್ಕಾಗಿ ಇದರಲ್ಲಿ ಇರುವಂಥ ಏಕತ್ವವನ್ನು ಅಳವಡಿಸಿಕೊಂಡು

ಭಿನ್ನ-ಭಿನ್ನವಾದ ದೇಹೇಂದ್ರಿಯ ಕಾರ್ಯಗಳನ್ನು ಅವರವರ ಮತ ಪ್ರಕಾರ ಸಾಗಿಸುತ್ತಾ ಇರಬೇಕಾಗಿ ಬರುವುದು.

## ಜ್ಞಾನಿಗಳ ವ್ಯವಹಾರ

ಅಬಾಧಕಂ ಸಾಧಕಂ ಚ ದ್ವೈತಮೀಶ್ವರ ನಿರ್ಮಿತಮ್ ।
ಅಪನೇತುಮಶಕ್ಯಂ ಚೇದಾಸ್ತಾಂ ತದ್ದ್ವಿಷ್ಯತೇ ಕುತಃ ॥
(ಪಂಚದಶಿ ದ್ವೈತವಿವೇಕ ४३)

ಈಶ್ವರ ನಿರ್ಮಿತವಾದ ದ್ವೈತವೂ ಮತ್ತು ಬಹುತ್ವವೂ ಅಬಾಧಕವಿದೆ. ಆತ್ಮತತ್ವವನ್ನು ತಿಳಿಯಲು ಕೆಲಸಬಟ್ಟಗೆ ಇದು ಸಾಧಕವಾಗುವುದು. ಮತ್ತು ಇದನ್ನು ನಿವಾರಿಸಲು ಅಸಾಧ್ಯವೆಂದಾದಲ್ಲಿ ಅದರ ದ್ವೇಷಮಾಡುವುದೇಕೆ? ಅದನ್ನು ವ್ಯತ್ಯಸ್ತಮಾಡಲು ಹವಣಿಸುವುದೇಕೆ? ಪಂಚಭೂತಗಳ ಭೇದವನ್ನು ಅಳಿಸಲು ಸಾಧ್ಯವಿಲ್ಲ. ಇಂದ್ರಿಯಗಳ ಭೇದವನ್ನು ಅಳಿಸಲು ಸಾಧ್ಯವಿಲ್ಲ. ಸ್ತ್ರೀ-ಪುರುಷ ಭೇದವನ್ನೂ ಶರೀರ ದೃಷ್ಟಿಯಿಂದ ಅಳಿಸಲು ಸಾಧ್ಯವಿಲ್ಲ. ಅನೇಕ ಗಿಡ–ಮರ–ಬಳ್ಳಿಗಳ ಭೇದವನ್ನಳಿಸಲು ಸಾಧ್ಯವಾಗದಂತೆ ಮಾನವ ಸಮಾಜದ ಭೇದವನ್ನೂ ಅಳಿಸಲು ಸಾಧ್ಯವಿಲ್ಲವೆಂದು ವ್ಯಾವಹಾರಿಕ ದೃಷ್ಟಿಯಿಂದ ಸ್ವಾಭಾವಿಕವಾಗಿ ಪ್ರಾಪ್ತವಾಗುವುದಿಲ್ಲವೆ? ಈ ದ್ವೈತ ಮತ್ತು ಬಹುತ್ವವೂ ಕೂಡ ಏಕತ್ವದಲ್ಲಿಯೇ ಕರಗಿಸಿಬಿಟ್ಟು ಈಶಸೃಷ್ಟಿಯ ವ್ಯವಹಾರ ನಿರ್ದುಷ್ಟವಾಗಿ ಸಾಗಬೇಕೆಂದು ನಿರ್ಮೋಹವಾಗಿ ವ್ಯವಹಾರದ ನಿರ್ವಹಣೆಗಾಗಿಯೇ ಭಿನ್ನತ್ವ ಮತ್ತು ವಿವಿಧತ್ವವನ್ನು ಅಂಗೀಕರಿಸಿ ಜ್ಞಾನಿಗಳು ಅಖಂಡ ಸಮಾಧಾನದಿಂದಲೂ, ನಿರ್ವಿಕಾರತೆಯಿಂದಲೂ ವರ್ತಿಸುವರು. "ನಿಯತಿನ್ನ ನಿಮುಂಚಂತಿ ಮಹಾಂತೋ ಭಾಸ್ಕರಾ ಇವ" ಮಹನೀಯರು ಸೂರ್ಯನಂತೆ ಈ ನಿಯತಿಯನ್ನು ಬಿಡುವುದಿಲ್ಲ. ಅವರಿಗೆ ಇದು ಬಾಧಿಸುವುದೂ ಇಲ್ಲ. ಅವರಲ್ಲಿ ಒಟ್ಟು ಒಂದು ಆತ್ಮೀಯ ಅನುಸಂಧಾನವೇ ಇರುವುದು. ಈವರೆಗಿನ ಜ್ಞಾನಿಗಳೆಲ್ಲಾ ಈ ದೃಷ್ಟಿಯಿಂದಲೇ ತಮ್ಮ ತಮ್ಮ ವರ್ಣಾಶ್ರಮೋಕ್ತ ಕರ್ಮಗಳನ್ನು ನೀಚೋಚ್ಚ ಭಾವನೆ ಇರದೆ ಸುಖ ಶಾಂತಿಯಿಂದ ಸಾಗಿಸುತ್ತಾ ತಮ್ಮ ಜೀವನವನ್ನು ದಿವ್ಯ ಜೀವನವನ್ನಾಗಿ

ಮಾಡಿಕೊಂಡಿದ್ದರು. ವಾಲ್ಮೀಕಿ ರಾಮಾಯಣದಲ್ಲಿದ್ದ ರಾಮರಾಜ್ಯದ ವರ್ಣನೆಯನ್ನು ನೋಡಿ!

ಕ್ಷತ್ರಂ ಬ್ರಹ್ಮಮುಖಂ ಚಾಸೀತ್ ವೈಶ್ಯಾಃ ಕ್ಷತ್ರಮನುವ್ರತಾಃ ।
ಶೂದ್ರಾಃ ಸ್ವಕರ್ಮನಿರತಾಃ ತ್ರೀನ್ ವರ್ಣಾನುಪಚಾರಿಣಃ ॥

ನಾಲ್ಕೂ ವರ್ಣಗಳೂ ಏಕತ್ವದಿಂದ ತಮ್ಮತಮ್ಮ ಆಚಾರ, ಧರ್ಮ ಮತ್ತು ಅಧಿಕಾರಗಳನ್ನು ಪರಿಪಾಲಿಸುತ್ತ ಸುಖ ಶಾಂತಿಗಳಿಂದಿದ್ದರೆಂದು ಈ ಶ್ಲೋಕದಿಂದ ಸ್ಪಷ್ಟವಾಗುವುದಿಲ್ಲವೇ? ಇದು ಆರ್ಯಸಂಸ್ಕೃತಿ. ಈಗಿನ ವರ್ಣವಿದ್ವೇಷ, ಜಾತಿಮತ್ಸರ, ಉಚ್ಚನೀಚ ಭಾವನೆ, ವರ್ಣ ಸಂಕರ ಇದು ಆರ್ಯಸಂಸ್ಕೃತಿಯಲ್ಲ, ವೇದ ಮತವಲ್ಲ ಮತ್ತು ಸ್ವಪರ ಉದ್ಧಾರದ ಸಾಧನವೂ ಇದಲ್ಲ.

ಅಂತಃ ಸಂತ್ಯಕ್ತಸರ್ವಾಶೋ ವೀತರಾಗೋ ವಿವಾಸನಃ ।
ಬಹಿಃ ಸರ್ವಸಮಾಚಾರೋ ಲೋಕೇ ವಿಹರ ರಾಘವ ॥
(ಯೋ. ವಾ. ೫–೧೮–೧೮)

ಅಂತರಂಗದಲ್ಲಿ ಸರ್ವಾಶಾಶೂನ್ಯನಾಗಿಯೂ, ವಿರಕ್ತನಾಗಿಯೂ, ವಾಸನಾರಹಿತನಾಗಿಯೂ ಇರು. ಈಶಸೃಷ್ಟಿಯ ಭೇದವನ್ನು ವಿವಿಧತ್ವ ವನ್ನು ಹೋಗಲಾಡಿಸಲು ಸಾಧ್ಯವಾಗದಾದುದರಿಂದ ಅಂತರಂಗದ ಏಕಾತ್ಮ ನಿಶ್ಚಯವನ್ನು ಬಿಡದೆ ಹೊರಗೆ ಮಾತ್ರ ಯಥೋಕ್ತವಾಗಿ ನಡೆದುಕೋ. ಶ್ರುತಿಶಾಸ್ತ್ರಗಳ ಆಜ್ಞೆಗಳನ್ನು ಪರಿಪಾಲಿಸು. ಇದು ಆರ್ಯರ ಜೀವನ ರಹಸ್ಯ; ಇದು ಆರ್ಯಸಂಸ್ಕೃತಿ; ಇದು ವೈದಿಕ ಆಚಾರ. ಇದರಿಂದ ವ್ಯವಹಾರದ ನಿರ್ವಾಹವೂ ಆಗಿ ಅಂತರಂಗದ ಐಕ್ಯಸ್ಥಿತಿಯೂ ಬೆಳೆಯು ವುದು.

ಆಮ್ಹಿ ವೈಕುಂಠವಾಸೀ ಆಲೋಂಯಾಚಿ ಕಾರಣಾಸಿ ।
ಸಾಂಗಿತಲೇಜೇ ಋಷಿ ಸಾ ಚ ಭಾವೇ ವರ್ತಾಯಾ ॥

ತುಕಾರಾಮರ ವಾಕ್ಯವಿದು. ಜಾತಿಯಿಂದ ಇವರು ಶೂದ್ರರು. "ನಾವು ವೈಕುಂಠವಾಸಿಗಳು" ಋಷಿ-ಮುನಿಗಳು ಯಾವುದನ್ನು ಹೇಳಿ ರುವರೋ ಅದನ್ನು ಅನುಸರಿಸುವುದಕ್ಕಾಗಿಯೇ ನಾವು ಬಂದಿದ್ದೇವೆ, ಎಂದು ತುಕಾರಾಮರ ಹೇಳಿಕೆಯ ಅರ್ಥ. ಶಾಸ್ತ್ರ ಮರ್ಯಾದೆಯನ್ನು

ಉಲ್ಲಂಘಿಸಿ ಅವರು ಇರಲಿಲ್ಲ. ಎಲ್ಲಾ ಜಾತಿಗಳಲ್ಲಿಯೂ ಜ್ಞಾನಿಗಳು ಇರುವರು. ಅವರು ಅಂತರಂಗದಲ್ಲಿ ಏಕಾತ್ಮತತ್ವದ ಸುಖವನ್ನು ಅನು ಭವಿಸುತ್ತಾ ಬಾಹ್ಯದಲ್ಲಿ ವರ್ಣಾಶ್ರಮೋಕ್ತ ಕರ್ಮಗಳನ್ನೂ, ಜಾಗೃತಿಕ ವ್ಯವಹಾರವನ್ನೂ ರಾಗದ್ವೇಷವಿಲ್ಲದೆ ಯಥೋಕ್ತವಾಗಿ ಸಾಗಿಸುತ್ತಿದ್ದರು.

## ದ್ವೈತಾದ್ವೈತ ವಿವೇಕ

ವ್ಯವಹಾರವೆಷ್ಟೂ ಭೇದದಿಂದ ಕೂಡಿಕೊಂಡಿರುವುದು. ಸಮತೆ ಗಾಗಿ ಸೇರಿಸಿರುವ ಸಭೆಯಲ್ಲಿಯೂ ಸಹ ಅಧ್ಯಕ್ಷ, ಉಪಾಧ್ಯಕ್ಷ, ಕಾರ್ಯ ದರ್ಶಿ, ಸದಸ್ಯರು ಎಂಬ ತಾರತಮ್ಯದ ವ್ಯವಹಾರವು ಅಪರಿಹಾರ್ಯವಾಗಿ ಇದ್ದೇ ಇರುವುದು ಎಂಬುದನ್ನು ಗಮನಿಸಬೇಕು. "ನ ಹಿ ಕಶ್ಚಿತ್ ಕ್ಷಣಮಪಿ ಜಾತುತಿಷ್ಠತ್ಯ ಕರ್ಮಕೃತ್" (ಗೀತಾ ೩–೫). ಈ ಭೇದ ವ್ಯವಹಾರವನ್ನು ಬಿಟ್ಟು ಒಂದು ಕ್ಷಣವೂ ಕೂಡ ಇರಲು ದೇಹವಿರುವ ವರೆಗೆ ವ್ಯವಹಾರ ದೃಷ್ಟಿಯಿಂದ ಸಾಧ್ಯವಾಗದು. ಆಯಾ ಪ್ರಸಂಗದಲ್ಲಿ ಅವರದರ ಪ್ರಕಾರ ನಡೆದುಕೊಳ್ಳಲೇಬೇಕಾಗುತ್ತದೆ. ಆದುದರಿಂದಲೇ "ಭಾವಾದ್ವೈತಂ ಸದಾ ಕುರ್ಯಾತ್ ಕ್ರಿಯಾದ್ವೈತಂ ನ ಕುತ್ರಚಿತ್" ಅದ್ವೈತವು ಧಾರಣೆಯಲ್ಲಿ ಇಟ್ಟುಕೊಳ್ಳಬೇಕು. ಕ್ರಿಯೆಯಲ್ಲಿ ಇಟ್ಟುಕೊಳ್ಳ ಬಾರದೆಂದು ಶ್ರೀ ಶಂಕರಾಚಾರ್ಯರ ಉಪದೇಶ. ದ್ವೈತದ ಆರಂಭ ಅಂತರಂಗದ ವೃತ್ತಿಯಲ್ಲಿಯೇ ಆಗುವುದು. ಅದು ಇಂದ್ರಿಯಗಳಲ್ಲಿ ಇರುವುದು. ಅದು ಮನಸ್ಸಿನ ವ್ಯಾಪಾರದಲ್ಲಿ ತೋರಿಕೊಳ್ಳುವುದು. ಜಗತ್ತಿ ನಲ್ಲೆಲ್ಲಾ ಹರಡಿಕೊಂಡಿರುವುದು. ಇವುಗಳನ್ನು ಬಿಟ್ಟು ಒಂದು ಸಮಾಧಿ ಯಲ್ಲಿ ಮಾತ್ರ, ಏಕತ್ವದ ಅನುಭವ ಆಗುವುದು. ಇವುಗಳಿಂದ ಆಗತಕ್ಕ ವ್ಯವಹಾರದಲ್ಲಿ ಸರ್ವಥಾ ಭೇದವನ್ನಳಿಸಲು ಎಂದಿಗೂ ಸಾಧ್ಯವಿಲ್ಲ. ಭೇದ ಮತ್ತು ವಿವಿಧತ್ವದ ಸಂಕಲ್ಪದಿಂದ ಆಗಿರತಕ್ಕ ಜಗತ್ತು ಭೇದಭಾವನೆ ಮೊದಲೇ ತೋರಿಕೊಂಡು ತನ್ನ ನಿರ್ವಾಹಕವಾದ ಭೇದ ಮತ್ತು ವಿವಿಧತ್ವದ ವ್ಯವಹಾರವನ್ನು ನಡೆಸುವುದು. ಇದನ್ನು ಪ್ರಕಾಶಿಸುವ, ಭಾವಿಸುವ ಈ ರೂಪದಿಂದ ಆಗಿರುವ ಆತ್ಮಸ್ವರೂಪ ಮಾತ್ರ ಪಿಂಡ ಬ್ರಹ್ಮಾಂಡದಲ್ಲಿಯೂ ಅದ್ವಿತೀಯವಾಗಿದೆ. ವಿವೇಕ ವಿಚಾರವುಳ್ಳ

ತಾಯಿಯು ಮಕ್ಕಳ ಶಿಕ್ಷಣೆಗಾಗಿ, ಸಂಗೋಪನಕ್ಕಾಗಿ ತನ್ನಿಂದಲೇ ಉಂಟಾದ ಮಕ್ಕಳಲ್ಲಿ ಭೇದವ್ಯವಹಾರ ಇಟ್ಟುಕೊಂಡು ನಡೆದುಕೊಳ್ಳುವಳಲ್ಲವೇ? ಅಂತರಂಗದಲ್ಲಿ ಮಾತ್ರ ಪುತ್ರವಾತ್ಸಲ್ಯ ಒಂದೇ ವಿಧವಾಗಿರುವುದಲ್ಲವೆ? ಅಂತೆಯೇ ಬ್ರಹ್ಮಾಂಡದಲ್ಲಿರುವಂತಹ ಪರಮಾತ್ಮ ಸ್ವರೂಪವೂ ಕೂಡ ತನ್ನಿಂದ ಉಂಟಾಗಿರತಕ್ಕ ಈ ಜಗತ್ತಿನಲ್ಲಿ ಇದರ ಶಿಕ್ಷಣಕ್ಕಾಗಿ ಮತ್ತು ಸಂಗೋಪನಕ್ಕಾಗಿ ಭೇದವ್ಯವಹಾರವನ್ನು ಇಟ್ಟುಕೊಳ್ಳುವುದು. ಅಂತರಂಗದಲ್ಲಿ ನಿತ್ಯದಲ್ಲಿಯೂ ಅವಿಚ್ಛಿನ್ನವಾದ ಏಕತ್ವವು ಸ್ವಭಾವವಾಗಿಯೇ ನೆಲೆಗೊಂಡಿರುವುದು.

ಒಂದು ದೇಹದಲ್ಲಿ ಅವಯವಗಳ ಭೇದವು ಅನಿವಾರ್ಯವಿದೆ. ಶಿರಸ್ಸು ಉತ್ತಮಾಂಗವೆಂದು ಹೇಳಿಸಿಕೊಳ್ಳುವುದು. ಅದು ಎಲ್ಲದರ ಮೇಲಿರುವುದು. ಕಾಲು ಎಲ್ಲದರ ಕೆಳಗಿರುವುದು. ತೊಡೆ ಮತ್ತು ಬಾಹುಗಳು ಅವವುಗಳ ಅಧೋರ್ಧ್ವಭಾಗಗಳಲ್ಲಿ ಇರುವುವು. ಆದರೆ ದೇಹವೆಲ್ಲವೂ ಒಂದೇ. ಅಂತೆಯೇ ಈ ಜಾತಿಗಳಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಈ ಭೇದಗಳು. ಉಚ್ಚ ನೀಚ ಭಾವಗಳಿಂದ ಕೂಡಿಕೊಂಡಿದ್ದರೂ ಪರಮಾತ್ಮನ ವಿರಾಟ್ ದೇಹವಿದು ಒಂದೇ ಸರಿ ಎಂಬುದಾಗಿ ಶ್ರುತಿಯು ತಿಳಿಸುತ್ತಿದೆ. ಒಳಗಿನ ಆತ್ಮಸ್ವರೂಪವು ಅದ್ವಿತೀಯವಾದುದೆಂದು ಉದ್ಘೋಷಿಸುತ್ತಿದೆ. ಅವಯವಗಳ ಉಪಮೆಯನ್ನು ಕೊಟ್ಟು, ಶ್ರುತಿಯು ದೇಹದ ಅವಯವಗಳನ್ನು ಹೇಗೆ ಬೇರ್ಪಡಿಸಲಿಕ್ಕೂ, ಅವುಗಳನ್ನು ಭಿನ್ನ ಸ್ಥಾನದಲ್ಲಿ ಇಡಲಿಕ್ಕೂ, ಸ್ಥಳಾಂತರಮಾಡಲಿಕ್ಕೂ ಹೇಗೆ ಸಾಧ್ಯವಿಲ್ಲವೋ ಅಂತೆಯೇ ಈ ಜಾತಿಯನ್ನು ಬೇರ್ಪಡಿಸಲಿಕ್ಕೂ, ಅವುಗಳನ್ನು ಭಿನ್ನ ಸ್ಥಾನದಲ್ಲಿ ಇಡಲಿಕ್ಕೂ, ಸ್ಥಳಾಂತರಮಾಡಲಿಕ್ಕೂ ಎಂದರೆ ಬ್ರಾಹ್ಮಣನನ್ನು ಶೂದ್ರನನ್ನಾಗಿ ಮಾಡಲಿಕ್ಕೂ ಅಥವಾ ಶೂದ್ರನನ್ನು ಬ್ರಾಹ್ಮಣನನ್ನಾಗಿ ಮಾಡಲಿಕ್ಕೂ ಸಾಧ್ಯವಿಲ್ಲವೆಂದು ಜಗತ್ತಿನ ಅನಿವಾರ್ಯ ವ್ಯವಹಾರವನ್ನು ಶ್ರುತಿಯು ಕಾಣಿಸುತ್ತಿದೆ. ಅದರಲ್ಲಿಯೇ ಏಕಾತ್ಮ ವಿಜ್ಞಾನವನ್ನು ಬೋಧಿಸುತ್ತಿದೆ. ಶಿರಸ್ಸು ಮೇಲೆ ಇದೆ ಎಂದು ಅದರ ನಾಶಕ್ಕಾಗಿ ಉಳಿದ ಭುಜ, ತೊಡೆ, ಕಾಲುಗಳು ಉದ್ಯುಕ್ತವಾಗುವಲ್ಲಿ ಮಿಕ್ಕ ಈ ಅವಯವಗಳ ಸ್ಥಿತಿಯಾಗುವಂತೆ ಬ್ರಾಹ್ಮಣ ಜಾತಿಯನ್ನು ನಷ್ಟಪಡಿಸಲು ಹೊರಟ

ಕ್ಷತ್ರಿಯ, ವೈಶ್ಯ, ಶೂದ್ರಾದಿ ಜಾತಿಗಳಿಗಾಗುವುದೆಂಬುದನ್ನು ಪರ್ಯಾಯ ದಿಂದ ಪ್ರತಿಯು ತಿಳಿಸುತ್ತಿದೆ.

ಚಾತುರ್ವರ್ಣ್ಯಂ ಚತುರಾಶ್ರಮ್ಯ ಧರ್ಮಾಃ ।
ಸರ್ವೇನಸ್ಯುರ್ಬ್ರಾಹ್ಮಣಾನಾಂ ವಿನಾಶಾತ್ ॥ (ಮಹಾಭಾರತ)

## ಬ್ರಾಹ್ಮಣರು

ಈವರೆಗೂ ಧರ್ಮವನ್ನು ಬೋಧಿಸುತ್ತಾ ವರ್ಣಾಶ್ರಮ ಸ್ಥಿತಿಯನ್ನೂ, ಸ್ವಾಸ್ಥ್ಯವನ್ನೂ, ಇಹಪರದ ನಿರ್ದಿಷ್ಟವಾದ ಸುಖಸಾಧನೆಗಳನ್ನೂ ಬ್ರಾಹ್ಮಣರು ಕಾಪಾಡಿಕೊಂಡು ಬಂದಿರುವರು. ಅಧ್ಯಯನ ಅಧ್ಯಾಪನಗಳಿಂದ ಜಗ ವಿಶ್ವಮಾನ್ಯವಾಗಿರುವ ವೇದವನ್ನೂ ಸಹ ಈವರೆಗೆ ಅವರೇ ಮಾನವ ಜಾತಿಯಲ್ಲಿ ರಕ್ಷಿಸಿದರು. ಬ್ರಾಹ್ಮಣರು ಯೋಗ್ಯರಾಗಿದ್ದರೆ ಎಲ್ಲಾ ವರ್ಣಗಳವರೂ ಯೋಗ್ಯರಾಗಿರುವರು.

ಬ್ರಾಹ್ಮಣಂ ತು ಸ್ವಧರ್ಮಸ್ಥಂ ದೃಷ್ಟ್ವಾ ಬಿಭ್ಯತಿ ಚೇತರೇ ।
ಸ್ವಧರ್ಮಂ ಚಾನುತಿಷ್ಠಂತಿ ಕೃತ್ಯಂ ಸರ್ವಂ ಚ ಕುರ್ವತೇ ॥
(ಶುಕನೀತಿ)

ಸ್ವಧರ್ಮಪರಾಯಣನಾದ ಬ್ರಾಹ್ಮಣನನ್ನು ಕಂಡು ಇತರರು ಹೆದರುವರು. ಸ್ವಧರ್ಮವನ್ನೂ ಪರಿಪಾಲಿಸುವರು. ಸತ್ಕೃತ್ಯಗಳನ್ನೂ ಮಾಡುವರು.

ಬ್ರಾಹ್ಮಣೇಷು ಪ್ರಮೂಢೇಷು ಧರ್ಮೋ ವಿಪ್ರಣಶೇ ದ್ಧ್ರುವಂ ।
ಧರ್ಮಪ್ರಣಾಶೇ ಭೂತಾನಾಮಭಾವಃ ಸ್ಯಾದಸಂಶಯಃ ॥ (ಮಹಾಭಾರತ)

ಧರ್ಮೋಪದೇಶಕರಾದ ಬ್ರಾಹ್ಮಣರು ಮೂಢರಾದರೆ ನಿಶ್ಚಯವಾಗಿಯೂ ಧರ್ಮವು ನಶಿಸಿಹೋಗುವುದು. ಧರ್ಮನಾಶದಿಂದ ನಿಸ್ಸಂಶಯವಾಗಿಯೂ ಎಲ್ಲರ ನಾಶವಾಗುವುದು. ಬ್ರಾಹ್ಮಣರು ಧರ್ಮ ಪ್ರಚಾರಕರು, ಧರ್ಮ ನಿರ್ದೇಶಕರು, ಸ್ವಧರ್ಮ ಬೋಧಕರು, ತಪೋಮೂರ್ತಿಗಳು, ಜ್ಞಾನವಿಜ್ಞಾನ ಸಂಪನ್ನರು, ರಾಗದ್ವೇಷರಹಿತರು, ರಾಜಸತ್ತಾ ಧುರೀಣರು, ಕಾಯದೆ, ನಿಯಮಗಳಿಂದ ಧರ್ಮರಕ್ಷಕರು. ಧರ್ಮದ ರಕ್ಷಣೆಗೆ ಬ್ರಹ್ಮಶಕ್ತಿಯ ಅವಶ್ಯಕವಿರುವಂತೆ ಕ್ಷಾತ್ರಶಕ್ತಿಯೂ ಅವಶ್ಯಕವಾದುದು.

ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।
ತತ್ರ ಶ್ರೀರ್ವಿಜಯೋ ಭೂತಿಃ ಧ್ರುವಾನೀತಿರ್ಮತಿರ್ಮಮ ॥ (ಗೀತಾ ೧೮)

ತಪೋಬಲದಿಂದ ಕೂಡಿದ ಬ್ರಾಹ್ಮಣರ ಬೆಂಬಲಕ್ಕೆ ಲೌಕಿಕ ಸಾಮರ್ಥ್ಯದಿಂದ ಕೂಡಿದ ರಾಜಸತ್ತೆಯೂ ಸಹಜವಾಗಿ ನಿಂತುದಾದರೆ ಅಲ್ಲಿ ಲಕ್ಷ್ಮಿಯ ವಾಸ ಅಖಂಡವಾಗುವುದು. ಯಶಸ್ಸು ನೆಲೆ ನಿಲ್ಲುವುದು. ಎಲ್ಲಾ ಐಶ್ವರ್ಯವೂ ಬಂದು ಸೇರುವುದು. ನೀತಿಯು ಶಾಶ್ವತವಾಗುವುದು. ವ್ಯಾವಹಾರಿಕ ಮೋಕ್ಷ ಧರ್ಮಗಳು ನೆಲೆ ನಿಲ್ಲುವುವು.

ಶನಕೈಸ್ತು ಕ್ರಿಯಾ ಲೋಪಾದಿಮಾಃ ಕ್ಷತ್ರಿಯಜಾತಯಃ ।
ವೃಷಲತ್ವಂ ಗತಾ ಲೋಕೇ ಬ್ರಾಹ್ಮಣಾದರ್ಶನೇನ ಚ ॥

ಪೌಂಡ್ರಕಾಶ್ಚೌಡ್ರದ್ರವಿಡಾಃ ಕಾಂಬೋಜಾಃ ಯವನಾಃ ಶಕಾಃ ।
ಪಾರದಾಃ ಪಹ್ಲವಾಶ್ಚೀನಾಃ ಕಿರಾತಾ ದರದಾಃ ಖಶಾಃ ॥

ಮುಖಬಾಹೂರು ಪಜ್ಜಾನಾಂ ಯಾ ಲೋಕೇ ಜಾತಯೋ ಬಹಿಃ ।
ಮ್ಲೇಚ್ಛವಾಚಶ್ಚಾರ್ಯವಾಚಃ ಸರ್ವೇತೇ ದಸ್ಯವಃ ಸ್ಮೃತಾಃ ॥
(ಮನು. ೧೦–೪೩,೪೪,೪೫)

ಮೆಲ್ಲಮೆಲ್ಲಗೆ ಕ್ರಿಯಾಲೋಪದಿಂದಲೂ, ಬ್ರಾಹ್ಮಣರ ಸಂಸರ್ಗವಿಲ್ಲದಿರುವುದರಿಂದಲೂ ಕ್ಷತ್ರಿಯ ಜಾತಿಗಳವರು ಧರ್ಮಹೀನರಾದರು, ದುಷ್ಟರಾದರೆಂಬುದು ಈ ಮನುವಿನ ಶ್ಲೋಕದಿಂದ ಸ್ಪಷ್ಟವಾಗುವುದು. ಪರ್ಶಿಯ, ಚೀನ ಆದಿ ಅನ್ಯಾನ್ಯ ದೇಶಗಳಲ್ಲಿಯೂ ಮೊದಲು ಬ್ರಾಹ್ಮಣರು ಹೋಗಿ ಧರ್ಮೋಪದೇಶವನ್ನು ಮಾಡುತ್ತಿದ್ದರೆಂಬುದು ಇಲ್ಲಿ ಗ್ರಹಿಸಲಾಗುವುದು.

"ಇಂದ್ರವರ್ಧಂತೋಽಪ್ತುರಃ ಕೃಣ್ವಂತೋ ವಿಶ್ವಮಾರ್ಯಂ ಅಪಘ್ನಂತೋಽರಾವ್ಣಃ ॥" (ಋ. ೯–೬೩–೫). ರಾಕ್ಷಸೀ ವೃತ್ತಿಯನ್ನೂ ಅನೀತಿಯನ್ನೂ ನಷ್ಟಪಡಿಸಿ ಪರಮಾತ್ಮವಿಜ್ಞಾನವನ್ನು ಜಗತ್ತಿನಲ್ಲಿ ಬಿತ್ತರಿಸಿ ವಿಶ್ವವನ್ನೇ (ಋಷಿಮುನಿಗಳು) ಬ್ರಾಹ್ಮಣರು ಆರ್ಯರನ್ನಾಗಿ ಮಾಡುತ್ತಿದ್ದರು. "ಪೃಥಿವ್ಯೈ ಸಮುದ್ರ ಪರ್ಯಂತಾಯಾ ಏಕರಾಟ್" (ಐ. ಬ್ರಾ.). ಆ ಸಮುದ್ರವಲಯಾಂಕಿತ ಪೃಥ್ವಿಗೆ ಒಬ್ಬನೇ ರಾಜನಾಗಿರಬೇಕೆಂದು ಇವರ ಮಹತ್ವಾಕಾಂಕ್ಷೆ. "ವಸುಧೈವ ಕುಟುಂಬಕಂ"

ಎಂಬುದು ಇವರ ಉದಾರ ಚರಿತ. ಧರ್ಮ ನಿರ್ಣಯಕ್ಕಾಗಿ ಬ್ರಾಹ್ಮಣರೇ ಪರಿಷ್ಕೃತರಾದವರು.

ಉತ್ಪತ್ತಿರೇವ ವಿಪ್ರಸ್ಯ ಮೂರ್ತಿರ್ಧರ್ಮಸ್ಯ ಶಾಶ್ವತೀ।
ಸ ಹಿ ಧರ್ಮಾರ್ಥಮುತ್ಪನ್ನೋ ಬ್ರಹ್ಮಭೂಯಾಯ ಕಲ್ಪತೇ ॥

(ಮನು. ೧–೯೮)

ಧರ್ಮದ ಆಚರಣೆ ಮತ್ತು ಬೋಧನೆಯಿಂದ ಧರ್ಮವನ್ನು ರಕ್ಷಿಸು ವುದಕ್ಕಾಗಿಯೇ ಬ್ರಾಹ್ಮಣ ಜಾತಿಯ ಉತ್ಪತ್ತಿಯು. ಧರ್ಮಾಚರಣೆ ಯಿಂದ ಪ್ರಾಪ್ತವಾದ ಆತ್ಮಜ್ಞಾನದ ಮೂಲಕವಾಗಿ ಬ್ರಾಹ್ಮಣರಿಗೆ ಮೋಕ್ಷವು ಲಭಿಸುವುದು.

ಆಚಾರಾದ್ವಿಚ್ಯುತೋ ವಿಪ್ರೋ ನ ವೇದಫಲಮಶ್ನುತೇ ।
ಆಚಾರೇಣ ತು ಸಂಯುಕ್ತಃ ಸಂಪೂರ್ಣಫಲಭಾಗ್ಭವೇತ್ ॥

(ಮನು. ೧–೧–೮)

ಬ್ರಾಹ್ಮಣರಾದರೂ ಆಚಾರಶೂನ್ಯನಾದವನಿಗೆ ವೇದಾಧ್ಯಯನದ ಫಲವು ಒದಗುವುದಿಲ್ಲ. ವೇದಾಧ್ಯಯನದಿಂದುಟಾಗುವ ಸಾಮರ್ಥ್ಯವು ಅವನಲ್ಲಿ ತೋರುವುದಿಲ್ಲ. ಆಚಾರ ಅನುಷ್ಠಾನವೇ ಮುಖ್ಯ. ಆಚಾರ ಅನುಷ್ಠಾನಯುಕ್ತನಾದವನು ಸಂಪೂರ್ಣ ಫಲಭಾಗಿಯಾಗುವನು. ಅವನಲ್ಲಿ ವೇದದ ಸಾಮರ್ಥ್ಯವೂ ತೋರಿಕೊಳ್ಳುವುದು.

ವಿದ್ವದ್ಭಿಃ ಸೇವಿತಃ ಸದ್ಭಿರ್ನಿತ್ಯಮದ್ವೇಷರಾಗಿಭಿಃ ।
ಹೃದಯೇನಾಭ್ಯನುಜ್ಞಾತೋ ಯೋ ಧರ್ಮಸ್ತನ್ನಿಬೋಧತ ॥

(ಮನು. ೨–೧)

ವೇದಜ್ಞರಾದ, ರಾಗದ್ವೇಷಶೂನ್ಯರಾದ, ಆತ್ಮಜ್ಞಾನಿಗಳಾದ ಸಜ್ಜನರ ಪರಿಶುದ್ಧವಾದ ಹೃದಯದಿಂದ ಹೊರಬಿದ್ದ ನಿರ್ಣಯವೇ ಧರ್ಮನಿರ್ಣಯ. ಇಂಥ ಬ್ರಾಹ್ಮಣರೇ ಆರ್ಯರು.

"ಯತ್ತು ಆರ್ಯಾ ಕ್ರಿಯಮಾಣಂ ಪ್ರಶಂಸಂತಿ ಸ ಧರ್ಮಃ ॥" (ಆಪಸ್ತಂಬ ಸೂತ್ರ). ಇವರು ಯಾವ ನಡತೆಯನ್ನು ಪರಿಷ್ಕರಿಸ ವರೋ ಅದೇ ಧರ್ಮವಾಗುವುದು. "ಮಹಾಜನೋ ಯೇನ ಗತಃ ಸ ಪಂಥಾಃ" ಇಂಥಾ ಮಹನೀಯರು ಹೋದ ಮಾರ್ಗವೇ ರಾಜಮಾರ್ಗ.

ಧರ್ಮವನ್ನು ಇವರಲ್ಲೇ ಕೇಳಬೇಕು. ಧರ್ಮನಿರ್ಣಯದ ಅಧಿಕಾರ ಇವರಿಗೇ ಇರುವುದು.

ಚತ್ವಾರೋ ವೇದಧರ್ಮಜ್ಞಾಃ ಪರಿಷತ್ ತ್ರೈವಿದ್ಯಮೇವ ವಾ ।
ಸಾ ಬ್ರೂತೇಯತ್ಸಧರ್ಮಸ್ಸ್ಯಾತ್ ಏಕೋ ವಾಽಧ್ಯಾತ್ಮವಿತ್ತಮಃ ॥
(ಯಾಜ್ಞ. ೧-೯)

ವೇದರಹಸ್ಯವಾದ ಆತ್ಮತತ್ತ್ವವನ್ನು ಬಲ್ಲ ನಾಲ್ಕು ಜನ ಬ್ರಾಹ್ಮಣರು. ಕರ್ಮಮಾರ್ಗದಲ್ಲಿ ನಿಷ್ಣಾತರಾದ ಸಚ್ಛೀಲ ಜನರು ಸೇರಿದ ಸಭೆಯೇ ಧರ್ಮಸಭೆಯಾಗುವುದು. ಅಂಥಹ ಸಭೆಯು ಧರ್ಮನಿರ್ಣಯವನ್ನು ಮಿಕ್ಕವರು ಶಿರಸಾವಹಿಸಬೇಕು. ಒಬ್ಬ ಅಧ್ಯಾತ್ಮನಿಷ್ಠ ಬ್ರಾಹ್ಮಣನು ಕೊಟ್ಟ ನಿರ್ಣಯವು ಧರ್ಮವಾಗುವುದು.

ಸರ್ವಭೂತೇಷು ಚಾತ್ಮಾನಂ ಸರ್ವಭೂತಾನಿ ಚಾತ್ಮನಿ ।
ಸಮಂ ಪಶ್ಯನ್ನಾತ್ಮಯಾಜೀ ಸ್ವಾರಾಜ್ಯಮಧಿಗಚ್ಛತಿ ॥ (ಮನು. ೧೨-೯೧)

## ಮನುಷ್ಯ ಜಾತಿಯ ವಿಶೇಷ

ಯಾವಾತನು ಎಲ್ಲರಲ್ಲಿಯೂ ತನ್ನನ್ನು ಕಾಣುವನೋ, ತನ್ನಲ್ಲಿ ಎಲ್ಲರನ್ನೂ ಕಾಣುವನೋ ಆ ಸಮದರ್ಶಿ ಆತ್ಮಯಾಜಿ ಪುರುಷನು ಸ್ವಾರಾಜ್ಯವನ್ನು ಪ್ರಾಪ್ತಮಾಡಿಕೊಳ್ಳುವನು. ಈತನೇ ಸ್ವರಾಜ್ಯವನ್ನು ನಡೆಸಬಲ್ಲನು. ಜಗತ್ತಿನ ಎಲ್ಲಾ ಪ್ರಾಣಿಗಳನ್ನೂ ಆತ್ಮಭಾವನೆಯಿಂದ ನೋಡುತ್ತಾ ಅವರ ವಿಷಯದಲ್ಲಿ ನಿಷ್ಕಾಮಪ್ರೇಮ, ನಿರಪೇಕ್ಷ ಕರುಣೆ, ಪ್ರತಿಫಲವನ್ನು ಅಪೇಕ್ಷಿಸದ ಉಪಕಾರ, ಕ್ಷಮೆ, ಅಹಿಂಸೆ, ಸಹಿಷ್ಣುತೆ, ಸಭ್ಯತೆ, ಸೌಜನ್ಯ ಇಟ್ಟು ನಡೆದುಕೊಳ್ಳುವಂಥ ಮನುಷ್ಯಜಾತಿ ವಿಶೇಷಕ್ಕೆ **ಆರ್ಯರೆಂದು** ಹೆಸರು. ಪರರಿಗಾಗಿ ವೈಯುಕ್ತಿಕ ಜೀವನದ ಸ್ವಾರ್ಥ, ವಿಷಯ ಸುಖೋಪಭೋಗ, ವಿಷಯೋಪಭೋಗದ ಲಾಲಸೆ, ಯಶಸ್ಸು ಮತ್ತು ಪ್ರತಿಷ್ಠೆಯ ಹವಣಿಕೆ ಇವುಗಳನ್ನು ಬಿಡುವುದಕ್ಕಾಗಿ ಯಾವ ಜಾತಿಯು ಯಾವಾಗಲೂ ಸಜ್ಜವಾಗಿರುವುದೋ ಆ ಮನುಷ್ಯಜಾತಿಯ ವಿಶೇಷ **ಆರ್ಯರೆಂದು** ಕರೆಯಿಸಿಕೊಳ್ಳುವುದು. ತನಗಾಗಿ ಪರರನ್ನು ಹಿಂಸಿಸುವುದು, ಸ್ವಾರ್ಥಕ್ಕಾಗಿ ದ್ವೇಷವನ್ನು ಕಟ್ಟಿಕೊಳ್ಳುವುದು, ಪರರ

ಊರ್ಜಿತಾವಸ್ಥೆಯನ್ನು ಸಹಿಸದೆ ಇರುವುದು, ಪರರನ್ನು ಜುಗುಪ್ಸೆಯಿಂದ ಕಾಣುವುದು, ಸಜ್ಜನರನ್ನು ನಿಂದಿಸಿ ಸ್ವೈರವರ್ತನೆ ಇಡುವುದು, ಧರ್ಮ-ವಿರುದ್ಧ ನಡೆದುಕೊಳ್ಳುವುದು, ನೀತಿಯ ಕಟ್ಟುಗಳನ್ನು ಉಲ್ಲಂಘಿಸುವುದು, ಪರ ಸ್ವತ್ತನ್ನು ಸ್ವಸುಖಕ್ಕಾಗಿ ಅಪಹರಿಸುವುದು ಮುಂತಾದ ಆಸುರೀಯ ವೃತ್ತಿಗಳನ್ನು ತನ್ನಲ್ಲಿಯೂ ಇಟ್ಟುಕೊಳ್ಳದೇ ಪರರಲ್ಲಿ ಇದ್ದುದನ್ನೂ ಸಹ ತಪ್ಪಿಸಲು ಕಂಕಣಬದ್ಧವಾಗಿರುವಂತಹ ಮನುಷ್ಯ ವಿಶೇಷಕ್ಕೆ ಆರ್ಯರೆಂದು ಹೆಸರು. ಇಂದ್ರಿಯಗಳನ್ನು ಸಂಯಮದಲ್ಲಿಟ್ಟು ಅಂತಃಕರಣವನ್ನು ಪರಿಶುದ್ಧಗೊಳಿಸಿ, ಸತ್ಯಶುದ್ಧಿಗಾಗಿಯೂ, ಆತ್ಮಪ್ರಾಪ್ತಿಗಾಗಿಯೂ, ಉಪಯುಕ್ತ ವೇದವಿಹಿತ ತಾತ್ವಿಕ ಜೀವನವನ್ನು ಕೈಕೊಂಡು ಅದರ ಪ್ರಚಾರಕ್ಕಾಗಿ ಜಗತ್ತಿನಲ್ಲಿ ಜೀವಿಸುವ ಮನುಷ್ಯವಿಶೇಷಕ್ಕೆ ಆರ್ಯರೆಂದು ಹೆಸರು.

ಮನುಷ್ಯರಲ್ಲಿ ಇರುವ ಪಶುವೃತ್ತಿಯನ್ನು ಹೋಗಲಾಡಿಸಿ ಮನುಷ್ಯ ಧರ್ಮವನ್ನು ಬೋಧಿಸಿ ಅವರನ್ನು ಸದಾಚಾರಯುಕ್ತರನ್ನಾಗಿ ಮಾಡಿ ಷ್ಮಮತೆಯ ರಾಜಮಾರ್ಗದಿಂದ ವಿಶ್ವದ ಸತ್ಯರೂಪನಾಗಿರುವಂಥ ಆನಂದಘನಪರಮಾತ್ಮನ ಬದಿಗೆ ಜನರನ್ನು ಒಯ್ಯುವುದು ಈ ಆರ್ಯರ ಕಾರ್ಯ. ವೈದಿಕ ಮತಾನುಸಾರವಾಗಿ ಸದಾಚಾರವನ್ನು ಇಟ್ಟುಕೊಳ್ಳುವುದು, ವೈದಿಕ ಸಿದ್ಧಾಂತಗಳನ್ನು ವಿಚಾರಿಸುವುದು, ವೈದಿಕ ವರ್ಣಾಶ್ರಮ ಧರ್ಮಗಳನ್ನು ಪರಿಪಾಲಿಸುವುದು, ಪರಮಾತ್ಮನ ಅಸ್ತಿತ್ವವನ್ನು ಒಪ್ಪುವುದು, ಆತನ ಕೃಪೆಯಿಂದ ಇಹಪರ ಸುಖಸಾಧನೆಗಳ ಲಾಭವಾಗುವುದೆಂದು ನಂಬುವುದು, ಅವನ ಪ್ರೀತ್ಯರ್ಥವಾಗಿ ದೇವಪಿತೃಕಾರ್ಯಗಳನ್ನು ನಡೆಸುವುದು, ಶ್ರುತಿ ಸ್ಮೃತಿ ಪುರಾಣೋಕ್ತ ಕರ್ಮಗಳನ್ನು ಅನುಷ್ಠಿಸುವುದು, ಐಹಿಕ, ಪಾರಲೌಕಿಕ, ವೈಶೇಷಕ ಸುಖದಲ್ಲಿ ಜಿಹಾಸೆಯನ್ನು ತಾಳಿ ಕರ್ಮ, ಭಕ್ತಿ, ಜ್ಞಾನಯೋಗಗಳಿಂದ ಪರಮಾತ್ಮೈಕ್ಯವನ್ನು ಪಡೆಯಲು ಹವಣಿಸುವುದು, ವೇದ, ಸ್ಮೃತಿ, ಪುರಾಣ ಗ್ರಂಥಗಳನ್ನು ತನ್ನ ಧರ್ಮಗ್ರಂಥಗಳೆಂದು ನಂಬುವುದು, ಕರ್ತೃತ್ವ—ಭೋಕ್ತೃತ್ವಾದಿ ಅಹಂಕಾರಗಳಿಂದ ಜನ್ಮವು ಅವುಗಳ ರಾಹಿತ್ಯದಿಂದ ಮೋಕ್ಷವು ಲಭಿಸುವುದೆಂದು ವಿಶ್ವಾಸಗೊಂಡಿರುವುದು, ವೇದವಿಹಿತ ಪ್ರವೃತ್ತಿ-ನಿವೃತ್ತಿ ಮಾರ್ಗ

ದಲ್ಲಿ ವಿಶ್ವಾಸವಿಟ್ಟು ಆದರ್ಶಗೃಹಸ್ಥ ಮತ್ತು ಸನ್ಯಾಸಿಯಾಗುವುದು, ತನ್ನ ಆದರ್ಶ ಪರಿಶುದ್ಧ ಆಚರಣದಿಂದಲೂ, ತತ್ವಗ್ರಾಹಿ ಉಪದೇಶದಿಂದಲೂ, ಜಗದುದ್ಧಾರಕ ದೃಷ್ಟಿಯನ್ನಿಟ್ಟು ನಡೆದುಕೊಳ್ಳುವುದು ಆರ್ಯರ ಲಕ್ಷಣಗಳು; ಆರ್ಯಸಂಸ್ಕೃತಿಯ ಚಿಹ್ನೆಗಳು; ವೈದಿಕ ಧರ್ಮದ ತತ್ವಗಳು; ಇವೇ ಜಗದುದ್ಧಾರದ ಸಿದ್ಧಾಂತಗಳು.

## ಗೃಹಸ್ಥಾಶ್ರಮದ ಮೂಲ

ಪ್ರಜಾಕಾಮೋ ಹ ವೈ ಪ್ರಜಾಪತಿಃ ಸ ತಪೋಽತಪ್ಯತ ಸ ತಪಸ್ತಪ್ತ್ವಾ ಸ ಮಿಥುನಮುತ್ಪಾದಯತೇ । (ಪ್ರಶ್ನೋ. ೧–೪). ಪ್ರಜಾಕಾಮನಾದ ಪ್ರಜಾಪತಿಯು ಪ್ರಜೆಗಳನ್ನು ಸೃಜಿಸಬೇಕೆಂಬುದಾಗಿ ಸಂಕಲ್ಪಿಸಿದನು. ಇದೇ ಅವನ ತಪವು. ಈ ವಿಧವಾಗಿ ಸಂಕಲ್ಪಿಸಿ ಆತನು ಒಂದು "ಮಿಥುನ" ಅಂದರೆ ಪ್ರಕೃತಿ-ಪುರುಷನನ್ನು ನಿರ್ಮಿಸಿದನು.

ಸೋಽಕಾಮಯತ ದ್ವಿತೀಯೋ ಮ ಆತ್ಮಾ ಜಾಯೇತೇತಿ ಸ ಮಿಥುನಂ ಸಮಭವತ್ । (ಬೃ. ೨–೪). ಮಳೆಗಾಲವು ಬಂದೊಡನೆ ವಾತಾವರಣದಲ್ಲಿ ಹೇಗೆ ಒಂದು ಮಾರ್ಪಾಡು ಆಗುವುದೋ ಅಂತೆಯೇ ಸೃಷ್ಟಿಯ ಉತ್ಪತ್ತಿ ಕಾಲ ಬಂದೊಡನೆ ಪರಮಾತ್ಮನಲ್ಲಿ ಒಂದು ಕಲ್ಪನೆಯು ಮಾರ್ಪಾಡು ಆಗುವುದು. ಪರಮಾತ್ಮನಲ್ಲಿ ಸೃಷ್ಟಿಯ ಕಾರ್ಯಕ್ಕಾಗಿ ಶಕ್ತಿಯ ಕಲ್ಪನೆ ಬರುವುದು. ಇನ್ನೊಂದು ಎರಡನೆ ನನ್ನ ಆತ್ಮರೂಪವಾಗಬೇಕೆಂದು ಅವನಲ್ಲಿ ಇಚ್ಛೆ ಉಂಟಾಗುವುದು. ಅದ್ವಿತೀಯನಾಗಿರುವಂತಹ ಪರಮಾತ್ಮ ಸ್ವರೂಪದಲ್ಲಿ ತನ್ನ ಸ್ವರೂಪದ ದ್ವಿತೀಯ ಭಾವನೆಯೇ ಆತನ ಶಕ್ತಿರೂಪವಾದ ಪ್ರಕೃತಿಯು. ಈ ಪ್ರಕೃತಿಗೆ 'ದ್ವಿತೀಯಾ' ಎಂದು ಹೆಸರು. ಈ ಪರಮಾತ್ಮನ ಸಂಕಲ್ಪದಿಂದ ಮೊದಲಿನ ರೂಪವು ಇದ್ದಂತೆಯೇ ಇದ್ದು ಆತನ ಎರಡು ರೂಪಗಳಾದವು. ಇದೇ 'ಮಿಥುನ' ಅಂದರೆ ಜೋಡಿ—ಪ್ರಕೃತಿ-ಪುರುಷರು. ಸೃಷ್ಟಿಯ ಆಂದೋಲನಕಾಲದಲ್ಲಿ ಸೂಕ್ಷ್ಮದಿಂದ ಸ್ಥೂಲರೂಪವನ್ನು ಪಡೆಯುವವರೆಗೆ ಆದ ಎಲ್ಲಾ ಮಾರ್ಪಾಡುಗಳಲ್ಲಿಯೂ ಈ ಪ್ರಕೃತಿ-ಪುರುಷರ ಈ ಸ್ಥೂಲ ಸೂಕ್ಷ್ಮರೂಪವು ಇದ್ದೇ ಇರುವುದು.

ಆತ್ಮೈವೇದಮಗ್ರಆಸೀತ್ ಪುರುಷ ವಿಧಃ । (ಬೃ. ೧–೪–೧).

ಸ ವೈ ನೈವ ರೇಮೇ ತಸ್ಮಾದೇಕಾಕೀ ನ ರಮತೇ। ಸ ದ್ವಿತೀಯಮೈಚ್ಛತ್ ಸ ಹೈತಾವಾನಾಸ ಯಥಾ ಸ್ತ್ರೀ ಪುಮಾಂಸೌ ಸಂಪರಿಷ್ವಕ್ತೌ, ಸ ಇಮಮೇವಾತ್ಮಾನಂ ದ್ವೇಧಾಪಾತಯತ್, ತತಃ ಪತಿಶ್ಚ ಪತ್ನೀ ಚಾ ಭವತಾಂ। ತಸ್ಮಾತ್ ಇದಂ ಅರ್ಧಬೃಗಲಮಿವ ಸ್ವ ಇತಿ ಹಸ್ಮಾಹ ಯಾಜ್ಞವಲ್ಕ್ಯಸ್ತಸ್ಮಾದಯಮಾಕಾಶಃ ಸ್ತ್ರಿಯಾ ಪೂರ್ಯತ ಏವ ತಾಂ ಸಮಭವತ್ ತತೋ ಮನುಷ್ಯಾ ಅಜಾಯಂತ।(ಬೃ ೧-೪-೩) ಅವ್ಯಕ್ತಾನ್ಮಹತ್ ಮಹತೋ ಅಹಂಕಾರಃ। ಅವ್ಯಕ್ತದಿಂದ ಮಹತ್ತತ್ವ, ಮಹತ್ತತ್ವದಿಂದ ಅಹಂಕಾರ, ಇವೇ ಜಗದುತ್ಪತ್ತಿಯ ಸೂಕ್ಷ್ಮ, ಮಧ್ಯಮ, ಸ್ಥೂಲ ಭಾವಗಳುಳ್ಳ ಮೂರು ಸೋಪಾನಗಳು. ಅವ್ಯಕ್ತ ಸ್ಥಿತಿಯಲ್ಲಿ ಸಂಕಲ್ಪದ ಅವ್ಯಕ್ತತೆಯೇ ಅಲ್ಲಿಯ ಪ್ರಕೃತಿರೂಪ. ಮಹತ್ತತ್ವದಲ್ಲಿರುವ ಸಂಕಲ್ಪದ ಮಧ್ಯಮ ರೂಪವೇ ಅಲ್ಲಿಯ ಮಾಧ್ಯಮಿಕ ಪ್ರಕೃತಿಯ ರೂಪವು. ಅಹಂಕಾರದಲ್ಲಿ ಸಂಕಲ್ಪದ ಸ್ಥೂಲರೂಪವೇ ಅಲ್ಲಿಯ ಪ್ರಕೃತಿಯ ಸ್ಥೂಲರೂಪ. ಬೀಜವಿರುವಂತೆ ಅವ್ಯಕ್ತವು ಮೊಳಕೆಯಾದಂತೆ ಮಹತ್ತತ್ವವು. ಆ ಮೊಳಕೆಗೆ ಬರುವ ಎರಡು ಕವಲುಗಳೇ ಸ್ಥೂಲ, ಪ್ರಕೃತಿ-ಪುರುಷರ ಸ್ವರೂಪ. ಇವುಗಳಿಂದ ಹಬ್ಬಿವ ಸ್ಥೂಲ ರೂಪವೇ ವಿಶ್ವಪ್ರಪಂಚ. ಈ ಅವ್ಯಕ್ತ, ಮಹತ್ತತ್ವ ಮತ್ತು ಅಹಂಕಾರಗಳ ಅಭಿಮಾನಿಯಾದ ಪರಮಾತ್ಮ ಸ್ವರೂಪಕ್ಕೆ ಈಶ್ವರ, ಹಿರಣ್ಯಗರ್ಭ ಮತ್ತು ವಿರಾಟ ಎಂಬ ಕ್ರಮೇಣ ಮೂರು ಹೆಸರುಗಳು ಇರುವುವು. ಮೇಲೆ ಕಂಡ ಬೃಹದಾರಣ್ಯದ ಶ್ರುತಿಯು ಪೂರ್ವಾಪರ ರೂಪದಿಂದ ವಿರಾಟಪುರುಷ ಮತ್ತು ಅವನ ಅಂಶವಾಗಿರುವಂಥ ಚತುರ್ಮುಖ ಬ್ರಹ್ಮದೇವರ ಪರವಾಗಿರುವುದು. ಈ ವಿರಾಟನು ಒಂದು ವಿಧವಾದ ಪುರುಷಾಕಾರನಾಗಿರುವನು. ಈತನಿಂದಲೇ ಈ ಎಲ್ಲಾ ಸ್ಥೂಲ ಸೃಷ್ಟಿಯಾಯಿತು. ಈತನು ಒಬ್ಬನೇ ರಮಿಸಲಿಲ್ಲ. ಅಂತೆಯೇ ಈತನ ರೂಪಿಗಳಾದ ಸ್ತ್ರೀ ಪುರುಷರು ಒಬ್ಬರೇ ರಮಿಸರು. ಅವನು ತನ್ನ ಎರಡನೆ ರೂಪವನ್ನು ಇಚ್ಛಿಸುವಂತೆ ಇಲ್ಲಿಯೂ ಪುರುಷನು ತನ್ನ ಎರಡನೆ ರೂಪವನ್ನೂ ಇಚ್ಛಿಸುವನು. ಅದೇ ಆ ಪ್ರಕೃತಿಯ ಅಂಶರೂಪವಾಗಿರುವ ಸ್ತ್ರೀಯು. ವಿವಾಹದ ಪೂರ್ವದಲ್ಲಿ ಸ್ತ್ರೀಪುರುಷರಿಗೆ ಪರಸ್ಪರರ

ವಾಸನೆಯೂ ಮನಸ್ಸಿನಲ್ಲಿ ಉಂಟಾಗುವುದು. ಆಗ್ಯೆ ಎರಡು ಕವಲು ಒಡೆಯುವ ಪೂರ್ವದಲ್ಲಿ ಎರಡು ಭಾಗದ ಭಾವನೆಯನ್ನು ಉಂಟುಮಾಡುವ ಒಂದಕ್ಕೊಂದು ಬೆಸಗೆ ಹಾಕಿದ ಪರಿಯಲ್ಲಿ ಸೇರಿಕೊಂಡಿದ್ದ ಪೃಥಕ್ಕರಣದ ಒಂದು ಪೂರ್ವರೂಪವೇ ಸರಿ. ಪ್ರಕೃತಿ-ಪುರುಷರ ಎರಡು ಪೃಥಕ್ ರೂಪವಾಗುವ ಪೂರ್ವದಲ್ಲಿ ಆ ಎರಡು ಕವಲೂ ಒಂದಕ್ಕೊಂದು ಅಪ್ಪಿಕೊಂಡು ಇರುವಂತೆ ಸೇರಿಕೊಂಡೇ ಇರುವುದು.

ಅಂತೆಯೇ ಪ್ರಕೃತಿ-ಪುರುಷರ ಹಾಗೂ ಸ್ತ್ರೀ ಪುರುಷರ ಸ್ಥೂಲರೂಪವು ಪೃಥಕ್ ಆಗುವ ಪೂರ್ವದಲ್ಲಿ ವಾಸನೆಯಲ್ಲಿ ಸೇರಿಕೊಂಡೇ ಇರುವುದು. ಒಂದು ಬಿದಿರಿನ ಕೊಳವೆಯನ್ನು ಸರಿಯಾಗಿ ಸೀಳಿದ ಅರ್ಧಕ್ಕೆ ಅರ್ಧಭಾಗ ಸೇರಿದೇ ಪೂರ್ಣವಾಗುವಂತೆ ಪುರುಷರ ಪ್ರಕೃತಿ ಅಥವಾ ಸ್ತ್ರೀ ರೂಪನಾದ ಅರ್ಧಭಾಗ ಪುರುಷನಿಗೆ ಸೇರಿದರೆ ಗೃಹಸ್ಥಾಶ್ರಮದಲ್ಲಿ ಒಂದು ಅಖಂಡ ದೇಹವಾಗುವುದು. ಪ್ರಜಾಕಾಮನಾಗಿರುವಂಥ ಗೃಹಸ್ಥಾಶ್ರಮದಲ್ಲಿರುವ ಪುರುಷನ ಅರ್ಧದೇಹವು ವಿಧ್ಯುಕ್ತ ವಿವಾಹಿತಳಾದ ಧರ್ಮಪತ್ನಿಯಿಂದಲೇ ಪೂರ್ಣವಾಗುವುದು. ಸೃಷ್ಟಿಕರ್ತನಾದ ಬ್ರಹ್ಮದೇವನು ಸೃಷ್ಟಿ ಸಂಕಲ್ಪದಿಂದ ಆಲೋಚನಾಪರನಾಗಿ ಪತಿ ಪತ್ನಿಯ ಸಂಕಲ್ಪಮಾಡಿ ತನ್ನ ದೇಹದ ಎಡಬಲಭಾಗಗಳಿಂದ ಸ್ತ್ರೀಪುರುಷ ರೂಪಗಳನ್ನು ನಿರ್ಮಿಸಿದನು. ನಿರ್ಮಿಸಲು ಮತ್ತೊಂದು ಯಾವುದೂ ಇಲ್ಲದಿದ್ದುದರಿಂದ ತಾನೇ ಈ ಎರಡು ರೂಪವನ್ನು ತಾಳಿದನು ಎಂದು ಅರ್ಥ. ತಾನೇ ತನ್ನ ಎಡಬಲ ಭಾಗಗಳಿಂದ ಸ್ತ್ರೀಪುರುಷ ರೂಪಗಳನ್ನು ತಾಳಿದನು ಎಂದು ತಾತ್ಪರ್ಯ. ಇವರೇ ಮನು ಮತ್ತು ಶತರೂಪ. ಈ ಶತರೂಪ ಮನುಗಳಿಂದಲೇ ಮನುಷ್ಯರಾದರು— ಮಾನವರಾದರು. ಮನುಸ್ಮೃತಿಯಲ್ಲಿ ಒಂದನೇ ಅಧ್ಯಾಯದ ಮೂವತ್ತೆರಡನೆ ಶ್ಲೋಕದಿಂದ ಈ ವಿಧವಾದ ಸೃಷ್ಟಿಕ್ರಮದ ವಿವರಣೆ ಬಂದಿರುವುದು. ಉದಾಹರಣಾರ್ಥವಾಗಿ,

ದ್ವಿಧಾ ಕೃತ್ವಾತ್ಮನೋ ದೇಹಮರ್ಧೇನ ಪುರುಷೋಽಭವತ್ ।
ಅರ್ಧೇನ ನಾರೀ ತಸ್ಯಾಂ ಸ ವಿರಾಜಮಸೃಜತ್ಪ್ರಭುಃ ॥
ತಪಸ್ತಪ್ತ್ವಾಸೃಜದ್ಯಂ ತು ಸ ಸ್ವಯಂ ಪುರುಷೋ ವಿರಾಟ್ ।
ತಂ ಮಾಂ ವಿತ್ತಾಸ್ಯ ಸರ್ವಸ್ಯ ಸ್ರಷ್ಟಾರಂ ದ್ವಿಜಸತ್ತಮಾಃ ॥
(ಮನು. ೧–೩೨, ೩೩)

ಈ ಶ್ಲೋಕದಲ್ಲಿ 'ಮನುವು ಬ್ರಹ್ಮದೇವನಿಂದಲೇ ತನ್ನ ಜನ್ಮವಾದ ದ್ದನ್ನೂ, ತನ್ನಿಂದಲೇ ಸೃಷ್ಟಿಯಾದದ್ದನ್ನೂ ವ್ಯಕ್ತಪಡಿಸಿರುವನು. ಹೇ! ಬ್ರಹ್ಮಣರುಗಳಿರಾ! ಈ ಎಲ್ಲದರ ಉತ್ಪತ್ತಿಕರ್ತನು ನಾನೆಂದು ತಿಳಿಯಿರಿ ಎಂಬುದಾಗಿ ಮನುವು ತನ್ನ ಪರಿಚಯವನ್ನು ಮಾಡಿಕೊಟ್ಟಿರುವನು. **'ಮನೋರ್ಜಾತಾ ಮನುಜಾಃ' 'ಮನೋರ್ಭವಾ ಮಾನವಾಃ' ಏವಮೇವ ಯದಿದಂ ಕಿಂಚ ಮಿಥುನ ಮಾ ಪಿಪಿಲೀಕಾಭ್ಯಸ್ತತ್ ಸರ್ವಮಸೃಜತ** (ಬೃ. ೧-೪-೪). ಅಂತೆಯೇ ಎಲ್ಲಾ ಜಾತಿಯ ಪ್ರಾಣಿ ಗಳೂ ಆದುವು.

## ಸತಿ ಪತಿಗಳು

ಪ್ರಪಂಚದ ವಿಸ್ತಾರಕ್ಕಾಗಿ ಗೃಹಸ್ಥಾಶ್ರಮ ವಾಸನೆಯಿಂದ ಪರ ಮಾತ್ಮನೇ ಪ್ರವೃತ್ತಿಪರರಾದ ಸ್ತ್ರೀ-ಪುರುಷ ರೂಪ ತಾಳುವನು. ಪ್ರಥಮ ಶತರೂಪ ಮತ್ತು ಮನುಗಳ ಒಂದು ಜೋಡಿಯಾದಂತೆ ಭಾವೀ ಪತಿ ಪತ್ನಿಯ ಯುಗ್ಮರೂಪಗಳನ್ನು ಇವನು ಧರಿಸುವನು. ಅಖಂಡವಾದುದೇ ಎರಡು ಭಾಗವಾಗಿ ಎರಡು ಭಾಗಗಳ ಸೇರುವಿಕೆಯಿಂದಲೇ ಪೂರ್ಣಭಾಗ ವಾಗುವ ಈ ನಿಯಮದ ಪ್ರಕಾರ ಪತಿ ಪತ್ನಿಯರು ಒಂದು ದೇಹದ ಎಡಬಲ ಭಾಗಗಳಂತೆ ಅನ್ಯೋನ್ಯರಾಗಿರುವರು. ಈ ಮೂಲಗ್ರಾಹಿ ತಾತ್ವಿಕ ದೃಷ್ಟಿ ಯನ್ನು ಕೈಕೊಂಡು ಪ್ರವೃತ್ತಿ ಮಾರ್ಗವು ಪರಮಾತ್ಮನ ಏಕತ್ವದ ಜ್ಞಾನ ದಿಂದ ಮೋಕ್ಷಕ್ಕೆ ಕಾರಣವಾಗಬೇಕೆಂದು ಒಂದು ಪತಿಗೆ ಒಂದು ಸತಿಯ ನಿಯಮವಾಯಿತು. ಸ್ತ್ರೀಗೆ '**ವಾಮಾ**' ಎಂದು ಹೆಸರು; '**ದ್ವಿತೀಯಾ**' ಎಂದೂ ಹೆಸರು. ಈ ಎರಡು ಹೆಸರಿನ ಉಚ್ಚಾರದಿಂದಲೇ ಮೊದಲಿನ ಎಲ್ಲಾ ವಿವರಣವು ನೆನಪಿಗೆ ಬರುವುದು. **ಪ್ರತೀಪ ದರ್ಶನೀ ವಾಮಾ ವನಿತಾ ಮಹಿಳಾ ತಥಾ । ಪತ್ನೀ ಪಾಣಿಗ್ರಹೀತೀಚ ದ್ವಿತೀಯಾ ಸಹ ಧರ್ಮಿಣೀ॥** (ಅಮರ ದ್ವಿ. ಕಾಂ.). ಈ ದೃಷ್ಟಿಯಿಂದಲೇ **ಅನ್ಯೋನ್ಯಸ್ಯಾ ವ್ಯಭೀಚಾರೋ ಭವೇದಾಮರಣಾಂತಿಕಃ ।** ಗೃಹಸ್ಥಾಶ್ರಮದಲ್ಲಿ ಪತಿ ಪತ್ನಿಯರ ಅನನ್ಯತೆ ಇಬ್ಬರ ಆಮರಣಾಂತವಾಗಿಯೂ ಇರಬೇಕು ಎಂದು ಮನುವು ಸಾರಿರುವನು. ತಾತ್ವಿಕ ದೃಷ್ಟಿಯಿಂದಲೂ, ಮನುವಿನ ಅಪ್ಪಣೆಯಿಂದಲೂ ಪತಿಪತ್ನಿಯರ ಅನ್ಯೋನ್ಯ ಸಂಬಂಧವು ಒಂದು ದೇಹದ

ದಕ್ಷಿಣ–ವಾಮ ಭಾಗಗಳಂತೆ ಅವಿಭಾಜ್ಯವಾದದ್ದೆಂದು ಅರಿತ ಯಾವ ವಿವೇಕವುಳ್ಳ ಮನುಷ್ಯನೂ ಪುನರ್ವಿವಾಹಕ್ಕಾಗಿಯೂ ಮತ್ತು ವಿಜಾತೀಯ ವಿವಾಹಕ್ಕಾಗಿಯೂ ಅಥವಾ ಅಸವರ್ಣ ವಿವಾಹಕ್ಕಾಗಿಯೂ ಮನಸ್ಸು ಕೊಡನು. ಅದಕ್ಕಾಗಿ ಕಾಯಿದೆಯನ್ನೂ ಮಾಡನು.

ಒಂದು ದೇಹದ ದಕ್ಷಿಣ–ವಾಮ ಭಾಗಗಳು ಮತ್ತೊಂದು ದೇಹದ ದಕ್ಷಿಣ–ವಾಮ ಭಾಗಗಳು ಹೇಗೆ ಆಗವೋ ಅಂತೆಯೇ ಒಂದು ದೇಹದ ದಕ್ಷಿಣ–ವಾಮ ಭಾಗಗಳಾದ ಪುರುಷ–ಪತ್ನಿಯರು ಮತ್ತೊಂದು ಪುರುಷ ಸ್ತ್ರೀ ದೇಹದ ದಕ್ಷಿಣ–ವಾಮ ಭಾಗಗಳು, ಅಂದರೆ ಪತಿಪತ್ನಿಯರು ಆಗರು. ಇದು ಪ್ರಾಣಿಗಳಲ್ಲಿ ಮನುಷ್ಯನಿಗೆ ಸಂಬಂಧಪಟ್ಟ ತಾತ್ವಿಕ ವಿಚಾರ. 'ಅಶನಾ ಪಿಪಾಸೇ ಏವಾಭಿ ವಿಜ್ಞಾನಂ' ಎಂಬ ಉಪನಿಷತ್ ವಾಕ್ಯಾನುಸಾರವಾಗಿ ಭೋಗಯೋನಿಗಳಾದ ಮನುಷ್ಯೇತರ ಪ್ರಾಣಿಗಳಿಗೆ ಮೋಕ್ಷಪ್ರಾಪ್ತಿಗೆ ಕಾರಣವಾದ ವಿವೇಕ ವಿಚಾರವಿರದ ಕಾರಣ ಮನುಷ್ಯನೇ ಇವುಗಳ ಮೂಲಕವಾಗಿ ಮೋಕ್ಷಕ್ಕೆ ಕಾರಣನಾಗುವನು. ಆದುದರಿಂದಲೇ ಈ ತಾತ್ವಿಕ ವಿಚಾರದ ಆಚರಣೆಯು ಎಲ್ಲಾ ಮನುಷ್ಯರಲ್ಲಿಯೂ ಇರತಕ್ಕದ್ದು ಮಾನವ ಧರ್ಮವೆನ್ನಿಸಿಕೊಳ್ಳುವುದು.

ಅಯಂ ದ್ವಿಜೈರ್ಹಿವಿದ್ವದ್ಭಿಃ ಪಶುಧರ್ಮೋ ವಿಗರ್ಹಿತಃ ।
ಮನುಷ್ಯಾಣಾಮಪಿ ಪ್ರೋಕ್ತೋ ವೇನೇ ರಾಜ್ಯಂ ಪ್ರಶಾಸತಿ ॥
(ಮನು. ೯–೬೬)

ಈ ಶ್ಲೋಕದಲ್ಲಿ ಒಂದು ಸ್ತ್ರೀಗೆ ಅನ್ಯಪತಿಯಾಗುವುದು ಮನುಷ್ಯ ಧರ್ಮವಾಗದೆ ಪಶುಧರ್ಮವಾಗುವುದೆಂದು ಮನು ಹೇಳಿರುವನು. ಮೊದಲು ಇದು ಇರದೆ ಅಧಾರ್ಮಿಕನಾದ ವೇನರಾಜನ ಕಾಲದಿಂದ ಈ ಪಶುಧರ್ಮವು ಮನುಷ್ಯರಲ್ಲಿಯೂ ಬಂದಿತು. ಇದಕ್ಕೆ ಅಧರ್ಮಿಯಾದ ವೇನರಾಜನೇ ಮೂಲ. ವಿವೇಕ ವಿಚಾರಯುಕ್ತನಾದ ಮನುಷ್ಯನು ಇಂಥಾ ಪಶುಧರ್ಮವನ್ನಾಚರಿಸಿದರೆ ಅವನು ಪಶುತುಲ್ಯನೇ ಸರಿ ಎಂಬುದು ಈ ಶ್ಲೋಕದಿಂದ ಸ್ಪಷ್ಟವಾಗುವುದು. ಮನುಷ್ಯರಲ್ಲಿ ಈ ಪಶುಧರ್ಮದ ಪ್ರಚಾರವು ಕಾಯಿದೆಯಿಂದ ಮಾಡುವ ಪ್ರವೃತ್ತಿಯು ಮನುಷ್ಯರನ್ನು ಪಶುಗಳನ್ನಾಗಿ ಮಾಡುವಂಥ ಖಟಾಟೋಪವೇ ಸರಿ ಎಂಬುದು ಮನುವಿನ

ಶ್ಲೋಕದಿಂದಲೂ ಮತ್ತು ಯುಕ್ತಿ ವಿಚಾರಗಳಿಂದಲೂ ಸುವಿದಿತವಾಗು ವುದು. ಆಯಾ ಋಷಿಗಳ ಸಂತತಿಯು, ಆಯಾ ಗೋತ್ರಗಳಿಂದ ಗುರುತಿಸಲ್ಪಡುವುದು. ಭಾರತವರ್ಷದಲ್ಲಿ ಆಯಾ ಗೋತ್ರಗಳ ಮೂಲಕ ವಾಗಿ ಅವಿಚ್ಛಿನ್ನಪರಂಪರೆಯು ಬಂದುದು ಇದರಿಂದ ಸ್ಪಷ್ಟವಾಗುವುದು. ದುರ್ವಿವಾಹದಿಂದಲೂ, ಅಸವರ್ಣವಿವಾಹದಿಂದಲೂ ಬ್ರಾಹ್ಮಣರಲ್ಲಿ ಇರುವ ಈ ಋಷಿ ಪರಂಪರೆಯು ನಷ್ಟವಾಗುವುದು. ಈ ವರ್ಣಸಂಕರವು 'ಸಂಕರೋ ನರಕಾಯೈವ' ಎಂಬಂತೆ ನರಕಕ್ಕೇ ಒಂದು ಕಾರಣವಲ್ಲದೆ ಇದರಿಂದ ಮತ್ತಾವ ಪ್ರಯೋಜನವೂ ಕಂಡುಬರುವುದಿಲ್ಲ. ಇದರಿಂದ ಇನ್ನೊಂದು ದುಷ್ಟ ಪ್ರಜೆಯು ಲಾಭವಾಗುವುದಲ್ಲದೆ ಮತ್ತೇನು ?

ಇತರೇಷು ತು ಶಿಷ್ಟೇಷು ನೃಶಂಸಾನೃತವಾದಿನಃ ।
ಜಾಯಂತೇ ದುರ್ವಿವಾಹೇಷು ಬ್ರಹ್ಮ ಧರ್ಮದ್ವಿಷಃ ಸುತಾಃ ॥
(ಮನು. ೩–೪೧)

ಶಾಸ್ತ್ರೋಕ್ತ ವಿವಾಹಗಳನ್ನು ಬಿಟ್ಟು ಉಳಿದ ನಿಂದ್ಯ ವಿವಾಹಗಳಿಂದ ಪ್ರಜೆಯು ಕ್ರೂರವಾಗಿಯೂ, ಅನೃತವಾದಿಯಾಗಿಯೂ, ವೇದವಿದ್ವೇಷ ಶೀಲವಾಗಿಯೂ, ಧರ್ಮದ್ವೇಷಿಯಾಗಿಯೂ ಆಗುವುದು.

ಹೀನಜಾತಿ ಸ್ತ್ರೀಯಂ ಮೋಹಾದುದ್ವಹಂ ತೋದ್ವಿಜಾತಯಃ ।
ಕುಲಾನ್ಯೇವ ನಯಂತ್ಯಾಶು ಸ ಸಂತಾನಾನಿ ಶೂದ್ರತಾಂ॥ (ಮನು. ೩–೧೫)

ಹೀನಜಾತಿಯ ಸ್ತ್ರೀಯು ಸಂಗಡ ಮೋಹದಿಂದ ವಿವಾಹಮಾಡಿ ಕೊಂಡರೆ ಆ ಎಲ್ಲಾ ಕುಲಗಳೂ ಆ ಎಲ್ಲಾ ಸಂತತಿಗಳಿಂದ ಕೂಡಿಕೊಂಡು ಶೂದ್ರತ್ವವನ್ನು ಹೊಂದುವುವು.

ದೈವ ಪಿತ್ರ್ಯಾತಿಥೇಯಾನೀ ತತ್ಪ್ರಧಾನಾನಿ ಯಸ್ಯ ತು ।
ನಾಶ್ನಂತಿ ಪಿತೃದೇವಾಸ್ತನ್ನ ಚ ಸ್ವರ್ಗಂ ಸ ಗಚ್ಛತಿ ॥ (ಮನು. ೩–೨೮)

ಹೀನಜಾತಿಯ ಸ್ತ್ರೀ ಸಂಗಡ ಲಗ್ನನಾದವನಿಗೆ ದೇವ, ಪಿತೃ, ಅತಿಥಿ ಪ್ರಧಾನವಾಗಿರುವಂಥ ಕಾರ್ಯಗಳನ್ನು ನಿರ್ವಹಿಸಲು ಸಾಧ್ಯವಾಗದು. ಅವನ ಕೈಯಿಂದ ಪ್ರಾಪ್ತವಾದ ಹವ್ಯ-ಕವ್ಯಗಳನ್ನು ದೇವ-ಪಿತೃಗಳು ಸ್ವೀಕರಿಸರು. ಅತಿಥಿಗಳೂ, ಇಷ್ಟಬಂಧುಗಳೂ ಸಹ ಅವನ ಮನೆಗೆ

ಬಾರರು. ಹೀಗೆ ಎಲ್ಲಾ ಸತ್ಕ್ರಿಯೆಗಳ ಲೋಪನಾಗಿಯೂ, ನಿಂದಿತನಾಗಿಯೂ, ಪತಿತನಾಗಿಯೂ ಆತನು ಸ್ವರ್ಗವನ್ನು ಹೊಂದನು. ನರಕದಲ್ಲಿ ಬೀಳುವನು.

ಈ ಸಂಕರದ ಪ್ರಜೆಯು ತನ್ನ ಗೋತ್ರವು ಯಾವುದೆಂದು ಹೇಳುವುದು? ಯಾವ ಪಿತೃಗಳಿಗೆ ಪಿಂಡ ಹಾಕುವುದು? ಯಾವ ಕುಲವೆಂದು ಅಭಿಮಾನ ಪಡುವುದು? ಇದಕ್ಕೆ ಇಹಪರದಲ್ಲಿ ಯಾವ ಸ್ಥಾನವಿರುವುದು? ಒಂದು ಗೋತ್ರದವರು ಒಂದು ಕುಟುಂಬದವರಂತೆ ಇರುವರು. ಒಂದು ಕುಟುಂಬದಲ್ಲಿ ಇರುವ ಅಣ್ಣತಮ್ಮಂದಿರಂತೆ ಅಥವಾ ಅಕ್ಕತಂಗಿಯರಂತೆ ಆಯಾ ಗೋತ್ರದವರು ಆಗುವುರೆಂದಾದರೆ ಈ ಸಗೋತ್ರವಿವಾಹದಿಂದ ಅಣ್ಣತಂಗಿಯರ ಲಗ್ನಮಾಡಿಸುವಷ್ಟು ಪಶುವೃತ್ತಿಯನ್ನು ಕೈಕೊಳ್ಳುವುದಲ್ಲದೆ ಇದರಲ್ಲಿ ಮನುಷ್ಯತ್ವದ ಯಾವ ಉಚ್ಚಭಾವನೆಯೂ ಕಂಡುಬರುವುದಿಲ್ಲವೆಂದು ಈ ಪರಂಪರೆಯ ವಿಚಾರವಾಗಿ ಕಂಡುಬರುವುದು. ವೇನ ರಾಜನ ಕಾಲದಿಂದ ಶೂದ್ರರಲ್ಲಿ ಈವರೆವಿಗೂ ಅನ್ಯವರ್ಣದಲ್ಲಿ ಇಂಥಾ ಸಂಕರವು ಕೆಲಮಟ್ಟಿಗೆ ತೋರಿಬಂದರೂ ಬ್ರಾಹ್ಮಣರಲ್ಲಿ ಅದು ಇರಲಿಲ್ಲ. ಆ ವೇನ ರಾಜನ ಅವಶಿಷ್ಟ ಪರಮಾಣುಗಳು ಚೇತರಿಸಿಕೊಂಡು ಈಗಿನ ರಾಜ್ಯಸೂತ್ರಧಾರಿಗಳಲ್ಲಿ ಹೊಕ್ಕು ಉಳಿದ ಬ್ರಾಹ್ಮಣ ಜಾತಿಯನ್ನೂ ಭ್ರಷ್ಟಮಾಡಿ ತಮ್ಮ ಸಂಕಲ್ಪವನ್ನು ಪೂರ್ಣಪಡಿಸಲು ಪ್ರಯತ್ನಿಸುತ್ತಿವೆ ಎಂಬುದಾಗಿ ಯಾರಾದರೂ ಒಂದು ವಿಧಾನ ಮಾಡಿದರೆ ಅದರ ವಿರುದ್ಧವಾಗಿ ಹೇಳಲು ಯಾರಿಗೆ ತಾನೆ ಸಾಧ್ಯವಾಗುವುದು?

## ಆರ್ಯರ ವಿಭಾಗ ಪದ್ಧತಿ

ಭಾರತವರ್ಷದ ವೇದೋಕ್ತ ದೇವಪಿತೃಕಾರ್ಯಾದಿಗಳನ್ನು ನಡೆಯಿಸಿಕೊಂಡುಬಂದ ಅವಿಚ್ಛಿನ್ನಪರಂಪರೆಯಲ್ಲಿ ಪಿತ್ರಾರ್ಜಿತದ ಅಧಿಕಾರವು ಗಂಡುಮಕ್ಕಳಿಗೇ ಇರುವುದು. ಗಂಡುಮಕ್ಕಳಿಂದಲೇ ಪರಂಪರೆಯು ನೆಲೆ ನಿಂತು ಮುಂದೆ ಸಾಗುವುದು. ಗಂಡುಮಕ್ಕಳು ಹೆಣ್ಣುಮಕ್ಕಳಂತೆ ಪರಗೋತ್ರಕ್ಕೆ ಸೇರದೆ ಆ ಗೋತ್ರದಲ್ಲಿಯೇ ಇರುವುದರಿಂದಲೂ ಇವರಿಗೇ ದೇವಪಿತೃ ಕಾರ್ಯಗಳನ್ನು ನಡೆಯಿಸುವ ಮತ್ತು ವಂಶವೃದ್ಧಿಯ

ಅಧಿಕಾರವಿರುವುದರಿಂದಲೂ ಇವರಿಗೆ ಪಿತ್ರಾರ್ಜಿತ ಆಸ್ತಿಯು ಅಧಿಕಾರ ವಿರುವುದು ಸಹಜವಾಯಿತು. **ಪುನ್ನಾಮ್ನೋ ನರಕಾತ್ತ್ರಾ-ಯತ ಇತಿ ಪುತ್ರಃ।** ಪಿತೃಗಳ ಉದ್ಧಾರವು ಆಯಾ ವಂಶದ ಗಂಡುಮಕ್ಕಳಿಂದಲೇ ಆಗುವುದು. ಹೆಣ್ಣುಮಕ್ಕಳಿಂದಲ್ಲವೆಂಬುದು 'ಪುತ್ರಃ' ಎಂಬ ಶಬ್ದದ ಉತ್ಪತ್ತಿಯಿಂದಲೇ ಗೊತ್ತಾಗುವುದು. ಉತ್ತರಕ್ರಿಯೆಯ ಅಧಿಕಾರವು ಗಂಡು ಮಕ್ಕಳಿಗೇ ಇರುವುದು. ಈ ಎಲ್ಲದರ ವಿಚಾರ ಮಾಡುವುದರಲ್ಲಿ ಮೊದಲಿನಿಂದ ನಡೆದುಕೊಂಡು ಬಂದ ಗಂಡುಮಕ್ಕಳಿಗೇ ಆಸ್ತಿವಿಭಾಗ ಮಾಡಿಕೊಡುವ ಪದ್ಧತಿಯು ಶಾಸ್ತ್ರೀಯ ಮತ್ತು ಸಯುಕ್ತಿಕವಾದುದೆಂದು ಯಾರಿಗೆ ತಾನೆ ಕಂಡುಬರಲಿಕ್ಕಿಲ್ಲ? ಆಯಾ ಧರ್ಮದ ಪೂರ್ವಪರಂಪರೆಯನ್ನು ಪರಾಮರ್ಶಿಸಿ ವಿದ್ವಾಂಸರೊಡನೆ ಅವುಗಳ ಸಾಧಕ-ಬಾಧಕಗಳ ಬಗ್ಗೆ ಸಂಪೂರ್ಣವಾಗಿ ವಿಚಾರಮಾಡಿ ಧರ್ಮಕ್ಕೆ ವಿರೋಧ ಬಾರದಂತೆ, ಸಮಾಜದ ಅಭ್ಯುದಯ ನಿಃಶ್ರೇಯಸ್ಸುಗಳಿಗೆ ಅನುಕೂಲವಾದ ಶಾಸನ ನಿಯಮಗಳನ್ನು ಮಾಡತಕ್ಕದ್ದು. ಇದಲ್ಲದೆ ಅವಿಚಾರದಿಂದ ಕಾಯಿದೆಗಳನ್ನು ಮಾಡಿ ವಿಶ್ವಾದರಣೀಯ ಸಂಸ್ಕೃತಿಯನ್ನು ನಷ್ಟಪಡಿಸುವಲ್ಲಿ ಸಂಸ್ಕೃತಿಯ ದ್ರೋಹವೊಂದೇ ಅಲ್ಲ, ಅಖಿಲ ವಿಶ್ವದ ಆದರ್ಶವನ್ನೇ ಕಳಿಸಿ ವಿಶ್ವದ್ರೋಹಕ್ಕೆ ಪಾತ್ರರಾಗಬೇಕಾಗಿ ಬರುವುದೆಂದು ವಿಚಾರ ಮಾಡುವಲ್ಲಿ ಯಾರಿಗೂ ತಿಳಿದುಬರುವಂತಿದೆ.

# ಭಾರತದ ಸದ್ಯಃ ಪರಿಸ್ಥಿತಿಯ ಕೆಲವು ವಿಚಾರಗಳು

## ಆರ್ಯರ ವಿವಾಹ ಪದ್ಧತಿ

ಕನ್ಯಾಂ ಕನಕಸಂಪನ್ನಾಂ ಸರ್ವಾಭರಣಭೂಷಿತಾಂ ।
ದಾಸ್ಯಾಮಿ ವಿಷ್ಣುವೇ ತುಭ್ಯಂ ಬ್ರಹ್ಮಲೋಕ ಜಿಗೀಷಯಾ ॥

ವಿಶ್ವಂಭರಾ ಸರ್ವಭೂತಾಃ ಸಾಕ್ಷಿಣಃ ಸರ್ವದೇವತಾಃ ।
ಇಮಾಂ ಕನ್ಯಾಂ ಪ್ರದಾಸ್ಯಾಮಿ ಪಿತೄಣಾಂ ತಾರಣಾಯ ಚ ॥

(ವಿವಾಹ ಪ್ರಕರಣಂ)

ಈ ಶ್ಲೋಕಗಳಲ್ಲಿ ಆರ್ಯರ ವಿವಾಹ ವಿಧಿಯಲ್ಲಿ ಇರುವಂಥ ಉಚ್ಚ ಭಾವನೆಯು ಹೊರಸೂಸುವುದು. ಬ್ರಹ್ಮಲೋಕವನ್ನು ಜಯಿಸುವುದಕ್ಕಾಗಿ (ಮೋಕ್ಷಪ್ರಾಪ್ತಿಗಾಗಿ) ವಿಷ್ಣುರೂಪನಾಗಿರತಕ್ಕಂಥ ನಿನಗೆ ಕನ್ಯಾದಾನ ಮಾಡುತ್ತೇನೆ.

ಇವಳು ಸರ್ವಾಭರಣಭೂಷಿತಳಾಗಿಯೂ ಮತ್ತು ಸುಲಕ್ಷಣವಾಗಿಯೂ ಇರುವಳು. ಈ ಪ್ರಸಂಗದಲ್ಲಿ ನಿನಗೆ ನಾನು ನನ್ನ ಕನ್ಯೆಯನ್ನು ಕೊಟ್ಟದ್ದಕ್ಕೆ ಎಲ್ಲಾ ಪಂಚಭೂತಗಳೂ, ವಿಶ್ವದಲ್ಲಿರುವ ಎಲ್ಲಾ ದೇವತೆಗಳೂ ಸಾಕ್ಷಿಯಾಗಿರುವರು. ಪಿತೃಗಳ ಉದ್ಧಾರಕ್ಕಾಗಿ ಕನ್ಯಾದಾನವನ್ನು ಮಾಡುತ್ತೇನೆ—ಕನ್ಯಾದಾನದಲ್ಲಿ ತಂದೆಯ ಮೋಕ್ಷದ ಮತ್ತು ಪಿತೃಗಳ ಉದ್ಧಾರದ ಹೇತುಗಳು ಇಲ್ಲಿ ಸ್ಪಷ್ಟವಾಗುವುವು. 'ದಾಸ್ಯಾಮಿ ವಿಷ್ಣವೇ ತುಭ್ಯಂ ಶ್ರೀರೂಪೆ.ಷಾ ಮಯಾದತ್ತಾ' ಈ ಪದಗಳಿಂದ ಆರ್ಯರ ಕನ್ಯಾಜಾಮಾತರಲ್ಲಿ (ವಧೂ-ವರರಲ್ಲಿ) ಲಕ್ಷ್ಮೀನಾರಾಯಣರ ಉಚ್ಚಭಾವನೆಯು ತೋರಿಬರುವುದು. ಆರ್ಯಸಂಸ್ಕೃತಿಯನ್ನು ಬಿಟ್ಟು ಮಿಕ್ಕ ಯಾವ ಸಂಸ್ಕೃತಿಯಲ್ಲಿ ಇಂತಹ ಉಚ್ಚಭಾವನೆ ಕಂಡುಬರುವುದು? ಆರ್ಯರು ಮೂಲಗ್ರಾಹಿಯಾದ ತತ್ವಜ್ಞಾನವನ್ನು ಬಿಟ್ಟು ಮತ್ತು ಮೋಕ್ಷದ ಹೇತುವನ್ನು ಬಿಟ್ಟು ಯಾವುದನ್ನೂ ಅನುಷ್ಠಿಸುವುದಿಲ್ಲ ಎಂಬುವ ಆರ್ಯರ ಶೀಲವು ಇದರಿಂದ ವ್ಯಕ್ತವಾಗುವುದು.

ಅವರ ಸಂಸ್ಕೃತಿಯಲ್ಲಿ ಇಂತಹ ಉಚ್ಚಭಾವನೆ ಇರುವುದರಿಂದಲೇ ಅವರನ್ನು ಆರ್ಯರೆಂದು ಶ್ರೇಷ್ಠರೆಂಬ ಅರ್ಥದಲ್ಲಿ ಗೌರವಿಸಿ ಸಂಬೋಧಿಸು

ವರು. ಪ್ರಕೃತಿ–ಪುರುಷಾತ್ಮಕರಾಗಿ ವಧೂವರರು ಇರುವರೆಂಬ ತಾತ್ವಿಕ ಭಾವನೆ ವಿಶ್ವವ್ಯಾಪಿ ಅಲ್ಲವೆ ಇಂತಹ ತಾತ್ವಿಕ ವಿಚಾರ ಸರಣಿಯಿಂದಲೇ ಮತ್ತು ತಾತ್ವಿಕ ಆಚರಣದಿಂದಲೇ ಅಖಿಲ ವಿಶ್ವಕ್ಕೇ ಮೋಕ್ಷಮಾರ್ಗ ದರ್ಶಕರಾಗಿ ಆರ್ಯರು ಜಗದ್ಗುರುಗಳಾಗಿರುವರು. ಇವರು ಆಚರಿಸುವ ಧರ್ಮವೂ ಕೂಡ ಅಖಿಲ ಜೀವಿಗಳ ಮೋಕ್ಷಕ್ಕೆ ಹೇತುಭೂತವಾದ.ದರಿಂದ ಈ ವೈದಿಕ ಆರ್ಯ ಸನಾತನ ಧರ್ಮಕ್ಕೆ ವಿಶ್ವಧರ್ಮವೆನ್ನುವರು. ವಿವಾಹದಲ್ಲಿ ಜಗತ್ತಿಗೆ ತುಚ್ಛವಾದ ಕಾಮುಕದೃಷ್ಟಿ ತೋರಿದರೆ, ಆರ್ಯರಿಗೆ ಇದರಲ್ಲಿ ಪ್ರಕೃತಿ–ಪುರುಷರ ಐಕ್ಯರೂಪವಾದ ಮೋಕ್ಷವೇ ತೋರುವುದು. 'ಕನ್ಯೇ ಮಮಾಗ್ರತೋ ಭೂಯಾಃ ದಾನಾನ್ಮೋಕ್ಷಮವಾಪ್ನುಯಾಂ' ಆನಂದಘನವಾದ ಬ್ರಹ್ಮಸ್ಥಿತಿಯು ಸಾಕ್ಷಾತ್ಕಾರವಾಗುವುದು. "ಬ್ರಹ್ಮ ವಿಶ್ವಮಿದಂ ಜಗತ್ । ಬ್ರಹ್ಮ ಬ್ರಾಹ್ಮಣ ಆತ್ಮನಾ । ಅಂತರಸ್ಮಿ ನ್ನಿಮೇಲೋಕಾಃ । ಅಂತರ್ವಿಶ್ವಮಿದಂ ಜಗತ್" (ತೈ. ಯಜು. ಬ್ರಾ. ೨–೮–೭). ಈ ಎಲ್ಲಾ ಜಗತ್ತು ಬ್ರಹ್ಮರೂಪವೇ ಆಗಿರುವುದು. ಬ್ರಾಹ್ಮಣನು ಸ್ವಯಂ ಬ್ರಹ್ಮವೇ ಸರಿ. ಅವನ ಅಂತರಂಗದಲ್ಲಿಯೇ ಈ ಎಲ್ಲಾ ಲೋಕಗಳೂ, ಈ ಎಲ್ಲಾ ವಿಶ್ವವೂ ನೆಲೆಯಾಗಿರುವುದು. 'ಅರ್ಧೋವಾ ಏಷ ಆತ್ಮನೋ ಯತ್ಪತ್ನೀ' (ತೈ. ಸಂ.). ಆರ್ಯ ಪತಿಗೂ ಪತ್ನಿಯಲ್ಲಿ ತನ್ನ ಸಚ್ಚಿದಾನಂದಸ್ವರೂಪದ ಇದೊಂದು ಶೇಷಾರ್ಧವೇ ಇರುವುದೆಂಬ ನಿಶ್ಚಯವಿರುವುದು. ಆರ್ಯರಿಗೆ ಪತಿಪತ್ನಿಯರಲ್ಲಿ ಸಚ್ಚಿದಾನಂದ ಸ್ವರೂಪದ ಲಕ್ಷ್ಯವೇ ಇರುವುದು.

## ಸತಿ, ಪತಿ ಮತ್ತು ಸಂತತಿಯಲ್ಲಿ ಆರ್ಯರ ದೃಷ್ಟಿ

ಅಂಗಾದಂಗಾತ್ಸಂಭವಸಿ ಹೃದಯಾದಧಿ ಜಾಯಸೇ ।
ಆತ್ಮಾವೈ ಪುತ್ರನಾಮಾಸಿ ಸಜೀವ ಶರದಃ ಶತಂ ॥ (ಏಕಾಗ್ನಿಕಾಂಡೆ)

ನನ್ನ ಅಂಗಾಂಗಗಳಿಂದಲೂ, ಹೃದಯದಿಂದಲೂ, ಸಚ್ಚಿದಾನಂದ ಸ್ವರೂಪದ ಅರಿವಿನಿಂದಲೂ ಉಂಟಾದ ನೀನು ನನ್ನ ಆ ಸಚ್ಚಿದಾನಂದ ಸ್ವರೂಪವಾಗಿಯೇ ಇರುವೆ. ಅಂಥ ನೀನು ಸ್ವಪರ ಉದ್ಧಾರಕವಾದಂಥ ಧರ್ಮಗಳನ್ನೆಸಗುತ್ತ ನೂರಾರು ವರ್ಷಗಳವರೆಗೆ ಬಾಳು. ಇಲ್ಲಿ

"ಕುರ್ವನ್ನೇ ವೇಹಕರ್ಮಾಣಿ ಜಿ ಜೀವಿಷೇಚ್ಛತಂ ಸಮಾಃ" ಈ ಈಶಾವಾಸ್ಯ ಮಂತ್ರವು ನೆನಪಿಗೆ ಬರುವುದು. ಆರ್ಯರಿಗೆ ತಮ್ಮ ಪುತ್ರರಲ್ಲಿಯೂ ತಮ್ಮ ಪರಮಾತ್ಮಸ್ವರೂಪದ ಲಕ್ಷ್ಯವೇ ತೋರಿಬರು ವುದು. ಇಂತಹ ಉಚ್ಚ ಸಂಸ್ಕೃತಿಯು ಜಗದ್ವಂದ್ಯ ಏಕೆತಾನೆ ಆಗಲಿಕ್ಕಿಲ್ಲ? ಇಂತಹ ಸಂಸ್ಕೃತಿಯನ್ನು ಯಾವ ರೂಪದಿಂದಲೂ ಹೋಗಲಾಡಿಸುವ ಪ್ರಯತ್ನವುಳ್ಳ ಜನರು ವಿಶ್ವದ್ರೋಹಿಗಳು ಏಕೆತಾನೆ ಆಗಲಿಕ್ಕಿಲ್ಲ?

> ಯಸ್ಮಿನ್ನೃಣಂ ಸಂನಯತಿ ಯೇನ ಚಾನಂತ್ಯಮಶ್ನುತೇ ।
> ಸ ಏವ ಧರ್ಮಜಃ ಪುತ್ರಃ ಕಾಮಜಾನಿತರಾನ್ವಿದುಃ (ಮನು. ೯-೧೦೭)
>
> ಜ್ಯೇಷ್ಠೇನ ಜಾತಮಾತ್ರೇಣ ಪುತ್ರೀ ಭವತಿ ಮಾನವಃ ।
> ಪಿತೄಣಾಮನೃಣಶ್ಚೈವ ಸತಸ್ಮಾತ್ಸರ್ವಮರ್ಹತಿ ॥ (ಮನು. ೯-೧೦೬)

ಯಾವಾತನ ಮೂಲಕ ಪಿತೃಋಣದಿಂದ ಮುಕ್ತನಾಗುವನೋ, ಯಾವಾತನಿಂದ ಮೋಕ್ಷದ ಪ್ರಾಪ್ತಿಯಾಗುವುದೋ ಅವನೇ ಧರ್ಮ ಪುತ್ರನು. ಆತನೇ ಎಲ್ಲವನ್ನು ಪಡೆಯಲು ಅರ್ಹನು ಎಂತಲೂ, ಮೋಕ್ಷ ಕ್ಕಾಗಿ ಮತ್ತು ಪಿತೃಋಣದ ನಿವೃತ್ತಿಗಾಗಿಯೇ ಪುತ್ರನನ್ನು ಪಡೆಯ ಬೇಕೆಂತಲೂ, ಈ ದೃಷ್ಟಿಯ ಹೊರತಾಗಿ ಪಡೆದ ಪುತ್ರರು ಕಾಮಜರೆಂದೂ ಇದರಿಂದ ವ್ಯಕ್ತವಾಗುವುದು. 'ಪ್ರಜಾತಂತುಂ ಮಾ ವ್ಯವಚ್ಛೇತ್ಸೀ' ಪ್ರಜಾತಂತುವನ್ನು ಖಂಡಿಸಬೇಡವೆಂಬುದರ ಉದ್ದೇಶವು ಹೀಗಿರುವುದು.

> ನಾನ್ಯೋತ್ಪನ್ನಾ ಪ್ರಜಾಽಸ್ತೀಹ ನ ಚಾಪ್ಯನ್ಯ ಪರಿಗ್ರಹೇ ।
> ನ ದ್ವಿತೀಯಶ್ಚ ಸಾಧ್ವೀನಾಂ ಕ್ವಚಿದ್ಭರ್ತೋಪದಿಶ್ಯತೇ ॥ (ಮನು. ೫-೧೬೨)

ಪತಿಯ ಹೊರತಾಗಿ ಪರಪುರುಷರಿಂದ ಪಡೆದ ಪ್ರಜೆಯು ಪ್ರಜೆಯಲ್ಲ; ಅಂತೆಯೇ ತನ್ನ ಅರ್ಧಾಂಗಿಯಾದ ಧರ್ಮಪತ್ನಿಯ ಹೊರತು ಪರಸ್ತ್ರೀ ಯಿಂದ ಪಡೆದ ಪ್ರಜೆಯು ಪ್ರಜೆಯಾಗದು. ಯಾವ ದೃಷ್ಟಿಯಿಂದಲೂ ಎಲ್ಲಿಯೂ ಸಾಧ್ವೀ ಸ್ತ್ರೀಗೆ ಬೇರೆ ಪತಿಯ ಪರಿಗ್ರಹ ಹೇಳಲಿಲ್ಲ.

## ಋಣತ್ರಯ

ಬ್ರಹ್ಮಚರ್ಯೇಣ ಋಷಿಭ್ಯೋ ಯಜ್ಞೇನ ದೇವೇಭ್ಯಃ ಪ್ರಜಯಾ ಪಿತೃಭ್ಯಃ ಏಷ ವಾ ಅನೃಣಃ (ತೈ. ಸಂ.). ಪುತ್ರನು

ಬ್ರಹ್ಮಚರ್ಯದ ಮೂಲಕ ಋಷಿಋಣದಿಂದಲೂ, ಯಜ್ಞಾದಿ ನಿಷ್ಕಾಮ ಉಪಾಸನೆಯ ಮೂಲಕ ದೇವಋಣದಿಂದಲೂ, ಅಕಾಮ ಪ್ರಜೋತ್ಪಾದನೆಯ ಮೂಲಕ ಪಿತೃಋಣದಿಂದಲೂ ಮುಕ್ತನಾಗುವನೆಂದೂ, 'ದೇವ ಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಮ್' (ತೈ. ಶೀಕ್ಷಾ.) ದೇವ ಪಿತೃಕಾರ್ಯಗಳನ್ನು ಬಿಡಬೇಡ ಎಂದು ಪುತ್ರನಿಗೆ ಹೇಳಿರುವುದರಿಂದಲೂ, ಅಂತ್ಯಸಂಸ್ಕಾರದ ಅಧಿಕಾರವು ಪುತ್ರನಿಗೆ ಇರುವುದರಿಂದಲೂ, ಪುತ್ರನಿಗೆ ಉತ್ತರಾಧಿಕಾರಿ ಎಂದು ಶಾಸ್ತ್ರವು ವಿಧಿಸಿರುವುದು. 'ತಸ್ಮಾತ್ ಸ್ತ್ರಿಯಃ ನಿರಿಂದ್ರಿಯಾ ಅದಾಯಾದೀಃ' ಸ್ತ್ರೀ ಸಂತತಿಯು ಪಿತೃಸಂಪತ್ತಿಗೆ ಅಧಿಕಾರಿಯಾಗದೆಂದು ಶ್ರುತಿಯ ಹೇಳಿಕೆಯೂ ಇದೆ. ಉತ್ತರಕ್ರಿಯಾದಿಗಳನ್ನೂ, ವಂಶವೃದ್ಧಿಯನ್ನೂ, ಕುಲಧರ್ಮ ಕುಲಾಚಾರವನ್ನೂ ನಡೆಸುವ ಸಂತತಿಗೆ ಪಾಲುಮಾಡಿ ಕೊಟ್ಟಂತೆ ಹೆಣ್ಣುಸಂತತಿಗೂ ಕೊಡುವಲ್ಲಿ ದುಡಿಯುವವರಿಗೂ, ದುಡಿಯದಿದ್ದವರಿಗೂ ಒಂದೇ ರೀತಿ ಸಂಬಳವನ್ನು ಕೊಟ್ಟ ಲೆಕ್ಕವಾಗುವುದು. ಬಡ ಕುಟುಂಬಗಳಲ್ಲಿ ಹೆಣ್ಣುಮಕ್ಕಳಿಗೆ ಪಾಲು ಕೊಟ್ಟಮೇಲೆ ಪಿತೃಗಳ ಉತ್ತರಕ್ರಿಯೆಗೂ ಸಾಕಾಗುವಷ್ಟು ದ್ರವ್ಯವು ಉಳಿಯಲಿಕ್ಕಿಲ್ಲ. ಮುಂದೆ ಧರ್ಮಕರ್ಮಗಳನ್ನು ನಡೆಸುವುದೂ ಕಷ್ಟವಾಗುವುದು. ಈ ವಿಧವಾಗಿ ದೇವ ಪಿತೃಕಾರ್ಯಗಳು ನಿಂತೇ ಹೋಗಬಹುದು.

ಸಹೃದಯವಾದ ಆರ್ಯಧರ್ಮಕ್ಕೆ ಸ್ತ್ರೀ ಸಂತತಿಯ ದಾರಿದ್ರ್ಯವು ಹೇಗೆತಾನೆ ಸಹನವಾದೀತು? ಅದರ ದಾರಿದ್ರ್ಯದ ಪರಿಹಾರಕ್ಕಾಗಿ ಅನುಕೂಲವಿದ್ದರೆ ತಾಯಿ ತಂದೆಯವರಿಂದಲೂ, ಅಣ್ಣ ತಮ್ಮಂದಿರಿಂದಲೂ ಆ ದಾರಿದ್ರ್ಯವನ್ನು ಪರಿಹರಿಸಿಯೇ ಪರಿಹರಿಸುವುದು.

ಸಕೃದಂಶೋ ನಿಪತತಿ ಸಕೃತ್ಕನ್ಯಾ ಪ್ರದೀಯತೇ ।
ಸಕೃದಾಹ ದದಾನೀತಿ ತ್ರೀಣ್ಯೇತಾನಿ ಸತಾಂ ಸಕೃತ್ ॥

(ಮನು. ೯-೪೭)

ಆರ್ಯರಲ್ಲಿ ಪಿತ್ರಾರ್ಜಿತ ಧನ ವಿಭಾಗವು ಭ್ರಾತೃಗಳಿಗೆ ಒಂದೇಸಾರಿ ಆಗುವುದು; ಮತ್ತು ಕನ್ಯಾದಾನವೂ ಒಂದೇ ಸಾರಿ ಆಗುವುದು— 'ಕೊಡುತ್ತೇನೆ' ಎಂಬ ಮಾತು ಅಥವಾ ವಚನ ಕೂಡಾ ಒಂದೇ ಸಾರಿ.

ನಡೆಯುವುದು. ಪುನರ್ವಿವಾಹವಾಗುವಲ್ಲಿ ತಂದೆ, ಮಗಳು ಮತ್ತು ವರ ಮೂವರಿಗೂ ವಚನಭಂಗದ ದೋಷವೊದಗಿ ನರಕವಾಗುವುದು.

## ಕನ್ಯಾದಾನ

"ಅಮುಕಗೋತ್ರೋತ್ಪನ್ನೋ ಅಮುಕಶರ್ಮಾಹಂ ಮಮ ಕುಲೋತ್ಪನ್ನಾನಾಂ ಸರ್ವೇಷಾಂ ಅತೀತ ಪಿತೃಣಾಂ ನಿರತಿಶಯ ಬ್ರಹ್ಮಲೋಕಾವ್ಯಾಪ್ತ್ಯಾದಿ ಕನ್ಯಾದಾನ ಕಲ್ಪೋಕ್ತಫಲಾವಾಪ್ತಯೇ ಅನೇನೈವ ವರೇಣಾಸ್ಯಾಂ ಕನ್ಯಾಯಾಮುತ್ಪಾದಯಿಷ್ಯಮಾಣಸಂತತ್ಯಾ ದ್ವಾದಶಾವರಾನ್ದ್ವಾದಶಪರಾನ್ ಪವಿತ್ರೀಕರ್ತುಮಾತ್ಮನಶ್ಚ ಶ್ರೀಲಕ್ಷ್ಮೀನಾರಾಯಣಪ್ರೀತಯೇ, ಅಮುಕಗೋತ್ರೋತ್ಪನ್ನಾಯ ಅಮುಕಪ್ರವರಾನ್ವಿತಾಯ ಅಮುಕಶರ್ಮಣಃ ಪ್ರಪೌತ್ರಾಯಾಮುಮುಕಶರ್ಮಣಃ ಪೌತ್ರಾಯಾಮುಮುಕಶರ್ಮಣಃ ಪುತ್ರಾಯಾಮುಮುಕಶರ್ಮಣೇ ವರಾಯ ಅಮುಕಗೋತ್ರೋತ್ಪನ್ನಾಂ ಅಮುಕಪ್ರವರಾನ್ವಿತಾಮಮುಕಶರ್ಮಣಃ ಪ್ರಪೌತ್ರೀಮಮುಕಶರ್ಮಣಃ ಪೌತ್ರೀಮಮುಕಶರ್ಮಣಃ ಪುತ್ರೀಮಮುಕನಾಮ್ನೀಂ ಕನ್ಯಾಂ ವರಾರ್ಥಿನೀಂ ಶ್ರೀರೂಪಾಂ ಪ್ರಜಾಪತಿ ದೈವತ್ಯಾಂ ಪ್ರಜಾಸುಹೃತ್ಕರ್ಮಭ್ಯಃ ಪ್ರಜೋತ್ಪಾದನಾರ್ಥಂ ತುಭ್ಯಮಹಂ ಸಂಪ್ರದದೇ ಶ್ರೀಯೈ॥"

ಹೀಗೆ "ಸಂಪ್ರದದೇ" ಕೊಡುತ್ತೇನೆ ಎಂಬುದಾಗಿ ಸಂಕಲ್ಪಿಸಿ ತಂದೆಯು ಕನ್ಯಾದಾನವನ್ನು ಮಾಡುವನು. ಇದು ತಂದೆ ಕೊಟ್ಟ ದಾನ ಮತ್ತು ವಚನ ಪುನರ್ವಿವಾಹದಿಂದ ನಷ್ಟವಾಗುವುದು.

"ಧರ್ಮೇಚ ಅರ್ಥೇಚ ಕಾಮೇಚ ನಾತಿಚರಿತವ್ಯಾತ್ವಯೇಯಂ" ಇತಿ ದಾತಾ । "ನಾತಿ ಚರಾಮಿ" ಇತಿ ವರಃ । "ಸಹ ಧರ್ಮಶ್ಚರ್ಯತಾಮ್" ಇತಿ ದಾತಾ । "ಚರಿಷ್ಯಾಮೀತಿ ವರಃ" ತಂದೆಯು ಕನ್ಯಾದಾನವನ್ನು ಮಾಡುವಾಗ ಧರ್ಮಾರ್ಥ ಕಾಮಗಳಲ್ಲಿ ಇವಳನ್ನು ಬಿಟ್ಟು ನೀನು 'ನಾತಿ ಚರಿತವ್ಯ' ಇರಬೇಡವೆಂದೂ, ಇವಳ ಸಮೇತವಾಗಿ ಧರ್ಮವನ್ನು ಆಚರಿಸೆಂದೂ ಹೇಳುವನು. ಧರ್ಮಾರ್ಥ ಕಾಮಗಳಲ್ಲಿ ಇವಳನ್ನು ಬಿಟ್ಟು ನಾನು ಇರುವುದಿಲ್ಲವೆಂದೂ, ಇವಳ ಜೊತೆಗೆ ಧರ್ಮವನ್ನು ಆಚರಿಸುತ್ತೇನೆಂದೂ ವರನು ವಚನ ಕೊಡುವನು.

## ಸಪ್ತಪದಿ

ಪತಿಭಕ್ತಿರತಾ ನಿತ್ಯಂ ಕ್ರೀಡಿಷ್ಯಾಮಿ ತ್ವಯಾ ಸಹ ।
ತ್ವದನ್ಯನ್ನನರಂ ಮಂಸ್ಯೇ ತೃತೀಯೇ ಸಾಬ್ರವೀದಿಯಂ ॥

ಯಜ್ಞೇ ಹೋಮೇ ಚ ದಾನಾದೌ ಭವಿಷ್ಯಾಮಿ ತ್ವಯಾಸಹ ।
ಧರ್ಮಾರ್ಥಕಾಮ ಕಾರ್ಯೇಷು ವಧೂಃ ಷಷ್ಠೇ ಪದೇ ವದೇತ್ ॥

(ಸಪ್ತಪದಿ ಶ್ಲೋಕ)

ಪತಿಭಕ್ತಿಪರಾಯಣಳಾಗಿ ನಿನ್ನ ಸಂಗಡ ರಮಮಾಣಳಾಗುತ್ತೇನೆ. ನಿನ್ನ ಹೊರತು ಅನ್ಯ ಪುರುಷನನ್ನು ಮನಸ್ಸಿನಿಂದಲೂ ಭಾವಿಸಲಿಕ್ಕಿಲ್ಲ. ಯಜ್ಞ, ಹೋಮ, ದಾನಾದಿಗಳಲ್ಲಿಯೂ, ಧರ್ಮಾರ್ಥ ಕಾಮಕಾರ್ಯಗಳ ಲ್ಲಿಯೂ ನಾನು ನಿನ್ನ ಸಹಧರ್ಮಚಾರಿಣಿಯಾಗಿರುತ್ತೇನೆ.

ಆರ್ತೇ ಆರ್ತಾ ಭವಿಷ್ಯಾಮಿ ಸುಖದುಃಖ ವಿಭಾಗಿನೀ ।
ತವಾಜ್ಞಾಂ ಪಾಲಯಿಷ್ಯಾಮಿ ಪಂಚಮೇ ಸಾ ಪದೇ ವದೇತ್ ॥

ನಿನ್ನ ಕಷ್ಟಕಾಲದಲ್ಲಿ ನೀನು ಆರ್ತನಾದರೆ ನಾನೂ ಅಷ್ಟೇ ಆರ್ತ ಳಾಗುವೆನು; ನಿನ್ನ ಸುಖದುಃಖಗಳ ಕಾಲದಲ್ಲಿ ನಾನೂ ನಿನ್ನ ಆ ಸುಖ ದುಃಖದ ಸಮಭಾಗಿಯಾಗುವೆನು; ನಿನ್ನ ಆಜ್ಞೆಯನ್ನು ಪರಿಪಾಲಿಸುವೆನು ಎಂಬುದಾಗಿ ವಧುವು ವರನಿಗೆ ವಚನವನ್ನು ನೀಡುವಳು. ಹೀಗೆ

ಅತ್ರಾಂಶೇ ಸಾಕ್ಷಿಣೋ ದೇವಾಃ ಮನೋಭಾವ ಪ್ರಬೋಧಿನಃ ।
ವಂಚನಂ ನ ಕರಿಷ್ಯಾಮಿ ಸಪ್ತಮೇ ಸಾ ಪದೇ ವದೇತ್ ॥

'ಈ ಭಾಷೆಗೆ ಮನೋಭಾವವನ್ನು ಪ್ರೇರಿಸತಕ್ಕ ದೇವತೆಗಳೇ ಸಾಕ್ಷಿ ಇರುವರು—ನಾನು ಸರ್ವಥಾ ವಂಚನೆ ಮಾಡಲಿಕ್ಕಿಲ್ಲ' ಎಂಬುದಾಗಿ ವಧುವು ವರನಿಗೆ ವಚನವನ್ನು ಕೊಡುವಳು. ಹೀಗೆ ಮೂರು ಜನರೂ ಒಂದು ವಿವಾಹದಲ್ಲಿ ವಚನಬದ್ಧರಾಗುವರು. ಪುನರ್ವಿವಾಹದಿಂದ ಈ ಮೂರು ಜನರ ವಚನವೂ ಭಂಗವಾಗುವುದು. ಸಪ್ತಪದಿಯಲ್ಲಿ ಹೇಳು ವಂಥ ಏಳು ಶ್ಲೋಕಗಳಿವು; ಉಳಿದ ಮೂರು ಶ್ಲೋಕಗಳು ಹೀಗಿರುವುವು:

ಧನಂ ಧಾನ್ಯಂ ಚ ಮಿಷ್ಟಾನ್ನಂ ವ್ಯಂಜನಾದ್ಯಂ ಚ ಯದ್ಗೃಹೇ ।
ಮದಧೀನಂ ಚ ಕರ್ತವ್ಯಂ ವಧೂರಾದ್ಯೇ ಪದೇ ವದೇತ್ ॥

ಕುಟುಂಬಂ ರಕ್ಷಯಿಷ್ಯಾಮಿ ಸದಾ ತೇ ಮಂಜುಭಾಷಿಣೀ ।
ದುಃಖೇ ಧೀರಾ ಸುಖೇಹೃಷ್ಟಾ ದ್ವಿತೀಯೇ ಸಾಬ್ರವೀದ್ವಚಃ ॥

ಲಾಲಯಾಮಿ ಚ ಕೇಶಾಂತಂ ಗಂಧಮಾಲ್ಯಾನುಲೇಪನೈಃ ।
ಕಾಂಚನೈರ್ಭೂಷಣೈಸ್ತುಭ್ಯಂ ತುರೀಯೇ ಸಾ ಪದೇ ವದೇತ್ ॥

ಧನ ಧಾನ್ಯ, ಮಿಷ್ಟಾನ್ನ, ಉಪ್ಪಿನಕಾಯಿ ಮುಂತಾದ ನಂಜಿಕೊಳ್ಳುವ ಪದಾರ್ಥಗಳು ಮುಂತಾದ ಯಾವುದೊಂದು ಮನೆಯಲ್ಲಿದ್ದದ್ದು ನನ್ನ ಅಧೀನವಿದ್ದರೆ ಅದನ್ನು ವ್ಯವಸ್ಥೆಯಿಂದಿಟ್ಟು ಕಾಲ ಕಾಲದಲ್ಲಿ ನಿನ್ನ ಆಜ್ಞೆಯ ಪ್ರಕಾರ ಅವುಗಳ ಯೋಗ್ಯವಿತರಣೆಯನ್ನು ಮಾಡುವೆನು. ಆಯವ್ಯಯಗಳನ್ನು ಸಮನಾಗಿ ಆಲೋಚಿಸಿ ಅತ್ಯತಿ ಅತಿಮಿತಿ ಎರಡನ್ನೂ ಇಟ್ಟುಕೊಳ್ಳದೆ ಕಾಲಪ್ರಸಂಗಾನುಸಾರವಾಗಿ ಜಾಣತನದಿಂದ ನಡೆದುಕೊಳ್ಳುವೆನು.

ನಾನು ಯಾವಾಗಲೂ ಮಧುರಭಾಷಿಣಿಯಾಗಿದ್ದು ಕುಟುಂಬದ ರಕ್ಷಣೆಯನ್ನು ಮಾಡುವೆನು. ಸಂಸಾರದಲ್ಲಿ ಒದಗುವ ದುಃಖದಲ್ಲಿ ಧೀರಳಾಗಿಯೂ, ಸುಖದಲ್ಲಿ ಸಂತುಷ್ಟಳಾಗಿಯೂ ನಾನು ಗೃಹಕೃತ್ಯದಲ್ಲಿ ಒಳ್ಳೆ ದಕ್ಷತೆಯಿಂದ ನಡೆದುಕೊಳ್ಳುವೆನು. ನಖಶಿಖಾಂತವಾಗಿಯೂ ಸುಗಂಧ ದ್ರವ್ಯಗಳಿಂದಲೂ, ಪುಷ್ಪ ಮತ್ತು ಅವುಗಳ ಮಾಲೆಗಳಿಂದಲೂ, ಪರಿಮಳವಾದ ಅಂಗಲೇಪನಾದಿಗಳಿಂದಲೂ, ಅನೇಕ ಅಲಂಕಾರಗಳಿಂದಲೂ ನೋಡಿದ ಮಾತ್ರದಿಂದಲೇ ನಿನಗೆ ಆನಂದವಾಗುವಂತೆ ನಾನು ನಡೆದುಕೊಳ್ಳುವೆನು. ಯೋಗ್ಯ ಉಪಚಾರಗಳಿಂದ ನಿನ್ನ ದೇಹವನ್ನು ರಕ್ಷಿಸುವೆನು. ಎಲ್ಲಾ ವಿಧದಿಂದಲೂ ನನ್ನ ದೇಹಸ್ಥಿತಿಯನ್ನು ಕಾಪಾಡಿಕೊಂಡು ಯಾವಾಗಲೂ ನಿನಗೆ ಅನುಕೂಲಳಾಗಿ ನಡೆದುಕೊಳ್ಳುವೆನು.

ಒಟ್ಟು ಇವು ಏಳು ಶ್ಲೋಕಗಳಿರುವುವು. ಪ್ರಥಮೇ ಪದೇ, ದ್ವಿತಿಯೇ ಪದೇ ಎಂಬುದಾಗಿ ಇವುಗಳ ಅನುಕ್ರಮ ತಿಳಿದುಬರುವುದು. ಇವುಗಳಿಂದ ಆದರ್ಶ ವಧೂವರರ ಲಕ್ಷಣಗಳೂ, ಅವರ ಜೀವನಕ್ರಮವೂ ಸ್ಪಷ್ಟವಾಗುವುದು. ಸಪ್ತಪದಿಯಲ್ಲಿ ವಧುವು ವರನಿಗೆ ಆತ್ಮಸಮರ್ಪಣೆ ಮಾಡುವಂಥ ಕ್ರಮವಿದೆ. ಸಪ್ತಪದಿಯಲ್ಲಿ ಏಕಮಿಷೇ ವಿಷ್ಣುಸ್ತ್ವಾನ್ವೇತು ದ್ವೇ ಊರ್ಜೇ ವಿಷ್ಣುಸ್ತ್ವಾನ್ವೇತು ತ್ರೀಣಿ ವ್ರತಾಯ ವಿಷ್ಣುಸ್ತ್ವಾನ್ವೇತು

...ರ್ಣಿನಾಯೋಭವಾಯ ವಿಷ್ಣುಸ್ತ್ವಾನ್ವೇತು ಪಂಚಪಶುಭ್ಯೋ ...ಷ್ಣುಃ ಷಡ್ರಾಯಸ್ಪೋಷಾಯ ವಿಷ್ಣುಃ ಸಪ್ತ ಸಪ್ತಭ್ಯೋ ಹೋತ್ರಾಭ್ಯೋ ...ಷ್ಣುಸ್ತ್ವಾನ್ವೇತು.

ಸಪ್ತಮಾಪದಮುಪಸಂಗೃಹ್ಯ ಜಪತಿ ಸಖಾಯಃ ಸಪ್ತಪದಾ ...ಭೂಮ । ಸಖ್ಯಂತೇ ಗಮೇಯಂ । ಸಖ್ಯಾತ್ತೇ ಮಾಯೋಷಂ । ...ಖ್ಯಾನ್ಮೇ ಮಾಯೋಷ್ಠಾಃ । ಈ ವೈದಿಕ ಮಂತ್ರಗಳಿರುವುವು.

## ದೇವತಾ ಪ್ರಾರ್ಥನೆ

ಸಪ್ತಪದಿಯ ನಂತರ ಬ್ರಾಹ್ಮಣರು ಮಂಗಳಸೂಕ್ತವನ್ನು ...ವರು. ಬಂಧು ಬಾಂಧವರು ಉಡುಗರೆಗಳನ್ನು ಕೊಡುವರು. ...ಭಾಗ್ಯಾದಿ ಪ್ರಾಪ್ತ್ಯರ್ಥಂ ಮಹಾಲಕ್ಷ್ಮೀ ಶಚೀ ಗೌರೀ ಪೂಜಾಂ ...ಷ್ಯೇ' ಸಪ್ತಪದಿಯು ಆದನಂತರ ಸೌಭಾಗ್ಯಾದಿ ಪ್ರಾಪ್ತಿಗಾಗಿ ಮಹಾ ...ಕ್ಷ್ಮೀ ಶಚೀ ಗೌರಿಯರ ಪೂಜೆಯನ್ನು ಮಾಡುವ ವಿಧಾನವಿದೆ.

'ವೈವಾಹಭಾಗ್ಯಮಾರೋಗ್ಯಂ ಪುತ್ರಲಾಭಂ ಚ ದೇಹಿಮೇ' ...ವಾಹಿಕಭಾಗ್ಯ, ಆರೋಗ್ಯ, ಪುತ್ರಲಾಭಕ್ಕಾಗಿ ಈ ಪ್ರಾರ್ಥನೆಯಿದೆ.

## ಲಾಜಾ ಹೋಮ

...ನಂತರ ಲಾಜಾ ಹೋಮವು ಸಪ್ತಪದಿ ಲಾಜಾ ಹೋಮಕಾಲಕ್ಕೆ ...ವ ಮಂತ್ರಗಳಿಂದಲೂ, ಪತಿ ಪತ್ನಿಯರ ಸಾಮರಸ್ಯದ ಭಾವನೆ ...ಶಿತವಾಗುವುದು. ವರನು ತನ್ನ ಮತ್ತು ವಧುವಿನ, ವಧುವಿನ ...ತ್ತ ತನ್ನ ಹೃದಯವನ್ನು ಮುಟ್ಟಿ ಹೇಳುವಂಥ ಕ್ರಮವಿದು. "ಮಮ ...ವ್ರತೇ ಹೃದಯಂತೇ ಅಸ್ತು ಮಮ ಚಿತ್ತೇ ಚಿತ್ತಮಸ್ತು ತೇ ಮಮ ...ವಾಚಮೇಕಮನಾಃ ಶೃಣು ಮಾಮೇವಾನುವ್ರತಾ ಸಹಚರ್ಯಾ ...ಮಯಾ ಭವ ಇತಿ"—ನನ್ನ ಹೃದಯದಲ್ಲಿ ನಿನ್ನ ಹೃದಯವು ಐಕ್ಯ ...ಲಿ, ನನ್ನ ಚಿತ್ತದಲ್ಲಿ ನಿನ್ನ ಚಿತ್ತವು ಒಂದಾಗಲಿ, ನನ್ನ ಅಪ್ಪಣೆ ...ನ್ನು ಒಂದೇ ಮನಸ್ಸಿನಿಂದ ಕೇಳುವವಳಾಗು, ನನಗೆ ಅನುವ್ರತಳಾಗಿ ...ನ್ನ ನನ್ನ ಸಹಚಾರಿಣಿಯಾಗು, ಎಂಬುದಾಗಿ ಇವರ ಅರ್ಥ.

ಇದರಿಂದಲೂ ಆರ್ಯಸಂಸ್ಕೃತಿಯ ದಾಂಪತ್ಯಜೀವನಕ್ರಮವು ಚೆನ್ನಾಗಿ ಗೊತ್ತಾಗುವುದು.

ಅನಂತರ ವಧುವಿನ ಬಲಗಿವಿಯಲ್ಲಿ ವರನು ಈ ವಿಧವಾಗಿ ಹೇಳುವನು: **"ಮಾಂ ತೇ ಮನಃ ಪ್ರವಿಶತು ಮಾಂ ಚಕ್ಷುರ್ಮಾಮುತೇ ಭಗಃ। ಮಯಿ ಸರ್ವಾಣಿ ಭೂತಾನಿ ಮಯಿ ಪ್ರಜ್ಞಾನಮಸ್ತುತೇ।"** ನಿನ್ನ ಮನಸ್ಸು ನನ್ನಲ್ಲಿಯೇ ಪ್ರವಿಷ್ಟವಾಗಲಿ! ನಿನ್ನ ಕಣ್ಣುಗಳು ನನ್ನಲ್ಲೇ ಸ್ಥಿರವಾಗಿ ನಿಲ್ಲಲಿ! ನಿನ್ನ ಮನಸ್ಸಿಗೂ, ಇಂದ್ರಿಯಗಳಿಗೂ ನಾನೇ ಒಂದು ಲಕ್ಷ್ಯವಾಗಿರಲಿ—ನಿನಗೆ ಒದಗುವ ಭಾಗ್ಯ, ಸಂಪತ್ತು, ತಪಸ್ಸು, ಯಶಸ್ಸು ಕಾಮಾದಿ ಪ್ರವೃತ್ತಿ, ಮೋಕ್ಷಹೇತುಭೂತಗಳಾದ ಸಾಧನಗಳೂ, ನನ್ನಲ್ಲಿಯೇ ಅಡಕವಾಗಿರಲಿ! ನಿನ್ನ ದೇಹದಲ್ಲಿರುವಂಥ ಎಲ್ಲಾ ಪಂಚಭೂತಗಳೂ ಮತ್ತು ಈ ನಿನ್ನ ಪಾಂಚಭೂತಿಕ ದೇಹದಲ್ಲಿರುವ ನಾನೆಂಬ ಅರಿವೂ ಸಹ ನನ್ನಲ್ಲೇ ಎರಕವಾಗಲಿ! ಈ ಮಂತ್ರಗಳು ಪತಿಪತ್ನಿಯರ ಅನನ್ಯತೆಯನ್ನು ಪ್ರಕಟಿಸಿ ಆರ್ಯಸಂಸ್ಕೃತಿಯ ಹಿರಿಮೆಯನ್ನು ವಿಶ್ವವಿಖ್ಯಾತಮಾಡುವುವು. ಶಕ್ತಿಶಕ್ತಿಮಂತರ ಐಕ್ಯವನ್ನು ಬೋಧಿಸುವುವು. ಶಕ್ತಿಗೆ ಪುರುಷನ ಐಕ್ಯವೇ ಪೂರ್ಣತ್ವವೆಂದು ತಿಳಿಯಪಡಿಸುವುವು. ಈ ಪ್ರಕೃತಿ-ಪುರುಷರ ಐಕ್ಯ ಸಾಮಾನ್ಯ ವಿವಾಹದಲ್ಲಿಯೂ ಪ್ರಕಟಿಸಿ ಅಖಂಡ ತತ್ವವನ್ನು ಬೋಧಿಸುವುವು. ತಾತ್ವಿಕ ದಾಂಪತ್ಯಜೀವನದ ತಿರುಳನ್ನು ಬಿಚ್ಚಿ ಕಾಣಿಸುವುವು. ಸತಿಪತಿಯರಿಗೆ ಅಭ್ಯುದಯ ನಿಃಶ್ರೇಯಸ್ಸುಗಳ ಪಾಠವನ್ನು ಕಲಿಸುವುವು—ಅಪೌರುಷೇಯ ವೇದದ ಇದು ಆತ್ಮದೃಷ್ಟಿಯು; ಇದು ವೈದಿಕ ಧರ್ಮದ ತಾತ್ವಿಕ ದರ್ಶನವು—ಇದು ದಾಂಪತ್ಯಕ ವಿಶ್ವಧರ್ಮದ ಸಾರಸರ್ವಸ್ವವು.

ಪ್ರಕೃತಿಯು ಪುರುಷನನ್ನು ಪಡೆದೇ ಪೂರ್ಣವಾಗುವುದು. ಅರ್ಧಾರ್ಧ ವಿಭಾಗಗಳು ಸೇರಿಯೇ ಒಂದು ಪೂರ್ಣ ವಸ್ತುವಾಗುವುದು. ಪ್ರಕೃತಿ ಪುರುಷರ ಈ ಸೇರುವಿಕೆಯೇ ಒಂದು ಅಖಂಡ ಪರಮಾತ್ಮಸ್ವರೂಪ ಅಥವಾ ಬ್ರಹ್ಮವಾಗುವುದು—ಇದೇ ತಾತ್ವಿಕ ಆನಂದಘನತೆ. ಇದೇ ಪುರುಷೈಕ್ಯ—ಇದೇ ಜೀವಬ್ರಹ್ಮೈಕ್ಯ. ಒಂದು ಪೂರ್ಣ ಬ್ರಹ್ಮಸ್ಥಿತಿ. ತಾತ್ವಿಕ ಬ್ರಹ್ಮೈಕ್ಯತೆಯ ದಾಂಪತ್ಯಜೀವನವಿದು ಒಂದು ಸ್ಥೂಲರೂಪ. ಪ್ರಕೃತಿ-

ರುಷರೂಪವಾದ ಸ್ತ್ರೀಪುರುಷರು ವಿವಾಹದಿಂದ ತಮ್ಮ ಐಕ್ಯತೆಯನ್ನು ಪಡೆಯುವರು. 'ಬಾವಿಯಲ್ಲಿದ್ದದ್ದೇ ಕೊಡದಲ್ಲಿ ಬರುವುದೆಂಬಂತೆ' ಮೂಲದ ವಾಸನೆಗಳೇ ದೇಹದ ಈ ಸ್ಥೂಲ ವ್ಯವಹಾರಗಳಲ್ಲಿ ತೋರಿಬರುವುವು.

ಅಪರೇಯ ಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ ।
ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥

ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।
ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥

ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ ।
ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥

(ಗೀತಾ. ೭-೫-೬-೭)

ಯಾವುದರಿಂದ ಈ ಜಗತ್ತು ಧರಿಸಲ್ಪಡುವುದೋ ಅಂತಹ ಜೀವ ಭೂತವಾಗಿರುವ ನನ್ನ ಶ್ರೇಷ್ಠ ಪ್ರಕೃತಿಯೊಂದಿದೆ. ಈ ಪ್ರಕೃತಿಯಿಂದಲೇ ಎಲ್ಲಾ ಭೂತಗಳ ಉತ್ಪತ್ತಿಯು. ಈ ಪ್ರಕೃತಿಯಿಂದ ಆಗಿರತಕ್ಕ ಕಾರ್ಯಕ್ಕೂ ನಾನೇ ಉತ್ಪತ್ತಿ ಮತ್ತು ಲಯಸಾನನಾಗಿರುವೆನು. ನನಗಿಂತಲೂ ಹೆಚ್ಚಿನದು ಇಲ್ಲವೇ ಇಲ್ಲ. ಸೂತ್ರದ ಗಂಟುಗಳಿಂದ ಆದ ಮಾಲೆಯಲ್ಲಿ ಒಂದೇ ಒಂದು ಸೂತ್ರವೇ ಅಖಂಡವಾಗಿ ಹೇಗೆ ಇರುವುದೋ ಹಾಗೆಯೇ ನಾನು ಎಲ್ಲಾ ರೂಪಗಳ ಒಳಗೂ, ಹೊರಗೂ ವ್ಯಾಪಿಸಿ ಒಬ್ಬ ಅಖಂಡನಾಗಿರುವೆನು; ಎಂಬೀ ಗೀತಾಶ್ಲೋಕಗಳು ಈ ಪ್ರಸಂಗದಲ್ಲಿ ಮನನೀಯವಾಗಿರುವುವು.

ಮಾಯಾಂ ತು ಪ್ರಕೃತಿಂ ವಿದ್ಯಾನ್ಮಾಯಿನಂ ತು ಮಹೇಶ್ವರಂ ।
ತಸ್ಯಾವಯವಭೂತೈಸ್ತು ವ್ಯಾಪ್ತಂ ಸರ್ವಮಿದಂ ಜಗತ್ ॥

(ಶ್ವೇತಾಶ್ವತರೋಪನಿಷತ್ ಅ. ೪-೧೦)

ಮಾಯೆಯೇ ಪ್ರಕೃತಿಯು ಮತ್ತು ಈ ಮಾಯಾರೂಪವಾಗಿರುವಂಥ ಶಕ್ತಿಗೆ ಅಧಿಷ್ಠನಾಗಿರುವವನೇ ಪರಮಾತ್ಮನು. ಆ ಪರಮಾತ್ಮನ ಅವಯವ ಭೂತರಾಗಿರುವಂಥದರಿಂದಲೇ ಎಲ್ಲಾ ಜಗತ್ತು ವ್ಯಾಪ್ತವಾಗಿರುವುದು.

## ಪ್ರಕೃತಿ-ಪುರುಷರು

ಒಬ್ಬ ಪರಮಾತ್ಮನೇ ತನ್ನ ಸಂಕಲ್ಪದಿಂದ ಈ ರೂಪಗಳನ್ನು ತಾಳಿರುವವನಾದ್ದರಿಂದ ಪುರುಷ ಪ್ರಕೃತಿಗಳಲ್ಲಿ ಪತಿ ಸತಿಗಳಲ್ಲಿ ಭೇದ ವಿಲ್ಲವೆಂದಾದರೂ ಈ ಈರ್ವರಲ್ಲಿ ಪುರುಷನಿಗೆ ವಿಶೇಷ ಪ್ರಾಧಾನ್ಯವಿದೆ. ಶಕ್ತಿಗಿಂತಲೂ ಶಕ್ತಿಮಂತನು ಹೆಚ್ಚಿನ ಮಹತ್ವವುಳ್ಳವನು. ಶಕ್ತಿಯು ಅಥವಾ ಪ್ರಕೃತಿಯು (ಸತಿಯು) ಪರಮಾತ್ಮರೂಪ ಪುರುಷನ ಸಂಕಲ್ಪ ದಿಂದಾದ ಆತನ ಒಂದು ಪ್ರತಿರೂಪ, ಸಂಕಲ್ಪದ ಕಾರ್ಯ, ಮನೋಮಯ ವಿಭಾಗ. ಈ ದೃಷ್ಟಿಯಿಂದ ಶಕ್ತಿ ಅಥವಾ ಪ್ರಕೃತಿಯು ಪುರುಷನನ್ನೇ ಆಶ್ರಯಿಸಿರತಕ್ಕದ್ದು. ಈ ವಿಧವಾಗಿ ಪ್ರಕೃತಿ ಅಥವಾ ಶಕ್ತಿರೂಪವಾದ ಸತಿಯು ಕಾರ್ಯಕಾರಣ ಭಾವಗಳಂತೆ ಕಾರಣರೂಪವಾಗಿರುವಂಥ ಪುರುಷನ ಐಕ್ಯವನ್ನು ಪಡೆಯುವುದು ಸ್ವಾಭಾವಿಕವು. ಕಾರ್ಯವು ಕಾರಣದಲ್ಲಿ ಶಕ್ತಿಯು ಶಕ್ತಿಮಂತನಲ್ಲಿ ಲಯಿಸುವುದು.

ಸಪ್ತಪದಿಯಲ್ಲಿ ಇದೇ ತತ್ವವು ಸೂಕ್ಷ್ಮವಾಗಿ ಅಡಕವಾಗಿರುವುದು. ಜೀವಿಯು ಸಪ್ತಜ್ಞಾನಭೂಮಿಕೆಗಳನ್ನು ದಾಟಿ ಪರಮಾತ್ಮನಲ್ಲಿ ಐಕ್ಯವಾಗು ವುದು. ಈ ಸಪ್ತಭೂಮಿಕೆಗಳೇ ಸಪ್ತಪದಿಯಲ್ಲಿರುವುವು. 'ಶುಭೇಚ್ಛೆಯು' ಪ್ರಥಮ ಭೂಮಿಕೆ. ಸತ್ಯಸುಖದ ಪ್ರಾಪ್ತಿಯ ಇಚ್ಛೆಯೇ ಶುಭೇಚ್ಛೆ ಎನ್ನಿಸಿಕೊಳ್ಳುವುದು. ಅದರ ಪ್ರಾಪ್ತಿಯ ವಿಚಾರಕ್ಕೆ ಪ್ರಾರಂಭವಾಗು ವುದೇ 'ವಿಚಾರಣಾ' ಎಂಬ ದ್ವಿತೀಯ ಭೂಮಿಕೆ. ಸತ್ಯಸ್ವರೂಪದ ಅಥವಾ ಸತ್ಯಸುಖದ ಅಖಂಡ ವಿಚಾರದಿಂದ ವಿಷಯವಾಸನೆಗಳು ಕ್ಷೀಣ ವಾಗುವ ಸ್ಥಿತಿಯೇ 'ತನುಮಾನಸ' ಎಂಬ ತೃತೀಯ ಭೂಮಿಕೆ. ಬಾಹ್ಯ ವಿಷಯವಾಸನೆಯು ನಷ್ಟವಾಗಿ ಸ್ವರೂಪದ ನಿಶ್ಚಯವೊಂದು ನಿಲ್ಲುವುದೇ 'ಸತ್ವಾಪತ್ತಿ' ಎಂಬ ಚತುರ್ಥ ಭೂಮಿಕೆ. ಆತ್ಮಸ್ವರೂಪ ದಲ್ಲಿ ಮನಸ್ಸು ಏಕಾಗ್ರವಾಗಿರುವುದರಿಂದ ಈ ಐದನೆಯ ಭೂಮಿಕೆಯಲ್ಲಿ ಅನೇಕ ದೈವೀ ಸಾಮರ್ಥ್ಯವು ತೋರಿಬಂದರೂ ಅದರಲ್ಲಿ ಆಸಕ್ತಿ ಉಂಟಾಗ ದಿರುವುದೇ 'ಅಸಂಸಕ್ತಿ' ಎನ್ನಿಸಿಕೊಳ್ಳುವುದು. ಇದೇ ಐದನೆಯ ಭೂಮಿಕೆ. ಈ ಭೂಮಿಕೆಯಲ್ಲಿ ಯಾವ ವ್ಯವಹಾರವಲ್ಲಿಯೂ ವಿಶೇಷ ಬುದಿಯುಂಟಾಗದೆ ಮನಸ್ಸು ಸ್ವರೂಪ ಸ್ಥಿತಿಯಲ್ಲೇ ಅಂಟಿಕೊಂಡಿರು

ಧೃವು. ಹೀಗೆ ಧಾರಣೆಯಲ್ಲಿ ಸ್ವರೂಪಸ್ಥಿತಿಯೊಂದೇ ನಿಂತಿರುವಾಗ ಬಾಹ್ಯ ಪದಾರ್ಥಗಳ ಭಾವನೆಯು ಬರದಿರುವ ಭೂಮಿಕೆಯೇ 'ಪದಾರ್ಥ ಭಾವಿನೀ' ಎಂದೆನಿಸಿಕೊಳ್ಳುವುದು. ಇದು ಆರನೆಯ ಭೂಮಿಕೆ. ಕಟ್ಟ ಕಡೆಯಲ್ಲಿ ಒಂದು ಆನಂದದ ಘಟ್ಟಿಯಾಗಿ ಬಾಳುವುದೇ '**ತುರೀಯಗಾ**' ಎಂಬ ಏಳನೆಯ ಭೂಮಿಕೆ.

ಈ ಏಳು ಭೂಮಿಕೆಯ ವಿಚಾರಗಳನ್ನು ಗರ್ಭಿತವಾಗಿ ಇಟ್ಟುಕೊಂಡು ಬಹುತ್ವದ ಸಂಕಲ್ಪದಿಂದ ಸ್ಥೂಲದೇಹಗಳಾದ ಪ್ರಕೃತಿ ಪುರುಷರು ಸತಿಪತಿ ಯರ ರೂಪದಿಂದ ವಿವಾಹದಲ್ಲಿ ಒಂದಾಗುವರು. ಮತ್ತು ಪ್ರಜಾಕಾಮ ರಾಗಿ ತಮ್ಮ ಐಕ್ಯತೆಯಿಂದ ಸಂತತಿಯ ಮೂಲಕ ಬಹುತ್ವದ ಸಂಕಲ್ಪವನ್ನೂ ಪೂರ್ಣಪಡಿಸುವರು. ಕಾರ್ಯವಸ್ತು ಶಕ್ತಿಯಿಂದಲೇ ಆಗುವುದರಿಂದ ಶಕ್ತಿರೂಪವಾಗಿರುವಂಥ ಧರ್ಮಪತ್ನಿಯ ಹೊರತಾಗಿ ಸಂತತಿಯ ರೂಪ ವಾದ ಬಹುತ್ವದ ಕಾರ್ಯವು ಮತ್ತು ಅದಕ್ಕಾಗಿ ಇರುವಂಥ ಗೃಹಸ್ಥಾ ಶ್ರಮವು ಪೂರ್ಣವಾಗದು. ಶಕ್ತಿಮಂತನೇ ಶಕ್ತಿಯ ರೂಪ ತಾಳಿದ್ದರೂ, ಶಕ್ತಿ ಶಕ್ತಿಮಂತರಲ್ಲಿ ಅಭೇದವಿದ್ದರೂ ಶಕ್ತಿಯು ಶಕ್ತಿಮಂತನನ್ನು ಆಶ್ರಯಿ ಸುವುದೆಂಬುದು ಸಾಮಾನ್ಯವಾಗಿ ಎಲ್ಲರಿಗೂ ಸ್ವಲ್ಪ ವಿಚಾರದಿಂದಲೇ ತಿಳಿಯಬರುವುದು. ಈ ದೃಷ್ಟಿಯಿಂದ ಶಕ್ತಿರೂಪವಾಗಿರುವಂಥ ಸ್ತ್ರೀಯು ಪುರುಷನ ಅಧೀನವೇ ಇರುವಂಥಾದ್ದು ತಾತ್ವಿಕ ದೃಷ್ಟಿಯಿಂದಲೂ, ಅವರವರ ಉಪಾಧಿಯ ಸ್ವಭಾವದಿಂದಲೂ ಕ್ರಮಪ್ರಾಪ್ತವಾಗಿರುವುದು.

## ಸ್ತ್ರೀ ಪುರುಷರ ಏಕದೇಹನ್ಯಾಯ

ದಕ್ಷಿಣ ವಾಮಾಂಗಗಳ ಅನ್ವಯದಂತೆ ಸ್ತ್ರೀ ಪುರುಷರ ಅನ್ವಯ ಏಕದೇಹನ್ಯಾಯವಾಗಿರತಕ್ಕದ್ದು. ಪ್ರವೃತ್ತಿಮಾರ್ಗದಲ್ಲಿ, ಪ್ರಜೋ ತ್ಪಾದನ ಹೇತುಭೂತವಾದ ಗೃಹಸ್ಥಾಶ್ರಮದಲ್ಲಿ, ಈ ದೃಷ್ಟಿಯಿಂದ ವಿಧ್ಯುಕ್ತ ವಿವಾಹದಿಂದ ಆದ ಅರ್ಧಾಂಗಿಯೇ ಅವನ ಪತ್ನಿ ಎಂದು ಹೇಳಿಸಿ ಕೊಳ್ಳುವುದು. ಗೃಹಸ್ಥಾಶ್ರಮದಲ್ಲಿ ಸಂತತಿಯ ಪ್ರಧಾನಹೇತು ಇರು ವುದು. ಧರ್ಮ, ಅರ್ಥ, ಕಾಮ ಈ ಮೂರು ಪುರುಷಾರ್ಥಗಳೂ ಗೃಹ ಸ್ಥಾಶ್ರಮದಲ್ಲಿ ಇರುವವು. ಪಾರ್ಶ್ವವಾಯುವಿನಿಂದ ಒಂದು ಅಂಗವು

ನ್ಯೂನವಾದರೆ ಅದರಿಂದ ಯಾವ ಕೆಲಸವನ್ನೂ ಮಾಡಿಕೊಳ್ಳಲಿಕ್ಕೆ ಹೇಗೆ ಸಾಧ್ಯವಾಗದೋ ಅಂತೆಯೇ ಮೃತ್ಯುರೂಪವಾದ ಪಾರ್ಶ್ವವಾಯುವಿನಿಂದ ಸ್ತ್ರೀ ಪುರುಷಾತ್ಮಕವಾದ ಯಾವುದೇ ಒಂದು ಅಂಗವು ನ್ಯೂನವಾದರೆ ಪ್ರವೃತ್ತಿ ಧರ್ಮವು ಅಲ್ಲಿಗೇ ಅಳಿದುಹೋಗಿ ಮೋಕ್ಷವೆಂಬ ನಾಲ್ಕನೇ ಪುರುಷಾರ್ಥವೇ ಒಂದು ಅನುಕರಣೀಯವಾಗುವುದು. ಪತಿಯ ನಿಧನದ ನಂತರ ಸತಿಯು, ಸತಿಯ ನಿಧನದ ನಂತರ ಪತಿಯು, ಪ್ರವೃತ್ತಿಮಾರ್ಗವನ್ನು ಬಿಟ್ಟು ನಿವೃತ್ತಿಮಾರ್ಗದ ಅವಲಂಬನೆ ಮಾಡಿ ಮೋಕ್ಷಕ್ಕಾಗಿ ಯತ್ನಿಸಬೇಕೆಂದು ಶಾಸ್ತ್ರವು ಹೇಳಿದೆ. ಇಲ್ಲಿ ಗಂಡುಸಂತತಿಯಿಲ್ಲದ ಭಾಗದಲ್ಲಿ ಹೆಂಡತಿಯು ಸತ್ತನಂತರ ಗಂಡು ಬೇರೆ ಲಗ್ನವಾಗಬಹುದೆಂದು ಶಾಸ್ತ್ರವಿದೆ.

## ವಿಧವಾ ವಿವಾಹ

ನಾನ್ಯಸ್ಮಿನ್ವಿಧವಾ ನಾರೀ ನಿಯೋಕ್ತವ್ಯಾ ದ್ವಿಜಾತಿಭಿಃ ।
ಅನ್ಯಸ್ಮಿನ್ಹಿ ನಿಯುಂಜಾನಾ ಧರ್ಮಂ ಹನ್ಯುಃ ಸನಾತನಮ್ ॥

ನೋದ್ವಾಹಿಕೇಷು ಮಂತ್ರೇಷು ನಿಯೋಗಃ ಕೀರ್ತ್ಯತೇ ಕ್ವಚಿತ್ ।
ನ ವಿವಾಹ ವಿಧಾವುಕ್ತಂ ವಿಧವಾ ವೇದನಂ ಪುನಃ ॥

(ಮನು. ಅ. ೯-೬೪-೬೫)

ದ್ವಿ ಜಾತಿಗಳು ವಿಧವೆಯನ್ನು ಪರಪುರುಷನ ಸಂಗಡ ನಿಯುಕ್ತಳನ್ನಾಗಿ ಮಾಡಕೂಡದು—ಅಂದರೆ, ವಿಧವಾ ವಿವಾಹ ಮಾಡಕೂಡದೆಂದು ಅರ್ಥ. ಅನ್ಯಪುರುಷನ ಸಂಗಡ ವಿಧವೆಯ ವಿವಾಹ ಮಾಡಿಕೊಟ್ಟರೆ ಅವರು ಸನಾತನ ಧರ್ಮವನ್ನೇ ನಷ್ಟಪಡಿಸಿದಂತಾಗುತ್ತದೆ. 'ಅರ್ಯಮಣಂ ನು ದೇವಮ್' ಇತ್ಯಾದಿ ವಿವಾಹ ಮಂತ್ರಗಳಲ್ಲಿ ಪುನರ್ವಿವಾಹವನ್ನು ಎಲ್ಲಿಯೂ ಹೇಳಲಿಲ್ಲ. ಯಾವ ಶಾಖೆಯಲ್ಲಿಯೂ, ಯಾವ ಧರ್ಮಶಾಸ್ತ್ರದಲ್ಲಿಯೂ ವಿಧವಾ ವಿವಾಹದ ಪುರಸ್ಕಾರ ಮಾಡಲಿಲ್ಲ. ಆದುದರಿಂದ ಅನ್ಯಪುರುಷನ ಸಂಗಡ ವಿಧವೆಯ ವಿವಾಹ ಮಾಡಿಕೊಡುವುದು ವ್ಯಕ್ತಿ ಮತ್ತು ಸಮಾಜದ ಐಹಿಕ-ಪಾರಲೌಕಿಕ ಉತ್ಕರ್ಷದ ದೃಷ್ಟಿಯಿಂದಲೂ, ವ್ಯಾವಹಾರಿಕ ದೃಷ್ಟಿಯಿಂದಲೂ, ಮುಂದಿನ ಸಂತತಿಯ ದೃಷ್ಟಿಯಿಂದಲೂ ಯಾವಾಗಲೂ ಅತ್ಯಂತ ನಿಷಿದ್ಧವೇ ಸರಿ. ಇದು ಮನುವಿನ ಹೇಳಿಕೆ.

ರಕ್ಕೆ ತಾತ್ವಿಕಜೀವನದ ಎಷ್ಟು ಪುಷ್ಟಿಯಿರುವುದೋ ಅಷ್ಟೇ ವ್ಯಾವಹಾರಿಕಜೀವನದ ಪುಷ್ಟಿಯೂ ಇರುವುದು. ಸ್ತ್ರೀಯು ವಿಧ್ಯುಕ್ತವಾಗಿ ತನ್ನ ಪಾಣಿಗ್ರಹಣಮಾಡಿರುವ ಪುರುಷನ ಸಂಗಡ ಜೀವಿತವಿರುವಾಗಲೂ (ಸ್ನೇಹವಿರುವಾಗಲೂ), ಮರಣದನಂತರವೂ ಕೂಡ ಅನನ್ಯಳಾಗಿಯೇ ಇರಬೇಕು. ಇದು ಅದ್ವಿತೀಯಸ್ವರೂಪದ ಪ್ರಾಪ್ತಿಯ ಉಪಾಯ, ಮೋಕ್ಷಧರ್ಮ. ಪುರುಷನ ಅರ್ಧಾಂಗವಾಗಿರತಕ್ಕಂಥ ಸ್ತ್ರೀಗೆ ಪುರುಷನನ್ನು ಬಿಟ್ಟು ಯಾವ ಸ್ವಾತಂತ್ರ್ಯವೂ ಇರದು. 'ಪ್ರಕೃತಿರ್ಜಡಾ' ಪ್ರಕೃತಿಯು ಪುರುಷನಿಂದಲೇ ಚೈತನ್ಯಗೊಳ್ಳುವುದೆಂದಾಗುವಲ್ಲಿ ಪ್ರಕೃತಿರೂಪವಾದ ಉಪಾಧಿಯ ಅಭಿಮಾನ ವಹಿಸಿರುವ ಸ್ತ್ರೀಯರಿಗೆ ತಮ್ಮ ಈ ಉಪಾಧಿಯ ಸ್ವಭಾವದ ಪ್ರಕಾರ ಸ್ವಾತಂತ್ರವಿರದು. "ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ" ಎಂಬ ಮನುವಿನ ವಚನದಿಂದ ಈ ತಾತ್ವಿಕ ವಿಚಾರವನ್ನೇ ವ್ಯಾವಹಾರಿಕಸೂತ್ರದಲ್ಲಿ ಪೋಣಿಸಿರುವುದು.

## ಪತಿಪತ್ನಿಯರ ಸಂಬಂಧ

ಗೃಹಸ್ಥಾಶ್ರಮದಲ್ಲಿ ಪತಿಪತ್ನಿಯರ ಘನಿಷ್ಠಸಂಬಂಧದ ಏಕಾತ್ಮಿಕ ಆಚರಣವು ಆರ್ಯಸಂಸ್ಕೃತಿಯ ಒಂದು ಮುಖ್ಯ ಅಂಗವಾಗಿರುವುದು.

ಅನ್ಯೋನ್ಯಸ್ಯಾವ್ಯಭಿಚಾರೋ ಭವೇದಾಮರಣಾಂತಿಕಃ ।
ಏಷ ಧರ್ಮಃ ಸಮಾಸೇನ ಜ್ಞೇಯಃ ಸ್ತ್ರೀ ಪುಂಸಯೋಃ ಪರಃ ॥
(ಮನು. ೯–೧೦೧)

ಸತಿ ಪತಿಗಳ ದೇಹಾಂತದವರೆಗೂ ಅವ್ಯಭಿಚರಿತವಾದ ಅನನ್ಯ ಪ್ರೀತಿಯಿರಬೇಕು. ಪತಿಪತ್ನಿಯರ ದೊಡ್ಡ ಧರ್ಮ ಇದೇ.

ನಗರಸ್ಥೋ ವನಸ್ಥೋ ವಾ ಶುಭೋವಾ ಯದಿ ವಾಶುಭಃ ।
ಯಾಸಾಂ ಸ್ತ್ರೀಣಾಂ ಪ್ರಿಯೋ ಭರ್ತಾ ತಾಸಾಂ ಲೋಕಾ ಮಹೋದಯಾಃ
॥ ೨೧ ॥

ದುಃಶೀಲಃ ಕಾಮವೃತ್ತೋ ವಾ ಧನೈರ್ವಾ ಪರಿವರ್ಜಿತಃ ।
ಸ್ತ್ರೀಣಾಮಾರ್ಯ ಸ್ವಭಾವಾನಾಂ ಪರಮಂ ದೈವತಂ ಪತಿಃ ॥ ೨೨ ॥
(ವಾ. ರಾ. ಅ. ಸರ್ಗ ೧೧೭)

ಇವು ಸೀತಾ ಮತ್ತು ಅನಸೂಯಾ ಈ ಸತೀ ಶಿರೋಮಣಿಗಳ ಸಂವಾದದಲ್ಲಿ ಬಂದಿರುವ ರಾಮಾಯಣದ ಎರಡು ಶ್ಲೋಕಗಳು. ಜ್ಞಾತಿ ಜನರನ್ನೂ, ರಾಜ್ಯೋಪಭೋಗಗಳನ್ನೂ, ಅಂಥಾ ರಾಜಮಂದಿರವನ್ನೂ ಬಿಟ್ಟು ಶ್ರೀರಾಮನ ಜೊತೆಗೆ ಫಲಮೂಲಗಳಿಂದ ಜೀವಿಸುತ್ತ ಕಂಟಕಮಯವಾದ ಮಹಾ ಘೋರ ಅಡವಿಯ ಮಾರ್ಗದಲ್ಲಿ ಪಾದಚಾರಿಣಿಯಾಗಿ ಹೊರಟದ್ದನ್ನು ಕಂಡು ಅನಸೂಯೆಯು ಸೀತೆಯನ್ನು ಗೌರವಿಸುತ್ತಿರುವಾಗ ಅನಸೂಯೆಯ ಮುಖದಿಂದ ಹೊರಟಿರುವ ಈ ಎರಡು ಶ್ಲೋಕಗಳು ಆರ್ಯಸ್ತ್ರೀಯರ ಲಕ್ಷಣಗಳನ್ನು ಬೋಧಿಸುತ್ತಿರುವುವು. ಪತಿಯು ಪಟ್ಟಣದಲ್ಲಿರಲಿ, ವನದಲ್ಲಿರಲಿ, ದುರ್ವೃತ್ತನಾಗಿರಲಿ, ಸದ್ವೃತ್ತನಾಗಿರಲಿ ಯಾವ ಸ್ತ್ರೀಯರಿಗೆ ಆ ಪತಿಗಳಲ್ಲಿ ಅನನ್ಯ ಪ್ರೀತಿಯಿರುವುದೋ ಆ ಸತಿಯರಿಗೆ ಅತ್ಯಂತ ಸುಖಮಯ ಲೋಕಗಳ ಪ್ರಾಪ್ತಿಯಾಗುವುದು. ಪತಿಯು ದುಷ್ಟ ಸ್ವಭಾವದವನಾಗಿರಲಿ, ಸದಾಚಾರಿಯಾಗಿರಲಿ ಅಥವಾ ಧನಹೀನನಾಗಿರಲಿ ಆತನು ಆರ್ಯಸಂಸ್ಕೃತಿ ಸಂಪನ್ನರಾದ ಸ್ತ್ರೀಯರಿಗೆ ಒಂದು ಶ್ರೇಷ್ಠ ದೈವತವೇ ಸರಿ. ಈ ರಾಮಾಯಣದ ಶ್ಲೋಕಗಳ ಸಮಾನಾಭಿಪ್ರಾಯವುಳ್ಳ ಮನುಸ್ಮೃತಿಯ ಈ ಕೆಳಗಿನ ಶ್ಲೋಕಗಳು ಇರುವುವು:

ವಿಶೀಲಃ ಕಾಮವೃತ್ತೋ ವಾ ಗುಣೈರ್ವಾ ಪರಿವರ್ಜಿತಃ ।
ಉಪಚರ್ಯಃ ಸ್ತ್ರಿಯಾ ಸಾಧ್ವ್ಯಾ ಸತತಂ ದೇವವತ್ಪತಿಃ ॥

(ಮನು. ೫–೧೫೪)

ಪತಿಯಲ್ಲಿ ದೇವರ ಬುದ್ಧಿಯನ್ನಿಟ್ಟು ಅನನ್ಯಳಾಗಿ ಪತಿ ಶುಶ್ರೂಷೆಯನ್ನು ಸತಿಯು ಮಾಡತಕ್ಕದ್ದೆಂದು ಇದರ ಅಭಿಪ್ರಾಯ.

ಪಾಣಿಗ್ರಾಹಸ್ಯ ಸಾಧ್ವೀ ಸ್ತ್ರೀ ಜೀವತೋ ವಾ ಮೃತಸ್ಯ ವಾ ।
ಪತಿಲೋಕಮಭೀಪ್ಸಂತೀ ನಾಚರೇತ್ಕಿಂಚಿದಪ್ರಿಯಮ್ ॥

(ಮನು. ೫–೧೫೬)

ಸತಿಪತಿಯರಲ್ಲಿ ದೇಹವಿರುವಾಗ ಎಷ್ಟು ಪ್ರೀತಿಯಿರುವುದೋ ಅಷ್ಟೇ ಪ್ರೀತಿಯು ದೇಹ ಬಿಟ್ಟುಹೋದಮೇಲೂ ಅವರಲ್ಲಿರತಕ್ಕದ್ದು ಎಂಬುದು ಈ ಶ್ಲೋಕದಿಂದ ಸ್ಪಷ್ಟವಾಗುವುದು. ಪತಿಯ ಮರಣೋತ್ತರವೂ ಕೂಡ

ಸತಿಯಲ್ಲಿ ಅವಿಚ್ಛಿನ್ನಪ್ರೇಮವಿದ್ದರೆ ಅವಳು ಪುಣ್ಯಲೋಕವನ್ನು ಕುರಿತು ಹೋಗುವಳೆಂದು ಈ ಶ್ಲೋಕದಲ್ಲಿ ಹೇಳಿರುವುದು.

ವ್ಯಭಿಚಾರಾತ್ತು ಭರ್ತುಃ ಸ್ತ್ರೀ ಲೋಕೇ ಪ್ರಾಪ್ನೋತಿ ನಿಂದ್ಯತಾಂ ।
ಶೃಗಾಲಯೋನಿಂ ಪ್ರಾಪ್ನೋತಿ ಪಾಪರೋಗೈಶ್ಚ ಪೀಡ್ಯತೇ ॥
(ಮನು. ೫-೧೬೪)

ಅನ್ಯಪುರುಷೋಪಭೋಗದಿಂದ ಸ್ತ್ರೀಯು ಜೀವಿತವಿರುವವರೆಗೂ ನಿಂದ್ಯಳಾಗುವಳು. ಮರಣೋತ್ತರ ನರಿಯಾಗಿ ಹುಟ್ಟುವಳು. ನರಿಯ ಜನ್ಮವನ್ನು ಕಳೆದು ಮನುಷ್ಯಜನ್ಮದಲ್ಲಿ ಜನಿಸಿದಾಗ ಕುಷ್ಠರೋಗಾದಿಗಳಿಂದ ಪೀಡಿತಳಾಗುವಳು.

ಸಾ ಭಾರ್ಯಾ ಯಾ ಗೃಹೇ ದಕ್ಷಾ ಸಾ ಭಾರ್ಯಾ ಯಾ ಪ್ರಜಾವತೀ ।
ಸಾ ಭಾರ್ಯಾ ಯಾ ಪತಿಪ್ರಾಣಾ ಸಾ ಭಾರ್ಯಾ ಯಾ ಪತಿವ್ರತಾ ॥
(ವ್ಯಾಸ)

ಮನೆವಾರ್ತೆಯಲ್ಲಿ ದಕ್ಷಳೂ, ಸುಪುತ್ರವಂತಳೂ, ಪತಿಗೆ ಪ್ರಾಣದಂತೆ ಪ್ರಿಯಳೂ, ಪತಿವ್ರತೆಯೂ ಆದ ಸ್ತ್ರೀಯೇ ಭಾರ್ಯೆಯೆಂದು ಹೇಳಿಸಿಕೊಳ್ಳುವಳು.

'ಸಮಾಪೋ ಹೃದಯಾನಿನೌ' ನಮ್ಮ ಈರ್ವರ ಹೃದಯವು ಶುದ್ಧ ನೀರಿನಲ್ಲಿ ಶುದ್ಧ ನೀರು ಬೆರತಂತೆ ಯಾವಾಗಲೂ ಒಂದಾಗಿರಬೇಕು ಎಂದು ಪತಿಪತ್ನಿಯರ ಮುಖದಿಂದ ನುಡಿಸುವ ವೇದವಾಕ್ಯವಿದು. ಇದರಿಂದ ವೈದಿಕ ಸಂಸ್ಕೃತಿಯಲ್ಲಿದ್ದ ಪತಿಪತ್ನಿಯರ ಹೃದಯದ ಪರಿಚಯವಾಗುವುದು. ಇದರ ವಿರುದ್ಧವಾದ ಆಚರಣೆಯು ಎಲ್ಲಿ ತೋರಿಬರುವುದೋ ಅದು ಆರ್ಯಧರ್ಮದ ಲಕ್ಷಣವಲ್ಲ.

ಯಥಾ ಮೇ ಹೃದಯಂ ನಿತ್ಯಂ ನಾಪಸರ್ಪತಿ ರಾಘವಾತ್ ।
ತಥಾ ಲೋಕಸ್ಯ ಸಾಕ್ಷೀ ಮಾಂ ಸರ್ವತಃ ಪಾತು ಪಾವಕಃ ॥
(ವಾ. ರಾ. ಯು. ೧೧೬-೨೫)

ಆರ್ಯಧರ್ಮದ ಪಾತಿವ್ರತ್ಯವನ್ನು ಒರೆಗಲ್ಲಿಗೆ ಹಚ್ಚಿ ಅವರ ಲಕ್ಷಣವನ್ನು ವಿಶ್ವವಿದಿತವಾಡಿಸುವಂಥ ಇದೊಂದು ಶ್ಲೋಕ. ಇದರಲ್ಲಿ ಸೀತಾದೇವಿಯು ಪಾತಿವ್ರತ್ಯದ ಪರೀಕ್ಷೆಯಲ್ಲಿ ಅಗ್ನಿಯ ದಿವ್ಯವನ್ನು ಮಾಡಿ

ಉತ್ತೀರ್ಣಳಾಗಿದ್ದಾಳೆ. 'ಶ್ರೀರಾಮನನ್ನು ಬಿಟ್ಟು ನನ್ನ ಹೃದಯವು ಒಂದು ಕ್ಷಣಮಾತ್ರವೂ ಕೂಡ ಅಗಲದಿರುವಲ್ಲಿ ಈ ಸಂಪೂರ್ಣ ಜಗತ್ತಿನ ಸಾಕ್ಷಿಯಾದ ಅಗ್ನಿದೇವನು ನನ್ನನ್ನು ಎಲ್ಲಾ ವಿಧದಿಂದಲೂ ರಕ್ಷಿಸಲಿ' ಎಂಬುದಾಗಿ ಹೇಳಿ ಮುಂದೆ ಧಗಧಗಿಸುತ್ತಿರುವ ಅಗ್ನಿಯಲ್ಲಿ ಹಾರಿ ಅಗ್ನಿದೇವನನ್ನು ಸೀತೆಯು ತನ್ನ ಪಾತಿವ್ರತ್ಯದ ಸಾಕ್ಷಿಯಾಗಿ ಇಲ್ಲಿ ನಿಲ್ಲಿಸಿದ್ದಾಳೆ.

ವಿಧೂಯಾಥ ಚಿತಾಂ ತಾಂ ತು ವೈದೇಹೀಂ ಹವ್ಯವಾಹನಃ ।
ಉತ್ತಸ್ಥೌ ಮೂರ್ತಿಮಾನಾಶು ಗೃಹೀತ್ವಾ ಜನಕಾತ್ಮಜಾಮ್ ॥ ೨ ॥
(ವಾ. ರಾ. ಯು. ಸರ್ಗ ೧೧೮)

"ಹೇ ರಾಮ! ಇಕೋ ನಿನ್ನ ಧರ್ಮಪತ್ನಿಯಾದ ಈ ವೈದೇಹಿಯಲ್ಲಿ ಪಾಪವಿಲ್ಲ. ಮನೋವಾಕ್ಕಾಯಗಳ ನಡೆ ನುಡಿ, ನೋಟಗಳಿಂದಲೂ ಇವಳು ನಿನ್ನನ್ನು ಮೀರಿ ನಡೆದವಳಲ್ಲ. ಇವಳು ತ್ವಚ್ಚಿತ್ತಾ ತ್ವತ್ಪರಾಯಣಾ. ಇವಳನ್ನು ನೀನು ಪರಿಗ್ರಹಿಸು" ಎಂಬುದನ್ನು ಹೇಳುತ್ತಾ ಅಗ್ನಿದೇವನು ಸೀತೆಯನ್ನು ಶ್ರೀರಾಮನಿಗೆ ಅರ್ಪಿಸಿರುವ ಆ ಪ್ರಸಂಗದ ವರ್ಣನೆ ಈ ಶ್ಲೋಕದಲ್ಲಿದೆ. ಆರ್ಯಸ್ತ್ರೀಯರ ಪಾತಿವ್ರತ್ಯವು ಈ ವಿಧದ ಒರೆಗಲ್ಲಿಗೆ ಹಚ್ಚಿದ ಅಪರಂಜಿಯಾಗಿರಬೇಕು. ಭಾರತ ಜನರು ಇದನ್ನು ಕಾದಿಡಬೇಕು. ಇದರ ರಕ್ಷಣೆ ಆಗುವಂತೆ ಈ ವಿಧವಾಗಿ ಆರ್ಯಸಂಸ್ಕೃತಿಯು ಜಗತ್ತಿನಲ್ಲಿ ಭದ್ರವಾಗಿ ನಿಲ್ಲುವಂತೆ ಉಪದೇಶದಿಂದಲೂ ಶಾಸನ ನಿಯಮಗಳಿಂದಲೂ ಪ್ರಾಣಪಣದಿಂದ ಪ್ರಯತ್ನಿಸಬೇಕು. ಆರ್ಯಸಂಸ್ಕೃತಿಯ ಈ ಹಿರಿಮೆಯನ್ನು ಜಗತ್ತಿನಲ್ಲಿ ಪ್ರಸಿದ್ಧಪಡಿಸಬೇಕು.

ದೀರ್ಘಾಯುರಥವಾಲ್ಪಾಯುಃ ಸಗುಣೋ ನಿರ್ಗುಣೋಪಿ ವಾ ।
ಸಕೃದ್ವೃತೋ ಮಯಾ ಭರ್ತಾ ನ ದ್ವಿತೀಯಂ ವೃಣೋಮ್ಯಹಂ ॥
(ಮಹಾ. ಭಾ. ವ. ೨೯೪-೨೭)

"ಸತ್ಯವಾನನು ದೀರ್ಘಾಯುವಾಗಿರಲಿ ಅಥವಾ ಅಲ್ಪಾಯು ಗುಣವಂತನಾಗಿರಲಿ ಅಥವಾ ದುರ್ಗುಣಿಯಾಗಿರಲಿ, ನಾನು ಒಂದುಸಾರಿ ಆತನನ್ನು ಪತಿಯೆಂದು ಸ್ವೀಕರಿಸಿದಮೇಲೆ ಇನ್ನೊಬ್ಬನನ್ನು ನಾನು ಎಷ್ಟುಮಾತ್ರಕ್ಕೂ ವರಿಸಲಿಕ್ಕಿಲ್ಲ ಎಂಬ ಈ ಸಾವಿತ್ರಿಯ ವಾಕ್ಯವೂ ಕೂಡ ಹೃದಯದಲ್ಲಿ ನೆಲೆಸಿದ ಆರ್ಯಸಂಸ್ಕೃತಿಯ ಲಕ್ಷಣವನ್ನು ವ್ಯಕ್ತಪಡಿಸು

ವುದು. ತನ್ನ ಪಾತಿವ್ರತ್ಯದ ಬಲದಿಂದ ಸಾವಿತ್ರಿಯು ಅಲ್ಪಾಯುವಾದ ಸತ್ಯವಾನನನ್ನು ದೀರ್ಘಾಯುವನ್ನಾಗಿ ಮಾಡಿದ್ದು ಜನಜನಿತವಾಗಿರು ವುದು. **ಪಾತಿವ್ರತ್ಯದ ಪ್ರಭಾವವಿದು.** ಪಾತಿವ್ರತ್ಯದ ಪ್ರಭಾವದಿಂದ ಸತಿ ಅನುಸೂಯೆಯು ತ್ರಿಮೂರ್ತಿಗಳನ್ನು ಮಕ್ಕಳನ್ನಾಗಿ ಮಾಡಿಕೊಂಡಿ ದ್ದುದೂ ಜಗದ್ವಿಖ್ಯಾತವಿದೆ. ಪಾತಿವ್ರತ್ಯದ ಪರಿಪಾಲನೆಯಿಂದ ದೇಹಕ್ಕೆ ಇಂಥಾ ದೊಡ್ಡ ಶಕ್ತಿಯ ಲಾಭವಾಗುವಲ್ಲಿ ಕಾಯಿದೆಯಿಂದಲೂ ಸಹ ಇದನ್ನು ಆಚರಣದಲ್ಲಿ ಏಕೆತಾನೇ ತರಬಾರದು?

ವಿವಾಹದಿಂದ ಮನುಷ್ಯರೂಪದಿಂದಿರುವ ಪ್ರಕೃತಿ-ಪುರುಷರನ್ನು ಸೃಷ್ಟಿಕಾರ್ಯಕ್ಕಾಗಿ ಒಟ್ಟುಗೂಡಿಸುವುದು ಸನಾತನ ವೈದಿಕ ಧರ್ಮದ ಇದೊಂದು ತತ್ವ. ಸೃಷ್ಟಿಕಾರ್ಯಕ್ಕಾಗಿ ತನ್ನ ಶಕ್ತಿಯಿಂದ ಒಡಗೂಡಿದ ಪರಮಾತ್ಮನೇ ಪತಿಪತ್ನಿಯರ ರೂಪದಿಂದ ಪ್ರಜೋತ್ಪತ್ತಿಯ ಮೂಲಕ ಗೃಹಸ್ಥಾಶ್ರಮದಲ್ಲಿ ತನ್ನ ಕಾರ್ಯವನ್ನು ಮುಂದುರಿಸುತ್ತಿರುವನು. ಪ್ರತಿ ಸತಿಪತಿಯರ ರೂಪದಿಂದ ಪರಮಾತ್ಮನು ತನ್ನ ಶಕ್ತಿಯ ಸಂಗಡ ಇರುವ ತನ್ನ ಅಭೇದ ಸ್ವರೂಪವನ್ನು ಕಾಣಿಸುತ್ತಿರುವನು. ಶಕ್ತಿಮಂತರಲ್ಲಿರುವ ಅಭೇದದಂತೆ ಸತಿಪತಿಯರಲ್ಲಿ ಅಭೇದವಿರಬೇಕು. ಪುರುಷನ ಪ್ರಜೋ ತ್ಪಾದನದ ಶಕ್ತಿಯೇ ಸ್ತ್ರೀರೂಪವನ್ನು ತಾಳಿ ಪ್ರಜೋತ್ಪಾದನಕ್ಕಾಗಿ ಪತ್ನಿಯ ರೂಪದಿಂದ ಪ್ರಕಟವಾಗುವುದು. 'ಏಕೋಽಹಂ ಬಹುಸ್ಯಾಮ್' ನಾನು ಬಹುರೂಪಗಳನ್ನು ತಾಳಬೇಕು ಎಂಬ ಸಂಕಲ್ಪದಿಂದ ಒಂದೊಂದು ಸ್ತ್ರೀ ಪುರುಷರ ಬಿಡಿಬಿಡಿಯಾದ ಜೋಡಿ, ಜೋಡಿ ರೂಪವನ್ನು ಧರಿಸಿ ಪರಮಾತ್ಮನು ಬಹುವಾದನು. ಈ ದೃಷ್ಟಿಯಿಂದ ಬಿಡಿಬಿಡಿಯಾದ ಜೋಡಿ ಜೋಡಿಯಾಗಿರುವ ಸ್ತ್ರೀ ಪುರುಷರೂಪದಿಂದ ಒಂದು ನಾನೆಂಬುದರ ಪ್ರಜೋತ್ಪಾದನೆಗಾಗಿ ಆಗಿರುವ ಎರಡು ರೂಪಗಳು ಸ್ತ್ರೀ ಪುರುಷರಲ್ಲಿ ಸಾಮಾನ್ಯವಾಗಿ ಒಂದು ನಾನೆಂಬ ಅರಿವು ತೋರಲಿಕ್ಕೂ ತೋರುವುದು. ಒಂದು ನಾನು ಎಂಬ ಆತ್ಮೀಯ ಅರಿವು ಪ್ರಜೋತ್ಪತ್ತಿಯ ಸಂಕಲ್ಪದಿಂದ ಆದ ಸತಿಪತಿರೂಪವಾದ ಈ ಎರಡು ರೂಪಗಳಿಂದಾದಮೇಲೆ ಈ ಈರ್ವ ರಲ್ಲಿ ಏಕಾತ್ಮಭಾವವಿರುವಂಥಾದ್ದು ಸ್ವಭಾವಸಿದ್ಧವಾಯಿತು. ಸನಾತನ ವೈದಿಕ ಆರ್ಯಧರ್ಮದಲ್ಲಿ ಈ ತತ್ವವನ್ನು ಸತಿಪತಿಗಳ ಧರ್ಮರೂಪದಿಂದ

ಪ್ರಕಟಮಾಡಿರುವುದು. ಈ ತತ್ವವನ್ನು ಅರಿತರೆ ಯಾವಾತನು ತಾನೇ ವಿವಾಹ ವಿಚ್ಛೇದನ ಮತ್ತು ಪುನರ್ವಿವಾಹದ ಕಾಯಿದೆಯನ್ನು ಮಾಡುವನು ?

## ವಿಧವಾ ಧರ್ಮ

ಕಾಮಂ ತು ಕ್ಷಪಯೇದ್ದೇಹಂ ಪುಷ್ಪಮೂಲಫಲೈಃ ಶುಭೈಃ ।
ನತು ನಾಮಾಪಿ ಗೃಹ್ಣೀಯಾತ್ಪತ್ಯೌ ಪ್ರೇತೇ ಪರಸ್ಯ ತು ॥

(ಮನು. ೫–೧೫೭)

ವಿಧವೆಯು ಶುಚಿಯಾದ ಪುಷ್ಪ, ಫಲಮೂಲಗಳ ಪವಿತ್ರ ಅಲ್ಪಾಹಾರದಿಂದ ಜೀವಿಸಬೇಕು. ಅದಲ್ಲದಿದ್ದರೆ ಒಪ್ಪತ್ತೂಟವನ್ನು ಮಾಡಬೇಕು. ತಪಶ್ಚರ್ಯದಿಂದ ಇರಬೇಕು. ಪತಿಯು ಮೃತನಾದಮೇಲೆ ಅನ್ಯಪುರುಷರ ಹೆಸರನ್ನೂ ಸಹ ಎತ್ತಬಾರದು.

ಆಸೀತಾಮರಣಾತ್ಕ್ಷಾಂತಾ ನಿಯತಾ ಬ್ರಹ್ಮಚಾರಿಣೀ ।
ಯೋ ಧರ್ಮ ಏಕಪತ್ನೀನಾಂ ಕಾಂಕ್ಷಂತೀ ತಮನುತ್ತಮಮ್ ॥

(ಮನು. ೫–೧೫೮)

ಕ್ಷಮಾಯುಕ್ತಳಾಗಿಯೂ, ನಿಯಮಗಳ ಪರಿಪಾಲನೆಗಳಲ್ಲಿ ದಕ್ಷಳಾಗಿಯೂ, ಏಕಪತಿ ಧರ್ಮವನ್ನು ನಡೆಸುತ್ತಾ ಸತಿಯು ಮಧು, ಮಾಂಸ, ಮೈಥುನ ವರ್ಜನಾತ್ಮಕವಾದ ಬ್ರಹ್ಮಚರ್ಯದಿಂದ ಮರಣಪರ್ಯಂತವಾಗಿ ಇರಬೇಕು.

ಮೃತೇ ಭರ್ತರಿ ಸಾಧ್ವೀ ಸ್ತ್ರೀ ಬ್ರಹ್ಮಚರ್ಯೇ ವ್ಯವಸ್ಥಿತಾ ।
ಸ್ವರ್ಗಂ ಗಚ್ಛತ್ಯಪುತ್ರಾಪಿ ಯಥಾ ತೇ ಬ್ರಹ್ಮಚಾರಿಣಃ ॥

(ಮನು. ೫–೧೬೦)

ಯಾವಳು ಪತಿಯು ಮೃತಪಟ್ಟಮೇಲೆ ಬ್ರಹ್ಮಚರ್ಯದಲ್ಲಿದ್ದು ಮೋಕ್ಷಸಾಧನಗಳನ್ನು ಮಾಡುವಳೋ ಅವಳು ಪುತ್ರಹೀನಳಾದರೂ ಶುಕ ಸನಕಾದಿಗಳಂತೆ ಮೋಕ್ಷವನ್ನು ಹೊಂದುವಳು. ಈ ಎಲ್ಲಾ ಶ್ಲೋಕಗಳಿಂದ ಪತಿ ಪತ್ನಿಯರ ಆಚರಣದ ಧರ್ಮವು ಸ್ಪಷ್ಟವಾಗುವುದು. ಆರ್ಯಸಂಸ್ಕೃತಿಯಲ್ಲಿದ್ದ ಉಚ್ಚ ದಾಂಪತ್ಯಜೀವನದ ಪರಿಚಯವಾಗುವುದು. ಈ ವೈದಿಕ ಆರ್ಯಸಂಸ್ಕೃತಿಯಲ್ಲಿ ದೇಹವಿರುವಾಗಲೂ, ದೇಹ ಬಿಟ್ಟು

ಕ್ಕೋಡಾಗಲೂ ಸತಿಪತಿಯರಲ್ಲಿ ವ್ಯಭಿಚಾರವೆಂಬುದು ಅತ್ಯಂತ ನಿಷಿದ್ಧವಿದೆ. ಅದು ನಿಂದ್ಯ ಮತ್ತು ದುರ್ಗತಿಕಾರಕವೆಂದು ಆರ್ಯಸಂಸ್ಕೃತಿಯು ನಿಶ್ಚಯಿಸಿರುವುದು.

ಮೃತಂ ಭರ್ತಾರಮಾದಾಯ ಬ್ರಾಹ್ಮಣೀ ವಹ್ನಿಮಾವಿಶೇತ್ ।
ಜೀವನ್ತೀ ಚೇತ್ತ್ಯಕ್ತಕೇಶಾ ತಪಸಾ ಶೋಧಯೇದ್ವಪುಃ ॥
(ವ್ಯಾಸಸ್ಮೃತಿ ೨-೫೩)

ಪತಿಯ ನಿಧನಾನಂತರವಾಗಿ ಸತಿಯು ಸಹಗಮನ ಮಾಡಬೇಕು. ಇಲ್ಲನಾದರೆ ಸನ್ಯಾಸ ಸೂಚಕವಾದ ಕೇಶವಪನವನ್ನು ಮಾಡಿ ನಿರಶನ ವ್ರತವನ್ನು ಕೈಕೊಂಡು ಅಥವಾ ಏಕಭುಕ್ತಳಾಗಿ ತಪಸ್ಸಿನಿಂದ ಶರೀರ ಕೃಶವನ್ನು ಮಾಡುತ್ತಾ, ಶರೀರ ಶುದ್ಧಿಯನ್ನು ಸಂಪಾದಿಸಿ ವಿರಕ್ತಿ, ಭಕ್ತಿ, ಜ್ಞಾನ, ವಿಜ್ಞಾನ ಸಾಧನೆಗಳಲ್ಲಿ ತೊಡಗಿರಬೇಕು.

ಕೇಶರಂಜನ ತಾಂಬೂಲ ಗಂಧಪುಷ್ಪಾದಿ ಸೇವನಂ ।
ಭೂಷಣಂ ರಂಗವಸ್ತ್ರಂ ಚ ಕಾಂಸ್ಯಪಾತ್ರೇಷು ಭೋಜನಮ್ ॥
ದ್ವಿವಾರ ಭೋಜನಂ ಚಾಕ್ಷ್ಣೋ ರಂಜನಂ ವರ್ಜಯೇತ್ಸದಾ ।
ಸ್ನಾತ್ವಾ ಶುಕ್ಲಾಂಬರಧರಾ ಜಿತಕ್ರೋಧಾ ಜಿತೇಂದ್ರಿಯಾ ॥
(ವೃದ್ಧಹಾರೀತ ೧೧-೨೦೬-೨೦೭)

ಕೂದಲುಗಳನ್ನಿಟ್ಟುಕೊಂಡು ತಲೆಯನ್ನು ಬಾಚುವುದು, ತಾಂಬೂಲ ಗಂಧ ಪುಷ್ಪಾದಿಗಳನ್ನು ಸೇವಿಸುವುದು, ಆಭರಣಗಳನ್ನು ತೊಡುವುದು, ಬಣ್ಣದ ವಸ್ತ್ರಗಳನ್ನು ಉಡುವುದು, ಕಂಚಿನ ಪಾತ್ರೆಗಳಲ್ಲಿ ಊಟಮಾಡು ವುದು, ದಿನಕ್ಕೆ ಎರಡುಸಾರಿ ಊಟಮಾಡುವುದು, ಕರಡಿಗೆ ಹಾಕುವುದು ಇವುಗಳನ್ನು ಯಾವಾಗಲೂ ಬಿಟ್ಟುಬಿಡಬೇಕು. ಸ್ನಾನವನ್ನು ಮಾಡಿ ಬಿಳಿಯ ವಸ್ತ್ರವನ್ನು ಧರಿಸಬೇಕು. ಜಿತೇಂದ್ರಿಯಳಾಗಿಯೂ, ಜಿತ ಕ್ರೋಧಳಾಗಿಯೂ ಇರಬೇಕು.

ನ ಕಲ್ಕ ಕುಲಕಾ ಸಾಧ್ವೀ ತಂದ್ರಾಲಸ್ಯ ವಿವರ್ಜಿತಾ ।
ಸುನಿರ್ಮಲಾ ಶುಭಾಚಾರಾ ನಿತ್ಯಂ ಸಂಪೂಜಯೇದ್ಧರಿಂ ॥
ಕ್ಷಿತಿಶಾಯಿ ಭವೇದ್ರಾತ್ರೌ ಶುಚೌ ದೇಶೇ ಕುಶೋತ್ತರೇ ।
ಧ್ಯಾನಯೋಗಪರಾ ನಿತ್ಯಂ ಸತಾಂ ಸಂಗೇ ವ್ಯವಸ್ಥಿತಾ ॥
(ವೃದ್ಧಹಾರೀತ ೧೧-೨೦೮-೨೦೯)

ತಪಶ್ಚರಣ ಸಂಯುಕ್ತಾ ಯಾವಜ್ಜೀವಂ ಸಮಾಚರೇತ್ ।
ತಾವತ್ತಸ್ಮಿನ್ನಿರಾಹಾರಾ ಭವೇದ್ಯದಿ ರಜಸ್ವಲಾ ॥

(ವೃದ್ಧಹಾರೀತ ೧೧-೨೧೦)

ಡಂಭವಿಲ್ಲದಿರುವುದು, ಇತರರಿಗೆ ಕೇಡನ್ನುಂಟುಮಾಡುವ ಬುದ್ಧಿ ಇಲ್ಲದಿರುವುದು, ಪವಿತ್ರ ಆಹಾರವನ್ನು ಸೇವಿಸುವುದು, ಪಾಪಪ್ರವೃತ್ತಿ ರಹಿತಳಾಗಿರುವುದು, ಹೊಟ್ಟೆಕಿಚ್ಚು, ಮೋಸ ಯಾವುದೂ ಇಲ್ಲದಿರುವುದು, ಅತಿ ನಿದ್ರೆ, ಸೋಮಾರಿತನ ಇಲ್ಲದಿರುವುದು ಇವೇ ಮುಂತಾದುವು ವಿಧವೆಯಲ್ಲಿರಬೇಕಾದ ಲಕ್ಷಣಗಳು. ಯಾವಾಗ್ಯೂ ಅಂತರ ಬಾಹ್ಯ ನಿರ್ಮಲಳಾಗಿ, ಶುಭ ಮತ್ತು ಪವಿತ್ರಾಚರಣೆಯಿಂದ ಪರಮಾತ್ಮನನ್ನು ಧ್ಯಾನಿಸುವುದು, ರಾತ್ರಿ ವೇಳೆಯಲ್ಲಿ ಪವಿತ್ರ ಸ್ಥಳದಲ್ಲಿ ದರ್ಭೆಯ ಚಾಪೆಯ ಮೇಲೆ ಮಲಗುವುದು, ಧ್ಯಾನಯೋಗಪರಾಯಣಳಾಗಿ ನಿತ್ಯದಲ್ಲಿಯೂ ಸತ್ಸಂಗದಲ್ಲಿರುವುದು—ಇದು ವಿಧವೆಯರ ಜೀವನಕ್ರಮ. ಯಾವಜ್ಜೀವವೂ ತಪಶ್ಚರಣೆಯಲ್ಲಿಯೇ ಇರಬೇಕು; ಮುಟ್ಟಾದ ಸಮಯದಲ್ಲಿ ನಿರಾಹಾರ ಮಾಡಬೇಕು.

ವಿಧವಾಕಬರೀ ಬಂಧೋ ಭರ್ತೃ ಬಂಧಾಯ ಜಾಯತೇ ।
ಶಿರಸೋ ವಪನಂ ತಸ್ಮಾತ್ಕಾರ್ಯಂ ವಿಧವಯಾ ತಥಾ ॥ (ವ್ಯಾಸಸ್ಮೃತಿ)

ಪರ್ಯಂಕ ಶಾಯಿನೀ ನಾರೀ ವಿಧವಾ ಪಾತಯೇತ್ಪತಿಂ ।
ತಸ್ಮಾದ್ಭೂಶಯನಂ ಕಾರ್ಯಂ ಪತಿಸೌಖ್ಯಸಮೀಹಯಾ ।

ವಿಧವೆಯ ಕೇಶಬಂಧನವು ಪತಿಗೆ ಬಂಧನಕರವಾಗುವುದು. ಆದುದರಿಂದ ವಿಧವೆಯು ಕೇಶವಪನವನ್ನು ಮಾಡಿಸಿಕೊಳ್ಳತಕ್ಕದ್ದು. ಮಂಚದ ಮೇಲೆ ಮಲಗುವ ವಿಧವೆಯು ಪತಿಯ ಅಧಃಪತನಕ್ಕೆ ಕಾರಣಳಾಗುವಳು. ಪತಿಗೆ ಸುಖವಾಗಬೇಕೆಂದು ಕೋರುವ ಸತಿಯು ಭೂಶಯನವನ್ನು ಮಾಡತಕ್ಕದ್ದು.

ಗಂಧದ್ರವ್ಯಸ್ಯ ಸಂಬಂಧೋ ನೈವ ಕಾರ್ಯಸ್ತಥಾ ಕ್ವಚಿತ್ ।
ತರ್ಪಣಂ ಪ್ರತ್ಯಹಂ ಭರ್ತುಃ ಕುರ್ಯಾತ್ಕುಶ ತಿಲೋದಕೈಃ ॥

ತತ್ಪಿತುಸ್ತತ್ಪಿತುಶ್ಚಾಪಿ ನಾಮಗೋತ್ರಾನು ಪೂರ್ವಕಂ ।
ವಿಷ್ಣೋಸ್ತು ಪೂಜನಂ ಕಾರ್ಯಂ ಪತಿಬುಧ್ಯಾ ನ ಚಾನ್ಯಥಾ ॥

ಪತಿಮೇವ ಸದಾ ಧ್ಯಾಯೇದ್ವಿಷ್ಣುರೂಪಧರಂ ಪತಿಂ ।
ಏವಂ ಧರ್ಮಪರಾ ನಿತ್ಯಂ ವಿಧವಾಪಿ ಪತಿವ್ರತಾ ॥

ವಿಧವೆಯು ಸುಗಂಧ ದ್ರವ್ಯಗಳನ್ನು ಯಾವಾಗಲೂ ಉಪಯೋಗಿಸ ಕೂಡದು. ಕುಶ ತಿಲೋದಕಗಳಿಂದ ನಾಮಗೋತ್ರಪೂರ್ವಕವಾಗಿ ಮಾವ, ಮಾವನ ತಂದೆ ಮತ್ತು ಪತಿಗೆ ಪ್ರತಿನಿತ್ಯವೂ ತರ್ಪಣವನ್ನು ಕೊಡಬೇಕು. ಪತಿಬುದ್ಧಿಯಿಂದ ವಿಷ್ಣುವಿನ ಅರ್ಚನೆಯನ್ನು ಮಾಡಬೇಕು. ಪತಿಯು ವಿಷ್ಣುರೂಪನಾಗಿರುವನೆಂಬುದನ್ನು ನಿಶ್ಚೈಸಿ, ವಿಷ್ಣು ಧ್ಯಾನ ಪರಾಯಣಳಾಗಿರಬೇಕು. ಇದು ವಿಧವೆಯ ಪತಿವ್ರತಾ ಧರ್ಮ.

ವಿಧವಾ ಕೇಶವಪನದ ಬಗ್ಗೆ ಈಗಿನ ಸಮಾಜದಲ್ಲಿ ಬಹಳವಾಗಿ 'ಭವತಿ ನ ಭವತೀ' ಆಗುತ್ತಿದೆ. ಮೊದಲು ಸಹಗಮನದ ಪದ್ಧತಿಯು ಹೆಚ್ಚಾಗಿತ್ತು. ವಾಪಕ್ಷವಾಗಿ ಕೇಶವಪನಾದಿ ಕ್ರಮಗಳಿಂದ ಸನ್ಯಸ್ತಳಾಗಿರು ವಂಥಾದ್ದು ಕೂಡ ಮೇಲೆ ಉದಾಹರಿಸಿದ ವ್ಯಾಸಸ್ಮೃತಿಯಿಂದ ಸ್ಪಷ್ಟ ವಾಗುವುದು. ಸಹಗಮನದ ಪದ್ಧತಿಯು ಆಚರಣದಲ್ಲಿ ಬಂದಿತು. ಕೇಶ ವಪನವು ಸನ್ಯಸ್ತವೃತ್ತಿಯ ಸೂಚಕವಿದೆ, ಇದೊಂದು ದೀಕ್ಷೆಯೇ ಸರಿ. ಕೇಶಧಾರಣೆಯನ್ನು ಮಾಡಿದರೆ, ಕೇಶ ಸಂಗೋಪನಕ್ಕಾಗಿ ಇಚ್ಛೆಯ ವಿರುದ್ಧವೂ ಕೂಡ ತೈಲಾದಿಗಳಿಂದ ಬಾಚಿಕೊಳ್ಳುವುದು, ಕನ್ನಡಿಯನ್ನು ನೋಡಿಕೊಳ್ಳುವುದು, ಎರೆದುಕೊಳ್ಳುವುದು ಇತ್ಯಾದಿ ದೇಹಾಭಿಮಾನ ವನ್ನು ಬೆಳೆಯಿಸುವ, ವಿರಕ್ತಿಯ ಜೀವನಕ್ಕೆ ಕೆಲಮಟ್ಟಿಗಾದರೂ ಅಡ್ಡ ಬರುವ ಕ್ರಮಗಳನ್ನು ನಡೆಯಿಸಲೇಬೇಕಾಗಿ ಬರುವುದು. ಉಪಾಧಿಯ ದೃಷ್ಟಿಯಿಂದಲೂ ಅವರ ಮಾನಸಿಕ ಪಾವಿತ್ರ್ಯ ಮತ್ತು ವಿರಕ್ತಿಗೆ ಬಹು ಮಟ್ಟಿಗೆ ಅನುಕೂಲವಾಗುವುದಕ್ಕಾಗಿಯೂ, ಸೌಂದರ್ಯಾದಿ ಭಾವಗಳು ಅವರಲ್ಲಿಯೂ, ನೋಡುವವರಲ್ಲಿಯೂ ಉಂಟಾಗದೆ, ಈರ್ವರನ್ನೂ ಅಮಾರ್ಗದಿಂದ ತಪ್ಪಿಸುವುದಕ್ಕಾಗಿಯೂ ಈ ಕ್ರಮವನ್ನು ಕೈಕೊಂಡಿರುವು ದೆಂಬುದು ತೋರಿಬರುವುದು. ಸ್ತ್ರೀಯರಿಗೆ ಕೇಶವಪನದ ಮೂಲಕ ಕಾಮಾದಿ ವೃತ್ತಿಗಳು ಕೆಲಮಟ್ಟಿಗಾದರೂ ಕಡಿಮೆಯಾಗುವುದೆಂದು ತಿಳಿದು ಕ್ರಿಸ್ತಾನುಯಾಯಿಗಳಾದ ಸನ್ಯಾಸಿನಿಯರಲ್ಲಿಯೂ ಈ ಕೇಶವಪನದ ಪದ್ಧತಿಯು ನಡೆದುಬಂದಿರುವುದು. ಇದು ಒಂದು ವಿಚಾರಣೀಯ

ತಪಶ್ಚರಣ ಸಂಯುಕ್ತಾ ಯಾವಜ್ಜೀವಂ ಸಮಾಚರೇತ್ ।
ತಾವತ್ತಿಷ್ಠೇನ್ನಿರಾಹಾರಾ ಭವೇದ್ಯದಿ ರಜಸ್ವಲಾ ॥

(ವೃದ್ಧಹಾರೀತ ೧೧-೨೧೧)

ಡಂಭವಿಲ್ಲದಿರುವುದು, ಇತರರಿಗೆ ಕೇಡನ್ನುಂಟುಮಾಡುವ ಬುದ್ಧಿ ಇಲ್ಲದಿರುವುದು, ಪವಿತ್ರ ಆಹಾರವನ್ನು ಸೇವಿಸುವುದು, ಪಾಪಪ್ರವೃತ್ತಿ ರಹಿತಳಾಗಿರುವುದು, ಹೊಟ್ಟೆಕಿಚ್ಚು, ಮೋಸ ಯಾವುದೂ ಇಲ್ಲದಿರುವುದು, ಅತಿ ನಿದ್ರೆ, ಸೋಮಾರಿತನ ಇಲ್ಲದಿರುವುದು ಇವೇ ಮುಂತಾದುವು ವಿಧವೆಯಲ್ಲಿರಬೇಕಾದ ಲಕ್ಷಣಗಳು. ಯಾವಾಗ್ಯೂ ಅಂತರ ಬಾಹ್ಯ ನಿರ್ಮಲಳಾಗಿ, ಶುಭ ಮತ್ತು ಪವಿತ್ರಾಚರಣೆಯಿಂದ ಪರಮಾತ್ಮನನ್ನು ಧ್ಯಾನಿಸುವುದು, ರಾತ್ರಿ ವೇಳೆಯಲ್ಲಿ ಪವಿತ್ರ ಸ್ಥಳದಲ್ಲಿ ದರ್ಭೆಯ ಚಾಪೆಯ ಮೇಲೆ ಮಲಗುವುದು, ಧ್ಯಾನಯೋಗಪರಾಯಣಳಾಗಿ ನಿತ್ಯದಲ್ಲಿಯೂ ಸತ್ಸಂಗದಲ್ಲಿರುವುದು—ಇದು ವಿಧವೆಯರ ಜೀವನಕ್ರಮ. ಯಾವಜ್ಜೀವವೂ ತಪಶ್ಚರಣೆಯಲ್ಲಿಯೇ ಇರಬೇಕು; ಮುಟ್ಟಾದ ಸಮಯದಲ್ಲಿ ನಿರಾಹಾರ ಮಾಡಬೇಕು.

ವಿಧವಾಕಬರೀ ಬಂಧೋ ಭರ್ತೃ ಬಂಧಾಯ ಜಾಯತೇ ।
ಶಿರಸೋ ವಪನಂ ತಸ್ಮಾತ್ಕಾರ್ಯಂ ವಿಧವಯಾ ತಥಾ ॥ (ವ್ಯಾಸಸ್ಮೃತಿ)

ಪರ್ಯಂಕ ಶಾಯಿನೀ ನಾರೀ ವಿಧವಾ ಪಾತಯೇತ್ಪತಿಂ ।
ತಸ್ಮಾದ್ಭೂಶಯನಂ ಕಾರ್ಯಂ ಪತಿಸೌಖ್ಯಸಮೀಹಯಾ ।

ವಿಧವೆಯ ಕೇಶಬಂಧನವು ಪತಿಗೆ ಬಂಧನಕರವಾಗುವುದು. ಆದುದರಿಂದ ವಿಧವೆಯು ಕೇಶವಪನವನ್ನು ಮಾಡಿಸಿಕೊಳ್ಳತಕ್ಕದ್ದು. ಮಂಚದ ಮೇಲೆ ಮಲಗುವ ವಿಧವೆಯು ಪತಿಯ ಅಧಃಪತನಕ್ಕೆ ಕಾರಣಳಾಗುವಳು. ಪತಿಗೆ ಸುಖವಾಗಬೇಕೆಂದು ಕೋರುವ ಸತಿಯು ಭೂಶಯನವನ್ನು ಮಾಡತಕ್ಕದ್ದು.

ಗಂಧದ್ರವ್ಯಸ್ಯ ಸಂಬಂಧೋ ನೈವ ಕಾರ್ಯಸ್ತಥಾ ಕ್ವಚಿತ್ ।
ತರ್ಪಣಂ ಪ್ರತ್ಯಹಂ ಭರ್ತುಃ ಕುರ್ಯಾತ್ಕುಶ ತಿಲೋದಕೈಃ ॥

ತತ್ಪಿತುಸ್ತತ್ಪಿತುಶ್ಚಾಪಿ ನಾಮಗೋತ್ರಾನು ಪೂರ್ವಕಂ ।
ವಿಷ್ಣೋಸ್ತು ಪೂಜನಂ ಕಾರ್ಯಂ ಪತಿಬುಧ್ಯಾ ನ ಚಾನ್ಯಥಾ ॥

ಪತಿಮೇವ ಸದಾ ಧ್ಯಾಯೇದ್ವಿಷ್ಣುರೂಪಧರಂ ಪತಿಂ ।
ಏವಂ ಧರ್ಮಪರಾ ನಿತ್ಯಂ ವಿಧವಾಪಿ ಪತಿವ್ರತಾ ॥

ವಿಧವೆಯು ಸುಗಂಧದ್ರವ್ಯಗಳನ್ನು ಯಾವಾಗಲೂ ಉಪಯೋಗಿಸ ಕೂಡದು. ಕುಶ ತಿಲೋದಕಗಳಿಂದ ನಾಮಗೋತ್ರಪೂರ್ವಕವಾಗಿ ಮಾವ, ಮಾವನ ತಂದೆ ಮತ್ತು ಪತಿಗೆ ಪ್ರತಿನಿತ್ಯವೂ ತರ್ಪಣವನ್ನು ಕೊಡಬೇಕು. ಪತಿಬುದ್ಧಿಯಿಂದ ವಿಷ್ಣುವಿನ ಅರ್ಚನೆಯನ್ನು ಮಾಡಬೇಕು. ಪತಿಯು ವಿಷ್ಣುರೂಪನಾಗಿರುವನೆಂಬುವನ್ನು ನಿಶ್ಚೈಸಿ, ವಿಷ್ಣುಧ್ಯಾನ ಪರಾಯಣಳಾಗಿರಬೇಕು. ಇದು ವಿಧವೆಯ ಪತಿವ್ರತಾ ಧರ್ಮ.

ವಿಧವಾ ಕೇಶವಪನದ ಬಗ್ಗೆ ಈಗಿನ ಸಮಾಜದಲ್ಲಿ **ಬಹಳವಾಗಿ 'ಭವತಿ ನ ಭವತೀ'** ಆಗುತ್ತಿದೆ. ಮೊದಲು ಸಹಗಮನದ ಪದ್ಧತಿಯು ಹೆಚ್ಚಾಗಿತ್ತು. ವಾಪಕ್ಷವಾಗಿ ಕೇಶವಪನಾದಿ ಕ್ರಮಗಳಿಂದ ಸನ್ಯಸ್ತಳಾಗಿರುವಂಥಾದ್ದು ಕೂಡ ಮೇಲೆ ಉದಾಹರಿಸಿದ ವ್ಯಾಸಸ್ಮೃತಿಯಿಂದ ಸ್ಪಷ್ಟವಾಗುವುದು. ಸಹಗಮನದ ಪದ್ಧತಿಯು ಆಚರಣದಲ್ಲಿ ಬಂದಿತು. ಕೇಶವಪನವು ಸನ್ಯಸ್ತವೃತ್ತಿಯ ಸೂಚಕವಿದೆ, ಇದೊಂದು ದೀಕ್ಷೆಯೇ ಸರಿ. ಕೇಶಧಾರಣೆಯನ್ನು ಮಾಡಿದರೆ, ಕೇಶ ಸಂಗೋಪನಕ್ಕಾಗಿ ಇಚ್ಛೆಯ ವಿರುದ್ಧವೂ ಕೂಡ ತೈಲಾದಿಗಳಿಂದ ಬಾಚಿಕೊಳ್ಳುವುದು, ಕನ್ನಡಿಯನ್ನು ನೋಡಿಕೊಳ್ಳುವುದು, ಎರೆದುಕೊಳ್ಳುವುದು ಇತ್ಯಾದಿ ದೇಹಾಭಿಮಾನವನ್ನು ಬೆಳೆಯಿಸುವ, ವಿರಕ್ತಿಯ ಜೀವನಕ್ಕೆ ಕೆಲಮಟ್ಟಿಗಾದರೂ ಅಡ್ಡ ಬರುವ ಕ್ರಮಗಳನ್ನು ನಡೆಯಿಸಲೇಬೇಕಾಗಿ ಬರುವುದು. ಉಪಾಧಿಯ ದೃಷ್ಟಿಯಿಂದಲೂ ಅವರ ಮಾನಸಿಕ ಪಾವಿತ್ರ್ಯ ಮತ್ತು ವಿರಕ್ತಿಗೆ ಬಹು ಮಟ್ಟಿಗೆ ಅನುಕೂಲವಾಗುವುದಕ್ಕಾಗಿಯೂ, ಸೌಂದರ್ಯಾದಿ ಭಾವಗಳು ಅವರಲ್ಲಿಯೂ, ನೋಡುವವರಲ್ಲಿಯೂ ಉಂಟಾಗದೆ, ಈರ್ವರನ್ನೂ ಅಮಾರ್ಗದಿಂದ ತಪ್ಪಿಸುವುದಕ್ಕಾಗಿಯೂ ಈ ಕ್ರಮವನ್ನು ಕೈಕೊಂಡಿರುವುದೆಂಬುದು ತೋರಿಬರುವುದು. ಸ್ತ್ರೀಯರಿಗೆ ಕೇಶವಪನದ ಮೂಲಕ ಕಾಮಾದಿ ವೃತ್ತಿಗಳು ಕೆಲಮಟ್ಟಿಗಾದರೂ ಕಡಿಮೆಯಾಗುವುದೆಂದು ತಿಳಿದು ಕ್ರಿಸ್ತಾನುಯಾಯಿಗಳಾದ ಸನ್ಯಾಸಿನಿಯರಲ್ಲಿಯೂ ಈ ಕೇಶವಪನದ ಪದ್ಧತಿಯು ನಡೆದುಬಂದಿರುವುದು. ಇದು ಒಂದು ವಿಚಾರಣೀಯ

ಸಂಗತಿಯಾಗಿದೆ. ಪ್ರಾಯಃ ಕೇಶವಪನ ಮಾಡಿಕೊಂಡ ವಿಧವೆಗೆ ಅನಾಯಾಸವಾಗಿಯೇ ದಾಗಿನಿಯನ್ನು ಹಾಕಿಕೊಳ್ಳುವ ಪದ್ಧತಿಯೂ ದೇಹವನ್ನು ಶೃಂಗರಿಸುವಿಕೆಯೂ ಮುಂತಾದ ಸಹಜವಾದ ಸ್ತ್ರೀಧರ್ಮಗಳೂ ಸಹ ನಷ್ಟವಾಗುವುದೆಂಬುದು ಕಂಡುಬರುವುದು. ಇದಲ್ಲವೇ ಅದರಿಂದ ಆಗತಕ್ಕ ದೊಡ್ಡ ಉಪಕಾರವು? ವಿರಕ್ತಿಗೆ ಇದು ಅನುಕೂಲವಾಗುವುದೆಂಬುದಕ್ಕೆ ಪ್ರಾರಂಭದಿದೊಂದು ಲಕ್ಷಣವು ಸಾಕಷ್ಟು ಪ್ರಮಾಣವಿಲ್ಲವೇ?

ವಿಧವಾ ಯತಿ ಮಾರ್ಗೇಣ ಕುಮಾರೀ ಚ ವಿಶೇಷತಃ ।
ತಾಂಬೂಲಾಭ್ಯಂಜನೇ ಚೈವ ಕಾಂಸ್ಯಪಾತ್ರೇ ಚ ಭೋಜನಂ ।
ಯತಿಶ್ಚ ಬ್ರಹ್ಮಚಾರೀ ಚ ವಿಧವಾ ಚ ಪರಿತ್ಯಜೇತ್ ॥

'ವಿಧವಾ ಯತಿ ಮಾರ್ಗೇಣ' ಈ ಪದಗಳಿಂದ ವಿಧವೆಯು ಸನ್ಯಾಸಮಾರ್ಗದಿಂದ ಮೋಕ್ಷವನ್ನು ಪಡೆಯತಕ್ಕವಳೆಂದು ಸ್ಪಷ್ಟವಾಗುವುದು. ಸ್ತ್ರೀಯರಿಗೆ ಕೇಶವಪನದಿಂದ ಸನ್ಯಾಸಿಗಳಂತೆ ಮೋಕ್ಷಮಾರ್ಗದ ಅಧಿಕಾರವು ಬರುವುದು— ಅದೊಂದು ಸನ್ಯಾಸ ದೀಕ್ಷೆಯೇ ಆಗಿರುವುದು —ಇದೊಂದು ಸ್ತ್ರೀಯರ ಸನ್ಯಾಸವೇ ಸರಿ. ತಾಂಬೂಲ, ಅಭ್ಯಂಗನ ಮತ್ತು ಕಂಚಿನಪಾತ್ರೆಗಳಲ್ಲಿ ಊಟಮಾಡುವುದು— ಈ ಮೂರೂ ಕಾಮೋತ್ತೇಜಕವಾದವುಗಳೆಂದು ಯತಿ, ವಿಧವಾ, ಬ್ರಹ್ಮಚರ್ಯವನ್ನು ಮರಣಾಂತದವರೆಗೂ ಪರಿಪಾಲಿಸುವಂಥಾ ಬ್ರಹ್ಮಚಾರಿ– ಕುಮಾರಿಗಳಿಗೆ ನಿಷಿದ್ಧವಾದುದೆಂದು ಹೇಳಲ್ಪಟ್ಟಿರುವುದು.

ನ ಸ್ತ್ರೀಣಾಂ ವಪನಂ ಕುರ್ಯಾತ್ ನ ಚ ಗೋವ್ರಜನಂ ಸ್ಮೃತಂ ।
ನ ಚ ಗೋಷ್ಠೇ ವಸೇದ್ರಾತ್ರೌ ನ ಕುರ್ಯಾದ್ವೈದಿಕೀಂ ಶ್ರುತಿಂ ॥
(ಬೃಹದ್‌ಯಮ ೪–೧೬)

ನ ಸ್ತ್ರೀಯಾ ವಪನಂ ಕಾರ್ಯಂ ನ ಚ ವೀರಾಸನಂ ತಥಾ ।
ನ ಚ ಗೋಷ್ಠೇ ನಿವಾಸಂ ಚ ನ ಗಚ್ಛಂತೀ ಮನುವ್ರಜೇತ್ ॥
(ಯಮಸ್ಮೃತಿ ಶ್ಲೋಕ ೫೫)

ಇತ್ಯಾದಿ ಶ್ಲೋಕಗಳ ಆಧಾರವನ್ನು ತೆಗೆದುಕೊಂಡು ಕೆಲವರು ವಿಧವಾ ಕೇಶವಪನವು ನಿಷೇಧಮಾಡಲ್ಪಟ್ಟದೆ ಎಂದೂ ಸಾಧಿಸುವರು.

"ಪ್ರಾಯಶ್ಚಿತ್ತಾಂಗ ವಪನಸ್ಯಸ್ತ್ರ್ಯಾದಿ ವಿಷಯೇಽಪವಾದಃ" ಸಂಘಟಿಸಿದ ಪಾಪಗಳ ಪ್ರಾಯಶ್ಚಿತ್ತವನ್ನು ಮಾಡಿಸಬೇಕಾದರೆ ಪುರುಷರಂತೆ ಸುವಾಸಿನಿಯರಿಗೆ ಪ್ರಾಯಶ್ಚಿತ್ತಾಂಗರೂಪವಾದ ಕೇಶವಪನವನ್ನು ಹೇಳಲಿಲ್ಲ ಎನ್ನುವುದಾಗಿ ಈ ಶ್ಲೋಕಗಳ ತಾತ್ಪರ್ಯವನ್ನು ಅಲ್ಲಿ ಕೊಟ್ಟಿರುವುದು. ಪ್ರಾಯಶ್ಚಿತ್ತಗಳನ್ನು ವಿಧಿಸುವ ಸಂದರ್ಭದಲ್ಲಿಯೇ ಈ ಶ್ಲೋಕಗಳು ಕೊಡಲ್ಪಟ್ಟಿವೆ. ಹೀಗಿರಲಾಗಿ ವಿಧವಾ ಕೇಶವಪನದ ನಿಷೇಧರೂಪವಾದ ವಾಕ್ಯಗಳಿವೆಂದು ಕೆಲವರು ಸಾಧಿಸುವುದನ್ನು ನೋಡಿದರೆ ಅವರ ಅಕಾರಣದ ಆಗ್ರಹದ ಬಗ್ಗೆ ನಗುವುಂಟಾಗುವುದು. ಪರಪುರುಷರ ಸ್ಪರ್ಶವು ವಿಧವೆಯರಿಗೆ ನಿಷಿದ್ಧವಾದುದು ಹಾಗೂ ಅಸಹ್ಯವಾದುದೆಂದ ಮೇಲೆ ಕೇಶವಪನದ ವಿಧಿಯಿಂದ ಆಗುವ ನಾಪಿತನ ಸ್ಪರ್ಶವಾದರೂ ಏತಕ್ಕೆ ಬೇಕು? ಎಂಬೀ ವಿಚಾರಸರಣಿಯು ಆಧುನಿಕ ಸಮಾಜದಲ್ಲಿ ಸರ್ವತ್ರ ಪ್ರಸೃತವಾಗಿರುವುದು. ಪೂರ್ವಾಪರವಾಗಿ ಬಂದ ಉಪಕಾರಕವಾದ ಈ ಪದ್ಧತಿಯನ್ನು ಉಳಿಸಿ ಈ ಅಪವಾದದ ಪರಿಹಾರವನ್ನು ಮಾಡತಕ್ಕುದು ಎಂದಾದರೆ, ನಾಪಿತ ಜಾತಿಯ ವಿಧವಾ ಸ್ತ್ರೀಯರಿಂದ ಇದು ಆಗುವಂತೆ ಮಾಡುವುದೆಂಬ ಒಂದು ಉಪಾಯವು ತೋಚುವುದು. ಸಮಾಜ ಮತ್ತು ಸರ್ಕಾರಗಳು ಈ ಕಡೆಗೆ ಗಮನಕೊಟ್ಟರೆ ಸಹಜ ಸಾಧ್ಯವಾಗುವುದು. ಆರ್ಯಸಂಸ್ಕೃತಿಯ ದೃಷ್ಟಿಯಿಂದ ಭಾರತದ ಸದ್ಯದ ಪರಿಸ್ಥಿತಿಯ ವಿಚಾರವನ್ನು ಮಾಡುತ್ತಿರುವಾಗ ಸಹಜವಾಗಿ ಕಂಡುಬರುವ ಆಧುನಿಕ ಶಾಸನ ಕರ್ತೃಗಳಲ್ಲಿ ವಾದಗ್ರಸ್ತವಾಗಿರುವಂಥ ಸಗೋತ್ರ ವಿವಾಹ, ಅಸವರ್ಣ ವಿವಾಹ, ವಿವಾಹ ವಿಚ್ಛೇದ, ಪುನರ್ವಿವಾಹ ಮುಂತಾದ ಕೆಲವು ಧಾರ್ಮಿಕ ಮತ್ತು ಸಾಮಾಜಿಕ ವಿಷಯಗಳು ಕಣ್ಣಮುಂದೆ ಬಂದು, ಇಷ್ಟು ವಿಚಾರವಾಯಿತು. ಇನ್ನು ಅಸ್ಪೃಶ್ಯೋದ್ಧಾರ, ಗೋವಧಬಂದಿ ಮುಂತಾದ ಕೆಲವು ವಿಷಯಗಳಿರುವುವು. ಯಥಾವಕಾಶವಾಗಿ ಅವುಗಳ ಬಗ್ಗೆ ಸ್ವಲ್ಪಮಟ್ಟಿಗೆ ವಿಚಾರಿಸೋಣ.

## ಸಹಶಿಕ್ಷಣ ಮತ್ತು ಸಹಚರ್ಯ

ಸ್ತ್ರೀದೇಹವು ಪ್ರಜೋತ್ಪಾದನದ ಸಾಧನವಾಗಿರುವುದರಿಂದ ಅದು ತನ್ನ ಸ್ವಭಾವದಿಂದಲೇ ತನ್ನ ಸಾಹಚರ್ಯದಲ್ಲಿ ಪುರುಷನ ಕಾಮಾದಿ

ವಿಕಾರಗಳನ್ನು ಉದ್ದೀಪಿಸುವಂಥ ಶೀಲವುಳ್ಳದ್ದು. ಈ ಸೃಷ್ಟಿನಿಯಮ ವನ್ನು ಅನುಲಕ್ಷಿಸಿ ಅಮಾರ್ಗವಾಗಿ ವರ್ತಿಸಲು ಯಾರಿಗೂ ಅವಕಾಶ ವೊದಗದಂತೆ ಮನುವು, 'ಪಿತಾ ರಕ್ಷತಿ ಕೌಮಾರೇ ಭರ್ತಾ ರಕ್ಷತಿ ಯೌವನೇ। ರಕ್ಷಂತಿ ಸ್ಥಾವಿರೇ ಪುತ್ರಾಃ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ॥' ಎಂಬುದಾಗಿ ಹೇಳಿರುವನು. ಬಾಲ್ಯದಲ್ಲಿ ತಂದೆಯೂ, ಯೌವನದಲ್ಲಿ ಪತಿಯೂ, ವಾರ್ಧಿಕ್ಯದಲ್ಲಿ ಪುತ್ರರೂ ಸ್ತ್ರೀಯನ್ನು ರಕ್ಷಿಸಬೇಕೆಂದು ಇದರ ಅರ್ಥ.

ಅಗ್ನಿಕುಂಡ ಸಮಾ ನಾರೀ ಘೃತಕುಂಭ ಸಮೋ ನರಃ ।
ಸಂಸರ್ಗೇಣ ವಿಲೀಯೇತ ತಸ್ಮಾತ್ತಾಂ ಪರಿವರ್ಜಯೇತ್ ॥
(ಅವಧೂತ ಗೀತೆ, ಕೊನೆಯ ಅಧ್ಯಾಯ)

ಈ ಶ್ಲೋಕದ ತಾತ್ಪರ್ಯವೂ ಈ ವಿಧವಾಗಿಯೇ ಇರುವುದು.

ದತ್ತಾತ್ರೇಯರು ಮಾನವ ಜಾತಿಯ ಹಿತೇಚ್ಛುಗಳಾಗಿ ಈ ಶ್ಲೋಕ ವನ್ನು ಬೋಧಿಸಿದರು. ಇದು ಅವಧೂತ ಗೀತೆಯ ಕೊನೆಯ ಅಧ್ಯಾಯದ ಶ್ಲೋಕ. ಈ ಶ್ಲೋಕದಲ್ಲಿ ಸ್ತ್ರೀಗೆ ಅಗ್ನಿಕುಂಡದ ಉಪಮೇಯವನ್ನೂ ಪುರುಷನಿಗೆ ತುಪ್ಪವನ್ನು ಇಟ್ಟಿರುವ ಕೊಡದ ಉಪಮೆಯನ್ನೂ ಕೊಟ್ಟು, ಅಗ್ನಿಕುಂಡದ ಸಮೀಪದಲ್ಲಿರುವ ಘೃತಕುಂಭದಂತೆ ಪುರುಷನು ಸ್ತ್ರೀಯ ಸಾಹಚರ್ಯದಲ್ಲಿ ವಿನಾಶವನ್ನು ಹೊಂದುವನೆಂದು ಹೇಳಿ, ಪರಸ್ತ್ರೀ ಸಾಹಚರ್ಯವನ್ನು ಪುರುಷರಿಗೆ ತೀವ್ರವಾಗಿ ನಿಷೇಧಿಸಿರುವುದು.

ತತ್ವಜ್ಞಾನದ ಅಭ್ಯಾಸದಿಂದ ಏಕಾತ್ಮದೃಷ್ಟಿಯು ನೆಲೆಗೊಳ್ಳುವ ವರೆಗೂ, ಅಕಾಯವಾದ ಆತ್ಮದೃಷ್ಟಿಯು ಸರ್ವತ್ರ ಪಸರಿಸುವವರೆಗೂ, ಕಾಮಾದಿ ವಿಕಾರಗಳ ಸಮೂಲ ನಾಶವಾಗುವವರೆಗೂ ಅಥವಾ ಪರಸ್ತ್ರೀ ಯಲ್ಲಿ ಮಾತೃವತ್ ಬುದ್ಧಿ ಮತ್ತು ಪರಪುರುಷರಲ್ಲಿ ಪಿತೃವತ್ ಬುದ್ಧಿ ನೆಲೆಗೊಳ್ಳುವವರೆಗೂ ಧರ್ಮತತ್ವಗಳು ಬೇರುಬಿಟ್ಟು ಹೃದಯದಲ್ಲಿ ದೃಢ ವಾಗುವವರೆಗೂ, ನೀತಿಯು ಮೈಗೊಳ್ಳುವವರೆಗೂ, ವ್ಯಕ್ತಿ ಮತ್ತು ಮನುಷ್ಯಜನ್ಮದ ರಹಸ್ಯವು ಚೆನ್ನಾಗಿ ಮನದಟ್ಟಾಗುವವರೆಗೂ, ಪಶು ಧರ್ಮದ ನಿಷೇಧಕ್ಕಾಗಿ, ವ್ಯಕ್ತಿ ಮತ್ತು ಸಮಾಜದ ಆತ್ಯಂತಿಕ ಹಿತದ ದೃಷ್ಟಿಯಿಂದ ನಿಷೇಧಿಸಲ್ಪಟ್ಟ ಈ ಸಾಹಚರ್ಯವು ಪಥ್ಯಕರವೆಂದು ಯಾರು

ತಾನೇ ನಿಶ್ಚಯಿಸರು? ಈಗಿನ ಸಹಶಿಕ್ಷಣ ಮತ್ತು ಸಾಹಚರ್ಯದ ಕಡೆಗೆ ಈ ದೃಷ್ಟಿಯಿಂದ ಗಮನಕೊಟ್ಟು ಸುಧಾರಣೆ ಮಾಡತಕ್ಕದ್ದು — ಸಮಾಜದಲ್ಲಿ ಹಬ್ಬಿರುವ ಅನೀತಿಯನ್ನು ನಿಲ್ಲಿಸತಕ್ಕದ್ದು. ತರುಣ-ತರುಣಿಯರೂ ಸಹ ಇದರ ವಿಚಾರವನ್ನು ಮಾಡಿ ಜಾಗೃತರಾಗತಕ್ಕದ್ದು. ತನ್ನ ಶೀಲ ಸಂವರ್ಧನೆಗಾಗಿ ಪ್ರಾಣಪಣದಿಂದ ಯತ್ನಿಸತಕ್ಕದ್ದು.

## ತತ್ವಜ್ಞಾನಿ

ಏವಮೇವೈಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನರೂಪೇಣಾಭಿನಿಷ್ಪದ್ಯತೇ ಸ ಉತ್ತಮಃ ಪುರುಷಃ । ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾ ನೋಪಜನಂ ಸ್ಮರನ್ನಿದಂ ಶರೀರಂ, ಸ ಯಥಾ ಪ್ರಯೋಗ್ಯ ಆಚರಣೇ ಯುಕ್ತ ಏವಮೇವಾಯಮಸ್ಮಿನ್ಛರೀರೇ ಪ್ರಾಣೋ ಯುಕ್ತಃ ॥ (ಛಾಂದೋಗ್ಯ ೮-೧೨-೩). ದೇಹರಹಿತವಾಗಿರುವಂಥ ಆನಂದಘನ ಚೈತನ್ಯವೇ ನಿನ್ನ ಮತ್ತು ಈ ಎಲ್ಲದರ ಶುದ್ಧ ಸತ್ಯಸ್ವರೂಪವೆಂದು ಗುರೂಪದಿಷ್ಟ 'ತತ್ವಮಸಿ' ಈ ಮಹಾವಾಕ್ಯದ ಅರ್ಥ. ಇದನ್ನು ಅರಿತು, ಅಳವಡಿಸಿ, ಈ ನಾಮರೂಪರಹಿತ ಸ್ವಸಂವೇದ್ಯ ಸ್ವಪ್ರಕಾಶವಾದ ಜ್ಞಾನಾನಂದ ರೂಪವನ್ನು 'ಅಹಂ ಬ್ರಹ್ಮಾಸ್ಮಿ' ಎಂಬೀ ಮಹಾವಾಕ್ಯದ ಅನವರತ ಅನುಸಂಧಾನದಿಂದ ಪಡೆದು, ಈ ತನ್ನ ಸ್ವರೂಪದಿಂದಲೇ ಸ್ವಮಾತ್ರನಾಗಿರುವವನು ಉತ್ತಮನು. ಈತನು ಸ್ತ್ರೀ ಪುರುಷರ ಸಮಾಜದಲ್ಲಿದ್ದರೂ ಇವರ ಸಂಗಡ ಯಾನಗಳಲ್ಲಿ ಅಥವಾ ಭೋಜನಾದಿ ವ್ಯಾಪಾರಗಳಲ್ಲಿ ಸರಸ-ಸಲ್ಲಾಪಗಳನ್ನಾಡುತ್ತಿದ್ದರೂ, ಹಾಸ್ಯ-ವಿನೋದಾದಿಗಳಿಂದ ರಮಿಸಿ ಕ್ರೀಡಿಸುತ್ತಿದ್ದರೂ ಸರ್ವಾತ್ಮಭಾವದಿಂದಿರುವ ಸಮೀಪವಿದ್ದ ಶರೀರವನ್ನು ನೋಡನು. ತತ್ವಜ್ಞಾನಿಯು ಇವುಗಳ ನಿರಾಕರಣೆಯಿಂದ ನಿಶ್ಚಯಿಸಿದ, ಅತ್ಯಂತ ವಿಶುದ್ಧವಾದ, ಅದ್ವಿತೀಯ ಆನಂದಮಾತ್ರ ಆತ್ಮಸ್ಥಿತಿಯಿಂದ ತಾನೇ ತಾನಾಗಿರುವನು. ಇದು ಜ್ಞಾನಿಯ ಲಕ್ಷಣ — ಇದು ಆರ್ಯನ ಜ್ಞಾನನಿಷ್ಠೆ — ಜೀವನ್ಮುಕ್ತತೆ.

## ಆರ್ಯರ ಸ್ವಭಾವ

ಈ ಉನ್ನತ ಭೂಮಿಕೆಯನ್ನು ಹೊಂದದಿದ್ದರೂ ಆರ್ಯನು 'ಮಾತೃವತ್ಪರದಾರೇಷು ಪರದ್ರವ್ಯೇಷು ಲೋಷ್ಟವತ್' ಪರಸ್ತ್ರೀಯರನ್ನು ತಾಯಿಯೆಂತಲೂ, ಪರರ ದ್ರವ್ಯವನ್ನು ಮಣ್ಣಿನ ಹೆಂಟೆಯೆಂತಲೂ ಭಾವಿಸತಕ್ಕ ಶೀಲವುಳ್ಳವನು. 'ಮಾತೃವತ್ ಸ್ವಸೃವಚ್ಚೈವ ನಿತ್ಯಂ ದುಹಿತೃವಚ್ಚ ಯೇ। ಪರದಾರೇಷು ವರ್ತಂತೇ ತೇ ನರಾಃ ಸ್ವರ್ಗಗಾಮಿನಃ ॥' ತಾಯಿಯೆಂತಲೂ, ಅಕ್ಕತಂಗಿಯರೆಂತಲೂ, ಮಗಳೆಂತಲೂ ಪರಸ್ತ್ರೀಯರಲ್ಲಿ ವರ್ತಿಸುವವನು ಮೋಕ್ಷದ ದಾರಿಯನ್ನು ಅವಲಂಬಿಸುವನು. 'ಪರದಾರೇಷ್ವಸಂಸರ್ಗೋ ಧರ್ಮಸ್ತ್ರೀ ಪರಿರಕ್ಷಣಂ। ಅಹಿಂಸಾ ಸತ್ಯವಚನಂ ಸರ್ವಭೂತಾನುಕಂಪನಂ । ಶಮೋದಾನಂ ಯಥಾಶಕ್ತಿ ಗಾರ್ಹಸ್ಥ್ಯೇ ಧರ್ಮ ಉಚ್ಯತೇ ॥' ಪರಸ್ತ್ರೀಯರಲ್ಲಿ ಅಸಂಸರ್ಗ, ಧರ್ಮಪತ್ನಿಯ ರಕ್ಷಣೆ, ಅಹಿಂಸೆ, ಸತ್ಯವಚನ, ಭೂತದಯೆ, ಮನೋನಿಗ್ರಹ, ದೇಶ-ಕಾಲ-ಪಾತ್ರಗಳನ್ನರಿತು ಯಥಾಶಕ್ತಿ ದಾನ ಇವೇ ಮೊದಲಾದುವುಗಳು ಆರ್ಯರಾದ ಗೃಹಸ್ಥರ ಧರ್ಮಗಳು. ಈ ವಿಧವಾಗಿ ಆರ್ಯಸಂಸ್ಕೃತಿಯು ತನ್ನ ಜನರ ಸ್ವಭಾವವನ್ನು ಇತರರಿಗೆ ಸಾರುತ್ತಲಿರುವುದು.

## ಸಂಸ್ಕಾರಗಳು

ತನ್ನ ಜನರಲ್ಲಿ ಅಶುದ್ಧ ಮನಸ್ಸಿನ ಮೂಲಕವಾಗಿ ಒದಗುವ ಯಾವ ಅನೀತಿಯೂ, ಅನರ್ಥವೂ ಒದಗಬಾರದೆಂದು ಜನ್ಮ ತಾಳುವವನ ತಾಯಿ-ತಂದೆಯವರನ್ನು ಈತನ ಜನ್ಮ ಪೂರ್ವದಿಂದಲೇ ಗರ್ಭಾದಾನ, ಪುಂಸವನಾದಿ ಸಂಸ್ಕಾರಗಳಿಂದ ಪವಿತ್ರರನ್ನಾಗಿ ಮಾಡಿ, ಈತನ ಜನ್ಮದಿಂದಲೇ ಸಂಸ್ಕಾರಗಳನ್ನು ಮಾಡುತ್ತಾ ಪ್ರತಿಯೊಬ್ಬನನ್ನೂ ಶುದ್ಧ ಆಚಾರ ವಿಚಾರವುಳ್ಳವನನ್ನಾಗಿ ಮಾರ್ಪಡಿಸುವುದು. ಈ ಸಂಸ್ಕಾರಗಳಲ್ಲಿ ಈಗಿನ ಕಾಲದಲ್ಲಿ ಉಂಟಾಗಿರುವ ಉದಾಸೀನತೆಯೇ ಈಗಿನ ಸಮಾಜದ ಅವನತಿಗೆ ಒಂದು ಕಾರಣವಾಗಿರುವುದು.

## ಪ್ರವೃತ್ತಿ, ನಿವೃತ್ತಿರೂಪವಾದ ಸಗುಣ ನಿರ್ಗುಣೋಪಾಸನೆ

ವೈದಿಕ ಆರ್ಯಧರ್ಮದ ಉನ್ನತ ಸಂಸ್ಕೃತಿಯಲ್ಲಿ ಪ್ರವೃತ್ತಿ, ನಿವೃತ್ತಿ ಎಂಬ ಎರಡು ಹೆದ್ದಾರಿಗಳಿರುವುವು. ಇವು ಪರಮಾತ್ಮನ ಸಗುಣ_

ನಿರ್ಗುಣಾತ್ಮಕವಾದ ಎರಡು ಉಪಾಸನಾ ಮಾರ್ಗಗಳು. ಸಗುಣ ಪರಮಾತ್ಮನಲ್ಲಿಯೇ ವಿಶ್ವ ಪ್ರಪಂಚದ ಅಥವಾ ತನ್ನ ಬಹುತ್ವದ ಪ್ರವೃತ್ತಿ ಧರ್ಮವು ತೋರಿಬರುವುದಾದ್ದರಿಂದ ಈ ಪ್ರವೃತ್ತಿ ಧರ್ಮವನ್ನು ನಡೆಸುವುದು, ಗೃಹಸ್ಥಾಶ್ರಮವನ್ನು ಸ್ವೀಕರಿಸುವುದು, ಸ್ತ್ರೀ ಪುರುಷರು ಏಕಾತ್ಮ ಭಾವದಿಂದಿದ್ದು ಪುತ್ರೇಚ್ಛೆಯಿಂದ ಒಡಗೂಡಿರುವುದು, ನ್ಯಾಯದಿಂದ ಧನವನ್ನು ಸಂಪಾದಿಸಿ ಅದನ್ನು ಕುಟುಂಬಭರಣಕ್ಕಾಗಿಯೂ, ದೇವ ಪಿತೃ ಕಾರ್ಯಗಳಿಗಾಗಿಯೂ, ಅತಿಥಿ ಸೇವೆಗಾಗಿಯೂ, ಬಡಬಗ್ಗರಿಗಾಗಿಯೂ ಉಪಯೋಗಿಸುವುದು, ಸ್ವವರ್ಣದಂತೆ ನಡೆದುಕೊಂಡು, ಆತ್ಮತೃಪ್ತಿಯಿಂದ ದಿವ್ಯ ಜೀವನವನ್ನು ಸಾಗಿಸುವುದು, ಪರಮಾತ್ಮನ ಏಕತ್ವವನ್ನು ತಿಳಿದು ಬಾಳುವುದು, ಅದಕ್ಕೆ ಕಾರಣವಾದ ಕರ್ಮ, ಉಪಾಸನಾ, ಧ್ಯಾನಾದಿ ಸಾಧನೆಗಳನ್ನು ಮಾಡುತ್ತಾ ಸಾಗುವುದಿದು ವಿಗ್ರಹ ಉಪಾಸನೆಯಂತೆ ಒಂದು **ಸಗುಣೋಪಾಸನೆಯು.**

ಸ್ತ್ರೀಯ ಇಚ್ಛೆಯನ್ನೂ, ಧನದ ಇಚ್ಛೆಯನ್ನೂ, ಪುತ್ರನ ಇಚ್ಛೆಯನ್ನೂ, ದೇಹವಾಸನೆ, ಲೋಕವಾಸನೆ, ಶಾಸ್ತ್ರವಾಸನೆಯನ್ನೂ ತೊರೆದು ಉಪಾಧಿ ರಹಿತನಾದ ಪರಮಾತ್ಮನ ಪ್ರವೃತ್ತಿ ಸಂಕಲ್ಪ ಶೂನ್ಯವಾದ ನಿಷ್ಪ್ರಪಂಚ ಸ್ವರೂಪವನ್ನು, '**ನಾನೆಂಬ**' ಈ ಸ್ಫೂರ್ತಿಯ ಸತ್ಯಸ್ವರೂಪವೆಂದು ಮನಗೊಂಡು ತನ್ನ ಸಮೇತ ಈ ಎಲ್ಲಾ ಪ್ರಪಂಚವೂ ಕೇವಲ ಆನಂದಘನ ಪರಮಾತ್ಮಸ್ವರೂಪವೇ ಎಂಬುದಾಗಿ ಅಳವಡಿಸಿ, ಸರ್ವಸಮನಾಗಿಯೂ, ನಿಷ್ಕಾಮನಾಗಿಯೂ ಇದ್ದು, ಸತ್ಯಸ್ಥಿತಿಯನ್ನು ಬೀರುತ್ತಾ ಆನಂದ ಮಾತ್ರನಾಗಿ ಬಾಳುವುದೇ '**ನಿರ್ಗುಣೋಪಾಸನೆ**'.

ಹಿಮದ ಘಟ್ಟಿ ಮತ್ತು ನೀರು ಇವುಗಳಲ್ಲಿ ಇರುವ ಅಭೇದದಂತೆ ಪರಮಾತ್ಮನ ಸಗುಣ, ನಿರ್ಗುಣ ರೂಪಗಳಲ್ಲಿ ಅಭೇದವನ್ನು ಕಾಣುತ್ತಾ ಶಿವ, ವಿಷ್ಣು ಆದಿ ಉಪಾಸನೆಯನ್ನು ನಡೆಸುತ್ತಾ ಇವರನ್ನೂ, ಚರಾಚರ ವಿಶ್ವವನ್ನೂ ನಾಮರೂಪಾತ್ಮಕವಾಗಿರುವಂಥ ಒಂದು ಅದ್ವಿತೀಯ ಆನಂದ ಸ್ವರೂಪವೆಂದು ಭಾವಿಸಿ ಉಪಾಸಿಸುವುದೂ ಕೂಡ "**ಸಗುಣೋಪಾಸನೆ**" ಎಂದು ಹೇಳಿಸಿಕೊಳ್ಳುವುದು. ಒಂದು ಆನಂದ ಮಾತ್ರತೆಯಲ್ಲಿ ತನ್ನನ್ನೂ, ತನ್ನ ಸಮೇತವಾಗಿ ಎಲ್ಲಾ ದೇವತೆಗಳನ್ನೂ, ಸಂಪೂರ್ಣ

ವಿಶ್ವವನ್ನೂ ಸಮರಸವನ್ನಾಗಿಮಾಡಿ ನಾಮರೂಪರಹಿತವಾದ ಒಂದು ಆನಂದಘನಸ್ವರೂಪದಿಂದ ಬಾಳುವುದು "ನಿರ್ಗುಣೋಪಾಸನೆ".

## ಆರ್ಯಸಂಸ್ಕೃತಿಯು ಮೋಕ್ಷಪ್ರಾಣವಾದುದು

ಆರ್ಯಸಂಸ್ಕೃತಿಯಲ್ಲಿ ಜೀವನ ಧರ್ಮವೆಂತಲೂ, ಮೋಕ್ಷಧರ್ಮವೆಂತಲೂ ಎರಡು ವಿಧವಾದ ಧರ್ಮವಿರುವುದು. ಆರ್ಯಸಂಸ್ಕೃತಿಯ ಮೋಕ್ಷವೇ ಪರಮಪುರುಷಾರ್ಥವಾಗಿರುವುದು. ಜೀವಬ್ರಹ್ಮೈಕ್ಯವೇ ಅಂತಿಮ ಸಿದ್ಧಾಂತವಾಗಿರುವುದು. ಜೀವನಧರ್ಮದಲ್ಲಿ ಸಾಮಾಜಿಕ ವಿಕಾಸಕ್ಕೂ, ಸುಖಶಾಂತಿಮಯ ಜೀವನಕ್ಕೂ, ಅಭ್ಯುದಯಕ್ಕೂ, ಪೂರ್ವ ಜನ್ಮದ ಗುಣಕರ್ಮ ವಿಭಾಗದ ಪ್ರಕಾರ ಈಶಸಂಕಲ್ಪಾನುಸಾರವಾದ ವರ್ಣವಿಭಾಗವು ಒಳಪಡುವಂತೆ ಅನೇಕ ದೇಶ ಕಾಲಗಳನ್ನು ಭಿನ್ನ ಜಾತಿಯ ಸಂಗಡ ಭಿನ್ನ ಭಿನ್ನ ಸಂಬಂಧದ ಪರಿಸರದಲ್ಲಿ ಪರಸ್ಪರರ ಸಂಗಡ ವರ್ತಿಸುವ ಆಚಾರ ನಿಯಮಗಳು, ಜೀವನಕ್ರಮಗಳು ಒಳಪಡುವುವು. ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸನ್ಯಾಸ ಈ ನಾಲ್ಕು ಆಶ್ರಮಗಳು ಜೀವನಧರ್ಮದಲ್ಲಿ ಒಳಪಟ್ಟು ವೈಯುಕ್ತಿಕ ಜೀವನದ ವಿಕಾಸವನ್ನು ಗುರುತಿಸುವುವು. ಆರ್ಯಧರ್ಮದಲ್ಲಿ ಪರಮಾತ್ಮಪ್ರಾಪ್ತಿಯ ಆ ಸಹಜವಾದ ನಿಜಾನಂದದ ಸೂತ್ರದಲ್ಲಿಯೇ ಅದರ ಪ್ರಾಪ್ತಿಗೆ ಕಾರಣವಾದ ವ್ಯಕ್ತಿ ಮತ್ತು ಸಮಾಜದ ಧರ್ಮಕರ್ಮಗಳಿಂದ ವ್ಯಾವಹಾರಿಕ ಜೀವನವು ಪೋಣಿಸಿರುವುದು. ಆರ್ಯಸಂಸ್ಕೃತಿಯು ಮೋಕ್ಷಪ್ರಾಣವಾಗಿರುವುದು. ಮೋಕ್ಷದ ಗುರಿಯನ್ನು ಬಿಟ್ಟು ಇದು ಯಾವ ಪ್ರವೃತ್ತಿ ಅಥವಾ ನಿವೃತ್ತಿಯ ಕಾರ್ಯವನ್ನೂ ಕೈಗೊಳ್ಳದು. ಅನೇಕ ತೆರೆಗಳಲ್ಲಿ ಜಲತತ್ವದ ವ್ಯಾಪ್ತಿಯಿರುವಂತೆ ಈ ಆರ್ಯಸಂಸ್ಕೃತಿಗೆ ಅನೇಕ ನಾಮ ರೂಪಗಳಲ್ಲಿ ಅನೇಕ ಭಿನ್ನ ಭಿನ್ನ ಧರ್ಮಗಳಲ್ಲಿ, ಎಲ್ಲಾ ವಿವಿಧತೆಯಲ್ಲಿ, ಎಲ್ಲಾ ಭೇದದಲ್ಲಿ, ನಿಖಿಲ ವ್ಯವಹಾರಗಳಲ್ಲಿ ಒಂದು ಆನಂದಘನವಾದ ಪರಮಾತ್ಮತತ್ವವೇ ಕಾಣಿಸಿಕೊಳ್ಳುವುದು. ಪರಮಾತ್ಮನು ಉಸುರಿದ ವೇದದ ಪ್ರಕಾರವಾಗಿಯೂ, ಅದನ್ನು ಅನುಸರಿಸುವ ಸ್ಮೃತಿಗಳ ರೂಪವಾದ ಧರ್ಮಶಾಸ್ತ್ರದ ಪ್ರಕಾರವಾಗಿಯೂ ಆದರ್ಶವಾದ ವ್ಯಕ್ತಿಗಳನ್ನು

ಅನುಸರಿಸಿ ಸ್ವ ಸ್ವವರ್ಣಾಶ್ರಮೋಕ್ತ ಕರ್ಮ ಉಪಾಸನೆಗಳನ್ನು ನಡೆಸುವುದು **ಆರ್ಯಸಂಸ್ಕೃತಿ.** ಆತ್ಮಾನಾತ್ಮ ವಿವೇಕದಿಂದ ಪರಿಶುದ್ಧಗೊಂಡ, ಮನಸ್ತೃಪ್ತಿಕರವಾದ ತನಗೆ ಪ್ರಿಯವಾಗಿ ಕಂಡ, ಇಹಪರದ ನಿರತಿಶಯವಾದ ಸುಖಪ್ರಾಪ್ತಿಗಾಗಿ ಸಾಧನವಾಗುವ ವಿಧಿನಿಯಮಗಳನ್ನು ಪರಿಪಾಲಿಸುವುದು **ಆರ್ಯಸಂಸ್ಕೃತಿ.** ಮಾನವೀ ಆದರ್ಶ ಜೀವನಕ್ರಮದ ವೈದಿಕ ಸಮಾಜದಲ್ಲಿ ಅಳವಟ್ಟಿರುವ ಧರ್ಮವರ್ತನೆಯ ಸಂಸ್ಕಾರವೇ **ಆರ್ಯಸಂಸ್ಕೃತಿ.** ಜಗದಾದಿಯಿಂದ ಬಂದ ವಿಶ್ವಕಲ್ಯಾಣಕರವಾದ ಪ್ರವೃತ್ತಿ ನಿವೃತ್ತಿಧರ್ಮದ ಅತಿ ಪ್ರಾಚೀನ ಸಂಸ್ಕಾರವೇ **ಆರ್ಯಸಂಸ್ಕೃತಿ.**

## ಹರಿಜನರ ಜನ್ಮ

**"ಸ್ತೇನೋ ಹಿರಣ್ಯಸ್ಯ ಸುರಾಂ ಪಿಬꣳಶ್ಚ ಗುರೋಸ್ತಲ್ಪಮಾವಸನ್ಬ್ರಹ್ಮಹಾ ಚೈತೇ ಪತನ್ತಿ ಚತ್ವಾರಃ ಪಂಚಮಶ್ಚಾಽಽಚರꣳಸ್ತೈರಿತಿ"** (ಛಾಂ. ೫-೧೦-೯). ಚಿನ್ನವನ್ನು ಕದಿಯುವವನು, ಹೆಂಡವನ್ನು ಕುಡಿಯುವವನು, ಗುರುಸ್ತ್ರೀಗಮನ ಮಾಡುವವನು, ಬ್ರಹ್ಮಹತ್ಯ ಮಾಡುವವನು ಈ ನಾಲ್ಕು ಜನರೂ ಪತಿತರಾಗುವರು. ಇವರ ಜನ್ಮ ಹರಿಜನರಲ್ಲಿ ಆಗುವುದು. ಇವರು ಅಸ್ಪೃಶ್ಯರೆಂದು ಹೇಳಿಸಿಕೊಳ್ಳುವರು. ಇವರ ಸಂಸರ್ಗದಲ್ಲಿರುವವನು **" ತತ್ಸಂಸರ್ಗೀ ಚ ಪಂಚಮಃ "** ಐದನೆಯವನು ಅವರಂತೆಯೇ ಆಗುವನು. ಸಂಸರ್ಗದ ಪ್ರಭಾವ ನೋಡಿರಿ. ಆದ್ದರಿಂದಲೇ ಪತಿತರ ಸಂಸರ್ಗಕ್ಕೆ ಹೋಗಬಾರದೆಂದು ಶಾಸ್ತ್ರವಿದೆ. **" ನ ಸಂ ವಸೇಚ್ಚ ಪತಿತೈಃ "** (ಮನು.)

## ಪಾವಿತ್ರ್ಯ

ಅಭಕ್ಷ್ಯ ಪರಿಹಾರಶ್ಚ ಸಂಸರ್ಗಶ್ಚಾಪ್ಯನಿಂದಿತೈಃ ।
ಆಚಾರೇಷು ವ್ಯವಸ್ಥಾನಂ ಶೌಚಮಿತ್ಯಭಿಧೀಯತೇ ॥ (ಮನು.)

ಅಭಕ್ಷ್ಯದ ತ್ಯಾಗ ಅನಿಂದಿತರಾದ ಜನರ ಅಸಂಸರ್ಗ ವೇದಶಾಸ್ತ್ರ ವಿಹಿತ ವರ್ಣಾಶ್ರಮೋಕ್ತ ಧರ್ಮಕರ್ಮಗಳಲ್ಲಿ ನೆಲೆನಿಲ್ಲುವಿಕೆ ಮತ್ತು ನ್ಯಾಯ ನೀತಿಯ ಸದಾಚಾರವೇ 'ಶೌಚ' ವೆಂದು ಹೇಳಿಸಿಕೊಳ್ಳುವುವು. ಇದೇ ಪಾವಿತ್ರ್ಯ.

## ಅಸ್ಪೃಶ್ಯತೆಯು ಕಾರಣ

"ಸಂಸರ್ಗತೋ ದೋಷ ಗುಣಾ ಭವಂತಿ" ದುರ್ಜನರು ತಾವಾಗಿ ಸಜ್ಜನರಿಗೆ ಶರಣು ಬಂದರೆ ಅವರ ಸದಾಚಾರವನ್ನು ವೈಗೂಡಿಸಿ ಕೊಳ್ಳುವುದಕ್ಕಾಗಿ ಅವರನ್ನು ಪೂಜ್ಯರನ್ನಾಗಿ ನೋಡಿ ಅವರ ಸೇವೆಯನ್ನು ಮಾಡಿದರೆ, ಅವರ ಉಪದೇಶದಂತೆ ನಡೆದುಕೊಂಡರೆ ಆ ದುರ್ಜನರೂ ಕ್ರಮೇಣ ಸಜ್ಜನರಾಗುವರು, ಗುಣಿಗಳಾಗುವರು. ಸಜ್ಜನರು ತಾವಾಗಿ ದುರ್ಜನರ ಸಂಗಕ್ಕೆ ಹೋದರೆ, ಅವರ ಸೇವೆಯನ್ನು ಮಾಡಿದರೆ ಅವರಿಗೆ ಸ್ವಾಭಾವಿಕವಾಗಿ ಪೂಜ್ಯತ್ವವು ಒದಗಿ, ಅವರ ಪರಿಣಾಮ ಸಜ್ಜನರ ಮೇಲೆ ಆಗಿ 'ಇದ್ದಲಿನ ಸಂಸರ್ಗದಲ್ಲಿ ಇದ್ದವನು ವೈಯೆಲ್ಲಾ ಮಸಿಮಾಡಿಕೊಳ್ಳು ವಂತೆ' ಇವರೂ ಸಹ ಗತಿಗೆಟ್ಟ ದುಷ್ಟಚರಿತರಾಗುವರು. ತಮ್ಮ ಶೀಲ, ಜಾತಿ, ಸಂಸ್ಕಾರಗಳನ್ನು ಮರೆಯುವರು. ಅವರ ದೋಷದ ಅನುಕರಣವೇ ಹೆಚ್ಚಾಗುವುದು. "ಎಲ್ಲಾ ಬಣ್ಣವನ್ನೂ ಮಸಿ ನುಂಗಿತು" ಎಂಬುವು ದಾಗಿ ಒಂದು ಗಾದೆಯೂ ಇದೆ. ನೀರಿನ ಪ್ರವಾಹವು ಅಧೋಮುಖ ವಾಗಿರುವಂತೆ ಮನಸ್ಸಿನ ಪ್ರವಾಹವು ಅಧೋಮುಖವಾಗಿ ಹೆಚ್ಚು ಇರು ವುದರಿಂದ ಅವನತ ಜನರ ಸಂಸರ್ಗದಿಂದ ಅವನತ ಅಧೋಗತಿಯ ಜೀವನವು ವೈಗೊಳ್ಳುವುದು. ಈ ದೃಷ್ಟಿಯಿಂದಲೇ ಉನ್ನತ ಜಾತಿಯ ಉಚ್ಚಸಂಸ್ಕಾರವು ಹೀನ ಜಾತಿಯ ಸಂಸ್ಕಾರದಿಂದ ಅಳಿದುಹೋಗಬಾರ ದೆಂದು ಸ್ಪೃಶ್ಯಾಸ್ಪೃಶ್ಯ ವಿಚಾರವನ್ನು ಒಂದು ಶಾಸನವಾಗಿಯೇ ಪೂರ್ವಿಕರು ಈವರೆಗೆ ನಡೆಸಿಕೊಂಡು ಬಂದರು.

ಒಂದು ರಾಜಶಾಸನದಲ್ಲಿ ಕಳ್ಳರಿಗೆ, ಕುಡುಕರಿಗೆ, ಪುಂಡುಪೋಕರಿ ಗಳಿಗೆ ಹೇಗೆ ಒಂದು ಶಿಕ್ಷೆಯಿರುವುದೋ, ಅವರಿಗೆ ಹೇಗೆ ಒಂದು ಬಹಿಷ್ಕಾರ ವಿರುವುದೋ ಅಂತೆಯೇ ಪರಮಾತ್ಮನ ಶಾಸನದಲ್ಲಿ ಪೂರ್ವಜನ್ಮದ ಕರ್ಮ ಕ್ಕಾಗಿ ಶಿಕ್ಷೆಯೆಂದು ಕೀಳುಜಾತಿಯ ಜನ್ಮವಾಗಿರುವುದು. ಈ ದೃಷ್ಟಿ ಯಿಂದ "ಜನ್ಮನಾ ಜಾತಿಃ" ಜನ್ಮದಿಂದಲೇ ಜಾತಿ ಎಂಬುದೇ ಸಿದ್ಧ. ಒಳ್ಳೆಯವರು ಕೆಟ್ಟವರ ಸಹವಾಸದಿಂದ ಕೆಟ್ಟವರೇ ಆಗಿಹೋದರೆ, ಕೆಟ್ಟವರ ಉದ್ಧಾರ ಹೇಗೆ ಆಗುವುದೆಂಬ ಈ ದೂರಾಲೋಚನೆಯೇ, ಈ ಸದುದ್ದೇಶವೇ ಸ್ಪೃಶ್ಯಾಸ್ಪೃಶ್ಯತೆಯಲ್ಲಿ ಅಡಕವಾಗಿರುವುದು. ಕೀಳ

ಜಾತಿಯ ಸಹವಾಸದಿಂದ ಉಚ್ಚ ಜಾತಿಯ ಸಂಸ್ಕಾರವು, ನಡತೆಯು, ಎಲ್ಲಾ ಜೀವನವೂ ಹಾಳಾಗಿ ಒಂದು ಆದರ್ಶಸಂಸ್ಕೃತಿಯೇ ನಷ್ಟವಾಗುವುದರಿಂದ ಮೊದಲಿನ ರಾಜರುಗಳು ವರ್ಣಾಶ್ರಮದ ಪರಿಪಾಲನೆಯನ್ನು ತೀವ್ರವಾಗಿ ತಮ್ಮ ರಾಜ್ಯಶಾಸನ ಪದ್ಧತಿಯಲ್ಲಿ ಪ್ರಜೆಗಳ ಕ್ಷೇಮಕ್ಕಾಗಿ ಇಟ್ಟುಕೊಂಡಿದ್ದರು. ರಾಜ್ಯಶಾಸನವು ಪ್ರಜೆಗಳ ಅಭ್ಯುದಯ ನಿಃಶ್ರೇಯಸ್ಸಿಗಾಗಿ ಇರುವುದು. ಅದರಿಂದ ಪ್ರಜೆಗಳ ಎಲ್ಲಾ ವಿಧದ ಹಿತವೂ ಸಾಧಿಸಲ್ಪಡಬೇಕು.

## ಸ್ವಧರ್ಮ

"ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್" (ಗೀತಾ ೩–೩೫). ಉಚ್ಚಜಾತಿಯ ಧರ್ಮಕರ್ಮಗಳನ್ನು ಆಚರಣದಲ್ಲಿ ಇಟ್ಟುಕೊಳ್ಳದೆ ತನ್ನ ಸ್ವಧರ್ಮೋಚಿತ ಧರ್ಮಕರ್ಮಗಳನ್ನೇ ಅನುಷ್ಠಿಸುವುದು ವೈಯುಕ್ತಿಕ ಮತ್ತು ಸಾಮುದಾಯಿಕ ದೃಷ್ಟಿಯಿಂದಲೂ ಶ್ರೇಯಸ್ಕರವಾಗುವುದೆಂದು ಗೀತೆಯ ಹೇಳಿಕೆಯಿದೆ.

ಆತ್ಮೀಯೇ ಸಂಸ್ಥಿತೇ ಧರ್ಮೇ ಶೂದ್ರೋಽಪಿ ಸ್ವರ್ಗಮಶ್ನುತೇ ।
ಪರಧರ್ಮೋ ಭವೇತ್ ತ್ಯಾಜ್ಯಃ ಸುರೂಪ ಪರದಾರವತ್ ॥

ತನ್ನ ಸ್ವಧರ್ಮದ ಅನುಷ್ಠಾನದಿಂದ ಶೂದ್ರನಿಗೂ ಸ್ವರ್ಗದ ಪ್ರಾಪ್ತಿಯಾಗುವುದು. ಪರಧರ್ಮವು ಮಾತ್ರ ಪರರ ಸುಂದರ ಸ್ತ್ರೀಯಂತೆ ಸರ್ವಥಾ ತ್ಯಾಜ್ಯವಾಗಿರುವುದು. ಈ ವಾಕ್ಯದಲ್ಲಿ ಉಚ್ಚಜಾತಿಯ ಉನ್ನತ ಆಚಾರ ಪಾಲನೆಗಳಿಗೆ ಸುಂದರ ಪರಸ್ತ್ರೀಯ ಉಪಮೆಯನ್ನು ಕೊಟ್ಟು ಎರಡೂ ಕೂಡ ತ್ಯಾಜ್ಯವಾಗಿರುವುದೆಂದು ದಿಟ್ಟಿಸಿ ಹೇಳಿರುವುದು. ಪತಿತರ ಉದ್ಧಾರಕ್ಕಾಗಿ ಸ್ಪೃಶ್ಯಾಸ್ಪೃಶ್ಯ ಆಚಾರದ ಕಟ್ಟಳೆಯಲ್ಲದೆ ಹೀನಜಾತಿಯ ವಿದ್ವೇಷವಲ್ಲ.

## ಆರ್ಯರ ವಿಶಾಲ ದೃಷ್ಟಿ

"ಆತ್ಮವತ್ ಸರ್ವಭೂತೇಷು ಯಃ ಪಶ್ಯತಿ ಸ ಪಶ್ಯತಿ" ತನ್ನಂತೆ ಪರರ ಸುಖ ದುಃಖಗಳನ್ನು ಕಾಣುವವನೇ ನಿಜವಾಗಿಯೂ ಕಣ್ಣುಳ್ಳವನೆಂದು ಆರ್ಯಸಂಸ್ಕೃತಿಯ ಶಿಕ್ಷಣವಿದೆ. ಎಲ್ಲರಲ್ಲಿಯೂ

ಆಯಾ ದೇಹ, ಜಾತಿಕರ್ಮಕ್ಕೆ ಅಸಂಗವಾದ ಪೂರ್ಣ ಪರಮಾತ್ಮನೊಬ್ಬನೇ ಇರುವನೆಂದು ಆರ್ಯಸಂಸ್ಕೃತಿಯ ಸಿದ್ಧಾಂತವಿದೆ.

"ನಮೋ ವ್ರಾತೇಭ್ಯೋ ವ್ರಾತಪತಿಭ್ಯಶ್ಚ ವೋ ನಮಃ। ನಮೋ ಮಹದ್ಭ್ಯಃ ಕ್ಷುಲ್ಲಕೇಭ್ಯಶ್ಚ ವೋ ನಮಃ । ನಮೋ ರಥಿಭ್ಯೋಽರಥೇಭ್ಯಶ್ಚ ವೋ ನಮಃ । ನಮಃ ಪುಂಜಿಷ್ಟೇಭ್ಯೋ ನಿಷಾದೇಭ್ಯಶ್ಚ ವೋ ನಮಃ ॥" ಈ ವಿಧವಾಗಿ ರುದ್ರಾಧ್ಯಾಯದಲ್ಲಿ ಹೇಳಿರುವರು. "ನಾನಾ ಜಾತೀಯಾಃ ಸಂಘಾ ವ್ರಾತಾಸ್ತೇಷಾಂ ಪತಯೋ ವ್ರಾತಪತಯಃ" (ರುದ್ರಭಾಷ್ಯ). ನಾನಾ ಜಾತೀಯ ಸಂಘಗಳಿಗೆ "ವ್ರಾತಾಃ" ಎಂದು ಹೆಸರು. ಅವರ ನೇತರುಗಳಿಗೆ "ವ್ರಾತಪತಯಃ" ಎಂದು ಹೆಸರು. ಇವರಿಗೂ, ಮಹನೀಯರಿಗೂ, ಕ್ಷುಲ್ಲಕರಿಗೂ "ಪಕ್ಷಿಪುಂಜಾನಾಂ ಘಾತುಕಾಃ ಪುಂಜಿಷ್ಟಾಃ ನಿಷಾದಾ ಶ್ವಪಚಾಃ" ಪಕ್ಷಿಗಳ ಘಾತಕರಿಗೂ, ಶ್ವಪಚರಿಗೂ, ಬೇಡರಿಗೂ (ಅಂತ್ಯಜರಿಗೂ) ನಮಸ್ಕಾರವಿರಲಿ! ಎಂಬುವುದರಲ್ಲಿ ಆರ್ಯರು ವ್ಯಾಪಕ ಪರಮಾತ್ಮತತ್ವವನ್ನು ಮರೆಯಲಿಲ್ಲ ಮತ್ತು ಶ್ರುತಿಯೂ ಕೂಡಾ ಅದನ್ನು ಮರೆಯಿಸಲಿಲ್ಲ ಎಂಬುದು ಸ್ಪಷ್ಟವಾಗಿ ಕಂಡುಬರುವುದು. "ಶುನಾಂ ಚ ಪತಿತಾನಾಂ ಚ ಶ್ವಪಚಾಂ ಪಾಪರೋಗಿಣಾಮ್ । ವಾಯಸಾನಾಂ ಕೃಮೀಣಾಂ ಚ ಶನಕೈರ್ನಿರ್ವಪೇದ್ಭುವಿ ॥" (ಮನು. ೩-೯೨). ವೈಶ್ವದೇವದ ಅಂತ್ಯದಲ್ಲಿ ಬ್ರಾಹ್ಮಣರು ಕಾಕಬಲಿ ಹಾಕಬೇಕೆಂದು ಒಂದು ವಿಧಾನವಿದೆ. ಅದರಲ್ಲಿ ನಾಯಿಗಳಿಗೂ, ಪತಿತರಿಗೂ, ಅಂತ್ಯಜರಿಗೂ (ಅಸ್ಪೃಶ್ಯರಿಗೂ), ಪಾಪರೋಗಿಗಳಿಗೂ, ಕಾಗೆಗಳಿಗೂ, ಕ್ರಿಮಿಗಳಿಗೂ ಈ ಅನ್ನವು ಸಲ್ಲಲಿ ಎಂಬ ಸಂಕಲ್ಪದಿಂದ ಭೂಮಿಯ ಮೇಲೆ ಅನ್ನವನ್ನು ಇಡಬೇಕು ಎಂದು ಮನು ಮಹಾರಾಜನು ಹೇಳಿರುವನು. ಈ ವಿಧಾನವನ್ನು ನೋಡಿದರೆ ಹರಿಜನರಿಗೆ ದಲಿತವರ್ಗವೆಂದು ಹೇಳಲಾಗುವುದೇ? ಇದು ಬ್ರಾಹ್ಮಣರ ದಬ್ಬಾಳಿಕೆಯೇ? ಇದಕ್ಕೆ ಅವಕಾಶವು ಒದಗಬಾರದೆಂತಲೇ ಶ್ರುತಿಸ್ಮೃತಿಗಳು ಬ್ರಾಹ್ಮಣರ ಅನುಷ್ಠಾನದಲ್ಲಿಯೇ ಮಡಿ ಮೈಲಿಗೆಯ ಜೊತೆಗೇ ಇಂಥಾ ವಿಧಾನವನ್ನು ಹೇಳಿರುವುದು. ಮೈಲಿಗೆಯಲ್ಲಿದ್ದ ಬ್ರಾಹ್ಮಣರನ್ನೂ ಸಹ ಮುಟ್ಟಿಸಗೊಳ್ಳದೆ ಆಚರಿಸಲ್ಪಡುವ ವಿಧಾನಗಳಲ್ಲಿ ಈ ವಿಧದ ವಿಧಿಯ ಸನ್ನಿವೇಶವು ಸರ್ವ

ವ್ಯಾಪಕನಾದ ಪರಮಾತ್ಮನ ಭಾವನೆಯನ್ನು ಮರೆಯಗೊಡಿಸದೆ ಆಚಾರವನ್ನು ಉಳಿಸಿರುವುದೆಂಬುದೇ ದಿಟ. ಊಟದ ಪೂರ್ವದಲ್ಲಿ ಕಾಕಬಲಿಯ ವಿಧಾನದಲ್ಲಿ ಈ ವಿಧದ ಅನುಷ್ಠಾನವಿದ್ದರೂ ಅಂತ್ಯಜರ ಸ್ಪರ್ಶಮಾಡಿ ಅಥವಾ ಅಂತ್ಯಜರಿಗೆ ಮೊದಲು ಊಟಕ್ಕೆ ಹಾಕಿದನಂತರ ತಾನು ಊಟವನ್ನು ಮಾಡಬೇಕೆಂದು ಹೇಳಿದುದು ಎಲ್ಲಿಯೂ ಇಲ್ಲ. ಸಹಪಙ್ಕ್ತಿಯಲ್ಲಿ ಕುಳ್ಳಿರಿಸಿ ಊಟವನ್ನು ಮಾಡಬೇಕೆಂದು ಎಲ್ಲಿಯೂ ತೋರಿಬರುವುದಿಲ್ಲ. ಆಚಾರದ ಪಾಲನೆ ಮತ್ತು ಉಚ್ಚ ಭೂಮಿಕೆಯ ರಕ್ಷಣೆ, ಉಚ್ಚ ಸಂಸ್ಕೃತಿಯ ಸಂಗೋಪನವೇ ಇದರಲ್ಲಿ ಗರ್ಭಹೇತುವಾಗಿರುವುದು.

## ಪೂರ್ವಸಂಸ್ಕಾರ

ಪ್ರತಿ ಜಾತಿಯ ದೇಹವೂ, ಪ್ರತಿ ವ್ಯಕ್ತಿಯ ದೇಹವೂ ಆಯಾ ವ್ಯಕ್ತಿಯ ಪೂರ್ವಜನ್ಮದ ಕರ್ಮದ ಸಂಸ್ಕಾರವನ್ನೂ ಮತ್ತು ಇಹಜನ್ಮದ ಸಂಸ್ಕಾರವನ್ನೂ ಕಾಣಿಸುವುದು. ಮಣ್ಣಿನಿಂದ ಕೊಡವು ಆದಂತೆ ಅವನ ಆ ಜಾತಿಯ ಜನ್ಮ ಮತ್ತು ದೇಹದ ಆಕಾರ ಆಯಾ ಪೂರ್ವಜನ್ಮದ ಉಚ್ಚ ನೀಚ ಸಂಸ್ಕಾರದಿಂದಲೇ ಆಗಿರುವುದು. ಭಿನ್ನ ಭಿನ್ನ ಬೀಜದ ಮೊಳಕೆಯಂತೆ ಭಿನ್ನ ಭಿನ್ನ ಸಂಸ್ಕಾರದ ನೀಚೋಚ್ಚಭಾವಗಳನ್ನು ತೋರಿಸುವ ಸಂಸ್ಕಾರಬೀಜದಿಂದ ಆದ ಇವು ದೇಹರೂಪದಿಂದುಂಟಾದ ಮೊಳಕೆಯೇ ಸರಿ. ಸುಗಂಧ–ದುರ್ಗಂಧ ಪದಾರ್ಥವನ್ನು ಸ್ಪರ್ಶಿಸಿಬರುವ ಗಾಳಿಯಲ್ಲಿ ಸುಗಂಧ–ದುರ್ಗಂಧವಾದ ವಾಸನೆ ಬರುವಂತೆ ಆ ದೇಹವನ್ನು ಮುಟ್ಟಿಬರುವ ಗಾಳಿಯಲ್ಲಿಯೂ ಆಯಾ ದೇಹದ ಸಂಸ್ಕಾರರೂಪವಾದ ಪರಮಾಣುಗಳು ಇಷ್ಟಾನಿಷ್ಟ ಸಂಸ್ಕಾರಗಳನ್ನು ಉಂಟುಮಾಡುವುವು. ಆಯಾ ಪದಾರ್ಥದ ಸ್ಪರ್ಶದಿಂದ ಮೃದು–ಕಠಿಣ, ಪವಿತ್ರ–ಅಪವಿತ್ರ ಭಾವದ ಸಂವೇದನೆ ಉಂಟಾಗಿ ಮನಸ್ಸಿನ ಮೇಲೆ ಒಂದು ಪರಿಣಾಮವಾಗುವಂತೆ ಆಯಾ ಮನುಷ್ಯರ ಸ್ಪರ್ಶದಿಂದಲೂ ಇಷ್ಟಾನಿಷ್ಟ ಭಾವನೆಗಳ ಉತ್ಪತ್ತಿಯು ಮನಸ್ಸಿನಲ್ಲಾಗುವುದು. ಆಯಾ ಪದಾರ್ಥವು ತನ್ನ ಸುಗಂಧ–ದುರ್ಗಂಧವನ್ನು ಸ್ಪರ್ಶಿಸಿದವರಿಗೆ ಅಂಟಿಸುವಂತೆ ಆಯಾ ವ್ಯಕ್ತಿಯು ತನ್ನ ಒಳ್ಳೆಯ ಮತ್ತು ಕೆಟ್ಟ ಸಂಸ್ಕಾರಗಳನ್ನು ತನ್ನನ್ನು ಮುಟ್ಟ

ದವರಲ್ಲಿ ಉಂಟುಮಾಡುವುದು. ಈ ದೃಷ್ಟಿಯಿಂದಲೇ ಹೀನಸಂಸ್ಕಾರವುಳ್ಳ ಪೂರ್ವಜನ್ಮಕರ್ಮದಿಂದ ಹೀನಜಾತಿಯಲ್ಲಿ ಜನಿಸಿದ ಜನರ ಸಹವಾಸ ವನ್ನು ಮಾಡಬಾರದು, ಸಹವಾಸದಲ್ಲಿರಬಾರದು ಮತ್ತು ಅವರನ್ನು ಸ್ಪರ್ಶಿಸ ಬಾರದು ಎಂಬುದಾಗಿ ಶಾಸ್ತ್ರದಲ್ಲಿ ತಿಳಿಸುವುದು. ಸಾಮಾನ್ಯ ಕಾಲ ದಲ್ಲಿಯೂ ಈ ನಿಯಮವು ಅನ್ವಯಿಸುವುದೆಂದಾದಮೇಲೆ ಪವಿತ್ರ ಮನಸ್ಸನ್ನು ಇಟ್ಟುಕೊಂಡು ನಡೆಯಿಸುವ ಅನುಷ್ಠಾನ ಕಾಲದಲ್ಲಿಯೂ, ಭೋಜನ ಕಾಲದಲ್ಲಿಯೂ ಇದು ಎಷ್ಟರಮಟ್ಟಿಗೆ ಅನ್ವಯಿಸುವುದೆಂಬು ದನ್ನು ವಿಚಾರಿಸಿ ತಿಳಿದುಕೊಳ್ಳಬಹುದು.

## ಆಹಾರ ಶುದ್ಧಿ

"ಅನ್ನಮಯಂ ಹಿ ಸೌಮ್ಯಮನಃ" ಅನ್ನದ ಪವಿತ್ರಾಪವಿತ್ರತೆ ಯಂತೆ ಮನಸ್ಸೂ ಕೂಡ ಪವಿತ್ರಾಪವಿತ್ರವಾಗುವುದು. ಊಟದ ಕಾಲದಲ್ಲಿ ಇದ್ದ ಮಾನಸಿಕ ಸಂಸ್ಕಾರವೇ ತಿಂದ ಅನ್ನದ ಜೊತೆಗೆ ಸೇರಿಕೊಂಡು ಮನಸ್ಸಿನ ಒಂದು ವಿಶಿಷ್ಟ ಸ್ವಭಾವವನ್ನುಂಟುಮಾಡುವುದು. ಈ ದೃಷ್ಟಿಯಿಂದ ಭೋಜನ ಕಾಲದಲ್ಲಿ ದುಷ್ಟಜನರ ಪಙ್ಕ್ತಿಯಲ್ಲಿ ಕುಳಿತು ಕೊಳ್ಳಲೂಬಾರದು. ಹೀನಜಾತಿಯವರನ್ನು ಕಣ್ಣಿನಿಂದಲೂ ನೋಡ ಬಾರದು. ಅವರ ಶಬ್ದವನ್ನು ಸಹ ಕೇಳಬಾರದು. ಭುಂಜಿಸುವ ಆಹಾರವು ಒಳ್ಳೆಯ ಜನರಿಂದ ಸಿದ್ಧವಾಗಿ ನೈವೇದ್ಯ ವೈಶ್ವದೇವಗಳಿಂದ ಸುಸಂಸ್ಕೃತ ವಾಗಿಯೂ ಇರಬೇಕು ಎಂಬೀ ಕಟ್ಟಳೆಗಳನ್ನು ಹಾಕಿರುವುದು. "ಆಹಾರ ಶುದ್ಧೌ ಸತ್ವಶುದ್ಧಿಃ" (ಬೃಹದಾರಣ್ಯ). ಆಹಾರವೂ ಶುದ್ಧವಾಗಿದ್ದು ಪಾಕಶುದ್ಧಿಯೂ ಶುದ್ಧ ಜನರಿಂದ ಆಗಿದ್ದು, ಪಂಙ್ಕ್ತಿಯಲ್ಲಿಯೂ ತನ್ನ ದರ್ಶನಮಾತ್ರದಿಂದಲೇ ಒಳ್ಳೆಯ ಭಾವನೆಯನ್ನು ಉಂಟುಮಾಡುವ ಉಚ್ಚಜಾತಿಯ ಆದರ್ಶವ್ಯಕ್ತಿಗಳಿದ್ದು, ಮನಸ್ಸು ಪರಮಾತ್ಮನ ಉಚ್ಚ ವಿಚಾರಗಳಲ್ಲಿದ್ದರೆ ಆ ತಿಂದ ಆಹಾರದಿಂದ ಮನಸ್ಸು ಶುದ್ಧವಾಗಿರುವುದು; ಶಾಂತವಾಗಿರುವುದು; ಒಳ್ಳೆಯ ಕರ್ಮದ ಪ್ರೇರಣೆಯನ್ನು ಕೊಡುವುದು; ಪರಮಾತ್ಮನ ಸಾಧನೆಗೆ ಅನುಕೂಲವಾಗುವುದು; ವ್ಯವಹಾರದಲ್ಲಿಯೂ ಪರಹಿತಸಾಧಿಸುವ ಶಾಸ್ತ್ರಶುದ್ಧ ಕರ್ಮಗಳನ್ನು ಮಾಡುವುದು. ಭೋಜನ

ಸಮಯದ ಮಹತ್ವವು ಬಹಳಷ್ಟಿದೆ. ಇದು ಮನಸ್ಸನ್ನು ಮಾರ್ಜಡಿಸುವುದು. ಆದುದರಿಂದಲೇ ಭೋಜನದ ಪೂರ್ವದಲ್ಲಿ ಸ್ನಾನ, ಸಂಧ್ಯಾ, ಜಪ, ಹೋಮ, ದೇವರಪೂಜೆ ಮಾಡುವ ವಿಧಾನವಿದೆ. ಇವುಗಳಿಂದ ಒಂದು ಸಾರಿ ಶುದ್ಧವಾದ ಮನಸ್ಸು ಮೇಲೆ ಹೇಳಿದ ಅನ್ನದ ಮತ್ತು ಪಙ್ಕ್ತಿಯ ನಿಯಮಗಳನ್ನು ನಿತ್ಯದಲ್ಲಿಯೂ ಅನುಸರಿಸಿದ್ದರೆ "ಅಧಿಕ ಸ್ಯಾಧಿಕಂ ಫಲಮ್" ಎಂದು ಯಾರು ತಾನೆ ಹೇಳಲಾರರು? ಈ ವಿಧವಾಗಿ ನಡೆದುಕೊಂಡರೆ ಯಾವ ಸಮಾಜವು ಆದರಣೀಯವಾಗದು? ಆದರ್ಶವಾಗದು? ಉನ್ನತವಾಗದು? ದಿವ್ಯವಾಗದು? ಈ ದೃಷ್ಟಿಯಿಂದ ಅಂತ್ಯಜರ ಸಹಪಙ್ಕ್ತಿ ಎಷ್ಟು ಅಪಕಾರವಾದುದೆಂದು ಪರ್ಯಾಲೋಚಿಸತಕ್ಕ ಹೊಣೆಗಾರಿಕೆ ಪ್ರತಿಯೊಬ್ಬರಮೇಲೂ ಇದೆ.

## ಧರ್ಮಾಂತರಿಸುವ ಕ್ರಮ

ನಾನು ಚಿಕ್ಕಮಗಳೂರು ಸಮೀಪ ಇರುವ ಒಂದು ಕಾಫಿ ತೋಟದಲ್ಲಿದ್ದೆ. ಇಲ್ಲಿ ಮಂಗಳೂರು ಬದಿಯಿಂದ ಬಹಳಷ್ಟು ಹರಿಜನರು ಕೆಲಸಕ್ಕಾಗಿ ಬಂದಿದ್ದರು. ನಾನು ಹೋಗುವ ಪೂರ್ವದಲ್ಲಿ ಇವರಿಗೆ ಭೂತ ಪಿಶಾಚಿಗಳ ಬಾಧೆ ಬಹಳ ಇತ್ತು. ನಾನು ಹೋದಮೇಲೆ ಅದು ತಾನಾಗಿಯೇ ಕಡಿಮೆ ಆಯಿತು. ಶ್ರೀ ಸ್ವಾಮಿಗಳ ಆಗಮನದಿಂದ ಹೀಗಾಯಿತೆಂದು ತಿಳಿದು, ಒಂದು ದಿನ ಎಲ್ಲರೂ ಸೇರಿ ದರ್ಶನಕ್ಕೆ ಬಂದರು. ಅವರಲ್ಲಿ ಬಹಳವಾಗಿ ಶ್ರದ್ಧಾಭಕ್ತಿಯು ಕಂಡುಬಂದಿತು. ಅವರ ಧರ್ಮಾಂತರಿತವಾದ ಸಂಗತಿಯು ಅವರ ಮುಖದಿಂದಲೇ ಹೀಗೆ ತಿಳಿಯಬಂದಿತು. "ಒಂದು ದಿನ ಪಾದ್ರಿಯು 'ನೀವೆಲ್ಲರೂ ಚರ್ಚಿಗೆ ಬಂದು ಕ್ರಿಶ್ಚಿಯನ್‌ರಾದಿರಿ ಎಂದರೆ ಒಬ್ಬೊಬ್ಬರಿಗೆ ಎರಡೆರಡು ರೂಪಾಯಿಗಳಂತೆ ಎಲ್ಲರಿಗೂ ಕೊಡುತ್ತೇವೆ' ಎಂದು ಹೇಳಿದರು. ಎರಡು ರೂಪಾಯಿ ಸಿಗುತ್ತದೆಯೆಂದು ನಾವೆಲ್ಲರೂ ಹೋಗಿ ಕ್ರಿಶ್ಚಿಯನ್‌ರಾದೆವು." ಈ ಮೇಲಿನ ಉದಾಹರಣೆಯಿಂದ ಅವರ ಧರ್ಮಾಂತರಕ್ಕಾಗಿ ಈ ಅಭಾವ, ಸ್ವಧರ್ಮಾಭಿಮಾನದ ಶೂನ್ಯತೆ, ಧರ್ಮಾಂತರದ ಕಲ್ಪನೆಯೂ ಇಲ್ಲದಿರುವುದು ಇವೇ ಮುಂತಾದ ಕಾರಣಗಳು ಕಂಡುಬರುವುವು. ಇದರಿಂದ ಧರ್ಮಾಂತರ ಮಾಡುವ ಪಾದ್ರಿಗಳ ಕ್ರಮವೂ ತಿಳಿದುಬರುವುದು.

## ಕ್ಷೇಮಕರ ರಾಜ್ಯಪದ್ಧತಿ

ಈ ಎಲ್ಲಾ ಕಾರಣಗಳನ್ನೂ ಹೋಗಲಾಡಿಸದೆ ಮಂದಿರಪ್ರವೇಶದಿಂದಲೂ, ಸಹಭೋಜನದಿಂದಲೂ ಧರ್ಮಾಂತರಿತವಾಗುವ ಸಂಖ್ಯೆಯನ್ನು ನಿಲ್ಲಿಸಬೇಕೆಂದು ಎಷ್ಟು ಪ್ರಯತ್ನಮಾಡಿದರೂ ಯಾವ ಪ್ರಯೋಜನಕರವೂ ಆಗದು. ಸರ್ಕಾರವು ಅವರ ಜೀವನದ ಉಪಾಯಗಳನ್ನು ಕಲ್ಪಿಸಿಕೊಟ್ಟು ಅವರಲ್ಲಿ ಧರ್ಮದ ಭಾವನೆಯನ್ನುಂಟುಮಾಡಿ "**ಸ್ವಧರ್ಮೇ ನಿಧನಂ ಶ್ರೇಯಃ**" (ಗೀತಾ) ಎಂಬುದನ್ನು ದೃಢಗೊಳಿಸಿದರೆ ಧರ್ಮಾಂತರದ ಸಮಸ್ಯೆಯು ಬಗೆಹರಿದು ಅವರ ಉದ್ಧಾರವಾಗುವುದು. ಅಲ್ಲಲ್ಲಿ ಧರ್ಮಪ್ರಚಾರಕರನ್ನು ನೇಮಿಸಿ ಅನ್ಯಧರ್ಮೀಯರ ಇಂಥಾ ಕೇವಲ ವಂಚನಾಪರವಾದ ಕೃತಿಗಳನ್ನು ನಿಲ್ಲಿಸುವಲ್ಲಿ ಅವರಿಗೂ ಮತ್ತು ಹರಿಜನರಿಗೂ ಸತ್ಯಧರ್ಮದ ಒಂದು ಮಾರ್ಗದರ್ಶನವಾಗುವುದು.

ಧರ್ಮಪ್ರಾಣವಾಗಿರುವಂಥ ಭಾರತ ದೇಶದಲ್ಲಿ ಧರ್ಮವಿರುದ್ಧವಾದ ಕಾಯಿದೆಗಳಿಂದ ಯಾವ ಲಾಭವೂ ಆಗದೆ ಇದು ಜನಕ್ಷೋಭೆಗೆ ಮತ್ತೂ ಇಹಪರ ದುರ್ಗತಿಕಾರಕವಾದ ಧರ್ಮಭ್ರಷ್ಟತೆಗೆ ಕಾರಣವಾಗುವುದು. ರಾಮರಾಜ್ಯದ ನ್ಯಾಯ ಮತ್ತು ಜವಾಬ್ದಾರಿ ರಾಜ್ಯಪದ್ಧತಿಯಲ್ಲಿ ಅವರವರ ಧರ್ಮದ ಪ್ರಕಾರ ನಡೆದುಕೊಳ್ಳಲು ಅವಕಾಶವನ್ನು ಕಲ್ಪಿಸಿಕೊಟ್ಟು ಕುಹಕಮತಪ್ರಚಾರವನ್ನು ಕಾಯಿದೆಯಿಂದ ನಿಲ್ಲಿಸಿ ಒಂದು ಹಿಂದೂ ಧರ್ಮವಿರುದ್ಧವೇ '**ಹಿಂದೂಕೋಡ್**' ಮುಂತಾದ ಅಪ್ರಾಸಂಗಿಕ ಮತ್ತು ಅನುಪಯುಕ್ತವಾದ ಕಾಯಿದೆಗಳನ್ನು ಮಾಡದೆ ಅರ್ಥೋತ್ಪಾದನದ ಹೊಸ ಹೊಸ ಸಾಧನೆಗಳನ್ನು ನಿರ್ಮಿಸಿ ಸರ್ವಸಮಬುದ್ಧಿಯಿಂದ ನಿರುದ್ಯೋಗ ಸಮಸ್ಯೆಯನ್ನು ಹೋಗಲಾಡಿಸಿದರೆ ಅಲ್ಲಿಗೆ ಹೆಸರಿನ ಪ್ರಕಾರ ಮತ್ತು ಘೋಷಣೆಯ ಅನುರೂಪವಾಗುವುದು. ಜನರಲ್ಲಿ ಶಾಂತಿ ಸಮಾಧಾನವೂ ನೆಲೆಗೊಳ್ಳುವುದು; ವಿಶ್ವಬಾಂಧವ್ಯವೂ ತಲೆದೋರಿ ಒಂದು ಆದರ್ಶ ರಾಜ್ಯಪದತಿಯಾಗುವುದು. '**ಅವ್ಯಾಪಾರೇಷು ವ್ಯಾಪಾರಃ**' ನಿಲ್ಲುವುದು. ಜನರಲ್ಲಿ ವಿನಾ ಕಾರಣವಾಗಿ ಉಂಟುಮಾಡಿರುವ ಕ್ಷೋಭೆಯು ನಷ್ಟವಾಗುವುದು.

ಒಂದೇ ಒಂದು ಜಾತಿ ಆಗುವುದರಿಂದಲೂ, ಸಹಪಙ್ಕ್ತಿಯಿಂದಲೂ ಸಂಘಟನವಾಗುವುದೆಂದಾದರೆ, ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕೋರ್ಟು ಕಚೇರಿಗಳೂ ಇರುತ್ತಿರಲಿಲ್ಲ ಮತ್ತು ಯುದ್ಧಗಳೂ ಆಗುತ್ತಿರಲಿಲ್ಲ. ವಿವಾಹವಿಚ್ಛೇದ, ಸಗೋತ್ರವಿವಾಹ, ವಿವರ್ಣವಿವಾಹ— ಇವುಗಳಿಂದ ಒಂದು ಜಾತಿ ನೆಲೆಗೊಂಡು ಶಾಂತಿ ಉಂಟಾಗುವುದಾದರೆ, ಪಾಶ್ಚಾತ್ಯ ರಾಷ್ಟ್ರದ ಜನರು ಭಾರತದ ದಾಂಪತ್ಯಜೀವನವನ್ನು ಹೊಗಳುತ್ತಿರಲಿಲ್ಲ. ಭಾರತದಲ್ಲಿ ನೆಲೆಸಿದ್ದ ಆರ್ಯಸಂಸ್ಕೃತಿಯ ಅಭ್ಯಾಸವನ್ನು ಮಾಡುತ್ತಿರಲಿಲ್ಲ; ತಮ್ಮ ದೇಶದಲ್ಲಿ ಇದರ ಪ್ರಚಾರ ಮಾಡುತ್ತಿರಲಿಲ್ಲ. ಈಗಿನ ಭಾರತದ ಸಾಮಾಜಿಕ ಶಾಂತಿಗೂ, ಸುವ್ಯವಸ್ಥೆಗೂ, ಆದರಣೀಯ ರಾಜ್ಯಪದ್ಧತಿಗೂ ಧರ್ಮದ ವಿಷಯದಲ್ಲಿ ಕೈ ಹಾಕುವುದು ಎಷ್ಟುಕ್ಕೂ ಪ್ರಾಸಂಗಿಕವೂ, ಉಪಯುಕ್ತವೂ ಆಗಲಿಕ್ಕಿಲ್ಲ. ಕುಹಕಮತಪ್ರಚಾರವನ್ನು ನಿಲ್ಲಿಸಿ ಆಯಾ ಧರ್ಮದ ಪ್ರಕಾರ ಅವರವರಿಗೆ ಅವಕಾಶವನ್ನು ಕಲ್ಪಿಸಿಕೊಡುವುದೇ ರಾಜಕಾರಣಕ್ಕೂ ಅನುಕೂಲವಾಗುವುದು. ಇದೇ ಪ್ರಜೆಗಳ ಶಾಂತಿಗೂ, ಸುಖಸಮಾಧಾನಗಳಿಗೂ ಕಾರಣವಾಗುವುದು. ಇದೇ ರಾಜ್ಯಸೂತ್ರವನ್ನು ನಡೆಯಿಸುವ ಧುರೀಣರ ಕರ್ತವ್ಯ.

ರಾಜ್ಞೋಹಿ ಪರಮೋ ಧರ್ಮಃ ಸ್ವಧರ್ಮಸ್ಥಾನುಪಾಲನಂ ।
ಶಾಸತೋಽನ್ಯಾನ್ ಯಥಾಶಾಸ್ತ್ರಮನಾಪದ್ಯುತ್ಪಥಾನಿಹ ॥
(ಭಾಗವತ ೧–೧೭–೧೬)

ಸ್ವವರ್ಣಾಶ್ರಮಧರ್ಮಗಳಿಂದ ಇರತಕ್ಕವರ ರಕ್ಷಣೆ ಮಾಡುವುದು ಆಪತ್ಕಾಲವಿರದೆ ವರ್ಣಾಶ್ರಮಗಳನ್ನು ಬಿಟ್ಟು ಯಥಾಶಾಸ್ತ್ರವಾಗಿ ನಡೆಯದೆ ಅಮಾರ್ಗವಾಗಿ ಹೋಗತಕ್ಕವರನ್ನು ದಂಡಿಸುವುದು, ರಾಜ್ಯಸೂತ್ರಗಳನ್ನು ಕೈಕೊಂಡ ಜನರ ಮುಖ್ಯ ಧರ್ಮವಾಗಿದೆ ಎಂದು ಭಾಗವತವು ಹೇಳುತ್ತಿದೆ.

## ಹರಿಜನರ ಉದ್ಧಾರ

'ಹರಿಜನರ ಉದ್ಧಾರ' ಎಂದರೆ ಪತಿತರ ಉದ್ಧಾರಮಾಡುವುದು. ಇದು ಆರ್ಯರ ಮೈಗೊಂಡಿರುವ ಒಂದು ಸ್ವಾಭಾವಿಕ ಗುಣವೇ ಸರಿ. ಇದನ್ನು ಮಾಡಲು ಬಯಸುವವರೇ ಆರ್ಯರು. 'ಶುನಿಚೈವ ಶ್ವಪಾಕೇ ಚ

ಪಂಡಿತಾಸ್ಸಮದರ್ಶಿನಃ' (ಗೀತಾ ೫-೨೮) ಎಂಬಂಥಾದ್ದೇ ಆರ್ಯರ ವೇದವಾಕ್ಯ. 'ನಮಃಶ್ವಭ್ಯಃ ಶ್ವಪತಿಭ್ಯಶ್ಚ' (ತೈ. ರುದ್ರಾಧ್ಯಾಯಃ) ಎಂಬುವಂಥಾದ್ದೇ ಆರ್ಯರ ವ್ಯಾಪಕ ಪರಮಾತ್ಮಸ್ವರೂಪದ ಸಾಕ್ಷಾತ್ಕಾರ. ಅಸ್ಪೃಶ್ಯೋದ್ಧಾರಮಾಡಬಾರದೆಂದು ಯಾರೂ ಹೇಳುವುದಿಲ್ಲ. ಪತಿತರ ಜೊತೆಗೆ ಇರತಕ್ಕವರು ಬಾವಿಯಲ್ಲಿ ಬಿದ್ದವರೆಂತಲೇ ಸಿದ್ಧವಾಗುವುದಲ್ಲವೇ? ಇಂಥವರಿಂದ ಬಾವಿಯಲ್ಲಿ ಬಿದ್ದವನ ಉದ್ಧಾರ ಹೇಗೆ ತಾನೇ ಆಗುವುದು? ಮೇಲಿನ ಮಟ್ಟದಲ್ಲಿ ತಾನಿದ್ದು ಅಧಃಪತಿತರಾದವರನ್ನು ಮೇಲೆ ಎತ್ತಿಕೊಳ್ಳಬೇಕಲ್ಲವೇ? ಉದ್ಧಾರಮಾಡುವುದೆಂದರೆ ಉನ್ನತರಾದ ಜನರು ಅವನತರಾದ ಜನರನ್ನು ತಮ್ಮ ಕಡೆಗೆ ತಂದುಕೊಳ್ಳುವುದಲ್ಲದೆ ತಾವು ಅವರ ಜೊತೆಗೆ ಬೆರೆಯುವುದಲ್ಲ.

> ನ ಸಂವಸೇಚ್ಚ ಪತಿತೈರ್ನ ಚಾಂಡಾಲೈರ್ನ ಪುಲ್ಕಸೈಃ ।
> ನ ಮೂರ್ಖೈರ್ನಾವಲಿಪ್ತೈಶ್ಚ ನಾನ್ತ್ಯೈರ್ನಾನ್ತ್ಯಾವಸಾಯಿಭಿಃ ॥
> (ಮನು. ೪-೭೯)

ಪತಿತರ ಜೊತೆಗೆ ಇರಬಾರದೆಂಬ ಮನುವಿನ ಹೇಳಿಕೆಯ ತಾತ್ಪರ್ಯವು ಇದೇ ಆಗಿದೆ ಎಂಬುದನ್ನು ಯಾರು ತಾನೆ ನಂಬಲಾರರು?

"ತದ್ಯ ಇಹ ರಮಣೀಯಚರಣಾ ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿಮಾಪದ್ಯೇರನ್ ಬ್ರಾಹ್ಮಣಯೋನಿಂ ವಾ ಕ್ಷತ್ರಿಯಯೋನಿಂ ವಾ ವೈಶ್ಯಯೋನಿಂ ವಾಥ ಯ ಇಹ ಕಪೂಯಚರಣಾ ಅಭ್ಯಾಶೋ ಹ ಯತ್ತೇ ಕಪೂಯಾಂ ಯೋನಿಮಾಪದ್ಯೇರಞ್ಛ್ವಯೋನಿಂ ವಾ ಸೂಕರಯೋನಿಂ ವಾ ಚಂಡಾಲಯೋನಿಂ ವಾ" (ಛಾಂ. ೫-೧೦-೭). ಪುಣ್ಯವಂತರು ತಮ್ಮ ತಮ್ಮ ಪುಣ್ಯದ ನ್ಯೂನಾಧಿಕತೆಗಳ ಮೂಲಕ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಯೋನಿಗಳನ್ನು ಹೊಂದುವರು. ಪಾಪಿಗಳು ತಮ್ಮ ಪಾಪದ ತಾರತಮ್ಯವಾಗಿ ಶ್ವಾನ, ಸೂಕರ, ಚಾಂಡಾಲ ಯೋನಿಗಳಲ್ಲಿ ಜನ್ಮವನ್ನು ಎತ್ತುವರೆಂದು ಛಾಂದೋಗ್ಯ ಉಪನಿಷತ್ತಿನಲ್ಲಿ ಬಂದಿರುವುದು. ಪಾಪದಿಂದ ಮಾಲಿನ್ಯಂಟಾಗುವುದು. ಮಾಲಿನ್ಯವು ಜೊತೆಗಾರರನ್ನು ಅಂಟಿಕೊಳ್ಳುವುದು. ಸ್ಪರ್ಶರೋಗದಂತೆ ಪತಿತ ಜನರ ಸಹವಾಸವು ಕ್ರಮೇಣ ಪಾತಿತ್ಯವನ್ನುಂಟು

ಮಾಡುವುದು. ಈ ದೃಷ್ಟಿಯಿಂದ ರೋಗಿಗಳನ್ನು ಆಸ್ಪತ್ರೆಯಲ್ಲಿಟ್ಟು ಅವರ ರೋಗಗಳನ್ನು ಹಿಡಿಸಿಕೊಳ್ಳದೆ ಅವರನ್ನು ಆರೋಗ್ಯವಂತರನ್ನಾಗಿ ಮಾಡಬೇಕೆಂಬ ವೈದ್ಯರಿಗೆ ಹೇಳುವಂತೆ, ಇಂತಹ ಪತಿತ ಜಾತಿಯನ್ನು ಬೇರೆ ಸ್ಥಳವನ್ನು ಏರ್ಪಡಿಸಿ ನಿಮ್ಮ ವಾಸಸ್ಥಳದ ಮನೆಯಲ್ಲಿ ಮತ್ತು ಅನುಷ್ಠಾನ ಮಾಡುವ ಸ್ಥಳವಾದ ದೇವಸ್ಥಾನದಲ್ಲಿ ಇವರನ್ನು ಹೊಕ್ಕಿಸಿಕೊಳ್ಳದೆ ಇವರ ಸಾಹಚರ್ಯದಿಂದ ಇವರಂತೆ ಪತಿತರಾಗದೆ ಇವರ ಸೇವೆಯಿಂದ ತಮ್ಮ ಶ್ರೇಷ್ಠತ್ವವನ್ನು ಕಳೆದುಕೊಳ್ಳದೆ, ಇವರಿಗೆ ಆದರ್ಶವಾಗುವಂತೆ ಉನ್ನತ ಜೀವನದ ಒಂದು ದಿವ್ಯಜೀವನದ ಮಟ್ಟವನ್ನು ಕಾಪಾಡಿಕೊಂಡು ಇವರನ್ನು ಉದ್ಧರಿಸಿರಿ ಎಂದು ಸನಾತನ ವೈದಿಕಧರ್ಮದ ಬೋಧನೆ, ಆರ್ಯಧರ್ಮದ ಶಿಷ್ಟಾಚಾರ. ಇಹಪರಕ್ಕೂ, ಸ್ವಪರ ಉದ್ಧಾರಕ್ಕೂ ಕಾರಣವಾದ ಆರ್ಯ ಸಂಸ್ಕೃತಿಯ ದೂರದೃಷ್ಟಿಯ ಆಳವಾದ ವಿಚಾರದ ಒಂದು ಸದುಪದೇಶ.

ಅನ್ತ್ಯಜಾದ್ಯಾ ದೇವಗೃಹಂ ಪ್ರವಿಶೇಯುಸ್ತದಾ ಧ್ರುವಮ್ ।
ದೇವತಾನಾಂ ಕಲಾನಾಶೋ ದುರ್ಭಿಕ್ಷಾದಿಕ ಮೇವಚ ।
ರೋಗಬಾಧಾದಿಕಂ ವಾಪಿ ಭಕ್ತಾನಾಮುಪಜಾಯತೇ ॥ (ರುದ್ರಯಾಮಳ)

ಅಂತ್ಯಜಾತಿ ಪತಿತರ ಪ್ರವೇಶ ಮಂದಿರಾದಿಗಳಲ್ಲಿ ಆದಲ್ಲಿ ವೈದಿಕ ಮಂತ್ರಗಳಿಂದ ಉಂಟುಮಾಡಿರುವ ದೇವರ ಕಲೆಯು ನಷ್ಟವಾಗಿ ಆ ಮೂರ್ತಿಯಲ್ಲಿದ್ದ ದೇವರ ಸಾನ್ನಿಧ್ಯವು ಹೋಗಿಬಿಡುವುದು ಮತ್ತು ಅವರಲ್ಲಿ ದುಷ್ಟಶಕ್ತಿಗಳ ವಾಸವಾಗಿ ದೇವಸ್ಥಾನವನ್ನು ಹೊಕ್ಕಿದ ಜನರ ಬುದ್ಧಿಯು ಕೆಡುವುದು, ದುರ್ಭಿಕ್ಷಾದಿಗಳುಂಟಾಗುವುವು, ರೋಗಬಾಧಾದಿ ಗಳ ಪ್ರಮಾಣ ಹೆಚ್ಚುತ್ತಾ ಹೋಗುವುದು ಎಂಬುದಾಗಿ ಆಗಮಶಾಸ್ತ್ರದ ನಿರ್ಣಯವಿದೆ; ವೈದಿಕ ಸಂಸ್ಕಾರದ ಘೋಷಣೆಯಿದೆ. ಮೂರ್ತಿಪೂಜೆಯ ಅಂಗೀಕಾರವನ್ನು ಮಾಡುವಲ್ಲಿ ಮೂರ್ತಿಪೂಜೆಯ ವಿಧಾನವನ್ನು ಬೋಧಿಸುವ ಶಾಸ್ತ್ರನಿಯಮಗಳನ್ನು ಪರಿಪಾಲಿಸುವುದೂ ಕೂಡ ಅಷ್ಟೇ ನ್ಯಾಯವಾಗಿ ಕ್ಷೇಮಕರವಾಗುವುದು—ನಮ್ಮ ಕರ್ತವ್ಯವಾಗುವುದು.

ಹೇಸಿಗೆಯಲ್ಲಿ ಬಿದ್ದ ಮಕ್ಕಳನ್ನು ಅನುಷ್ಠಾನಕ್ಕಾಗಿ ಮಾಡಿದ ಆಸನದ ಮೇಲೆ ಯಾರಾದರೂ ಕುಳ್ಳಿರಿಸುವರೋ? ಅವರನ್ನೇಕೆ, ಸ್ನಾನಮಾಡಿದ ಜನರನ್ನೂ ಸಹ ಮಡಿಯಲ್ಲಿದ್ದ ಜನರು ಒಂದೇ ತಾಯಿಯ ಮಕ್ಕಳಾದರೂ,

ಸತಿ ಪತಿಗಳಾದರೂ, ಪಿತಾಪುತ್ರರಾದರೂ ಸಹ ಮುಟ್ಟಿಕೊಳ್ಳರು. ಮಡಿಯಲ್ಲಿದ್ದ ತನ್ನ ವಸ್ತ್ರವನ್ನೂ ಸಹಾ ಸ್ನಾನವನ್ನು ಮಾಡದೆ ಮುಟ್ಟ ರೆಂದಾಗುವಲ್ಲಿ ಆಚಾರದ ಸೂಕ್ಷ್ಮತ್ವವು ಎಷ್ಟಿದೆಯೆಂದು ಇದರಿಂದ ಸ್ಪಷ್ಟ ವಾಗುವುದು ಮತ್ತು ಅಸ್ಪೃಶ್ಯರನ್ನು ದೂರವಿಟ್ಟ ಆಕ್ಷೇಪವೂ ಹೋಗಿಬಿಡು ವುದು. ತಾನು ಕೆಳಗೆ ಬೀಳದೆ ಕೆಳಕ್ಕೆ ಬಿದ್ದ ಜನರನ್ನು ಮೇಲೆ ಎತ್ತುವುದು ಇದರಲ್ಲಿರುವ ಸದುದ್ದೇಶ.

ಸಹಪಙ್ಕ್ತಿಯಿಂದ ಪ್ರೇಮವು ಬೆಳೆಯುವುದಾದರೆ ಸಹೋದರರು ಏಕೆತಾನೆ ಜಗಳವಾಡುತ್ತಿದ್ದರು? ಅಸ್ಪೃಶ್ಯೋದ್ಧಾರದಿಂದ ಪರಧರ್ಮದಲ್ಲಿ ಹೋಗುವುದು ನಿಲ್ಲುವುದಾದರೆ ಅಸ್ಪೃಶ್ಯಭಾವನೆಯೇ ಇಲ್ಲದಿರುವ ಆಂಗ್ಲರು ಹಿಂದೂಗಳಾಗಲು ಏಕೆತಾನೆ ಹವಣಿಸುವರು? ಹರಿಜನರಲ್ಲಿ ಈಗಲೂ ಎಲ್ಲಿ ಧರ್ಮಭಾವನೆ ಇರುವುದೋ ಅವರು ಮಂದಿರ ಪ್ರವೇಶವೂ ಮಾಡರು, ಪರಧರ್ಮವನ್ನೂ ಸೇರರು ಎಂಬುದು ಈಗಲೂ ತಿಳಿದು ಬರುವುದು ಎಂದಾದಲ್ಲಿ ಇಂಥಾ ಸನ್ನಿವೇಶಗಳಿಗೆ ಧರ್ಮಶಿಕ್ಷಣದ ಅಭಾವ ಮತ್ತು ಧರ್ಮಾಭಿಮಾನದ ಶೂನ್ಯತೆಯೇ ಕಾರಣವೆಂದು ಯಾರುತಾನೆ ಅಲ್ಲಗಳೆಯುವರು? ಈ ದೃಷ್ಟಿಯಿಂದ ಸ್ವಧರ್ಮದ ಶಿಕ್ಷಣವೇ, ಸ್ವಧರ್ಮಾಭಿಮಾನದ ಜಾಗೃತಿಯೇ ಪರಧರ್ಮದಲ್ಲಿ ಸೇರುವ ಜನರ ಸಂಖ್ಯೆಯನ್ನು ನಷ್ಟಮಾಡುವುದಲ್ಲದೆ ಈಗಿನ ಯಾವ ಹರಿಜನೋದ್ಧಾರದ ಕ್ರಮಗಳೂ ಅಲ್ಲವೆಂಧು ವಿಚಾರವಂತರಿಗೆ ಮನದಟ್ಟಾಗುವುದು. ಅಯೋಗ್ಯರಿಗೆ ಅಧಿಕಾರ ಕೊಡುವಲ್ಲಿ ತನ್ನ ಅಧಿಕಾರವನ್ನು ಉಪಯೋಗಿಸಿ ಅಂಥಾ ಜನರು ಮಿಕ್ಕವರನ್ನೂ ಸಹ ತಮ್ಮ ಕಡೆಗೆ ಸೆಳೆದುಕೊಳ್ಳುವ ಪುಂಡರಾಗುವರು. ಅದರಿಂದ ಅವರ ಮತ್ತು ಸಮಾಜದ ಅವನತಿಯೇ ಹೆಚ್ಚುತ್ತಾ ಹೋಗುವುದು. ಆದುದರಿಂದಲೇ 'ಯಥಾಸ್ಥಾನ' ಎಂಬುದರ ವಿಚಾರ ಅಷ್ಟು ಪ್ರೌಢವಾಗಿರುವುದು. ಕಾಲಿಗೆ ಸಲ್ಲುವುದನ್ನು ತಲೆಗೆ ಹಾಕಿಕೊಂಡರೆ ಶೋಭಿಸುವುದೂ ಇಲ್ಲ, ಅದು ಉಪಯುಕ್ತವೂ ಆಗದು ಮತ್ತು ಆತನು ಅನುಕರಣೀಯನೂ, ಆದರಣೀಯನೂ ಆಗನು.

ಆಯಾ ಜಾತಿಯಲ್ಲಿ ಆಯಾ ಜಾತಿಯ ಸಂಸ್ಕಾರಗಳು ರಕ್ತಗತ ವಾಗಿರುವುವು. ಅವುಗಳನ್ನು ಹೋಗಲಾಡಿಸುವುದು ಕಷ್ಟಸಾಧ್ಯ. ಕಷ್ಟ

ದಿಂದ ಸಾಧ್ಯವಾದರೂ ಅದರಿಂದ ಕೇಡೇ ಅಲ್ಲದೆ ಯಾವ ಪ್ರಯೋಜನವೂ ಇಲ್ಲ. ಸ್ವಪರ ಹಾನಿಕಾರಕವಾದ ಕರ್ಮಗಳನ್ನು ಮಾಡಿ ಸಮಾಜಶತ್ರು ಏಕೆತಾನೆ ಆಗಬೇಕು? ಆಯಾ ಜಾತಿಯ ವ್ಯವಸಾಯದಲ್ಲಿ ಆಯಾ ಜಾತಿಯನ್ನಿಟ್ಟು ಅವರವರ ಆನುವಂಶಿಕ ಸಂಸ್ಕಾರದ ಲಾಭವನ್ನು ಅಲ್ಪ ಕಾಲ ಮತ್ತು ಅಲ್ಪದ್ರವ್ಯದಲ್ಲಿ ಆಗುವುದಾದರೆ, ಅದನ್ನು ಪಡೆದು ಸಮಾಜದ ಹಿತವನ್ನು ಏಕೆತಾನೆ ಸಾಧಿಸಬಾರದು? ಮಂದಿರ ಪ್ರವೇಶವನ್ನು ಮಾಡಿಸು ವುದಕ್ಕಿಂತಲೂ, ಅವರಿಗೇ ಒಂದು ಸ್ವತಂತ್ರ ಮಂದಿರವನ್ನು ಮಾಡಿಕೊಟ್ಟು, ಭಕ್ತಿಯನ್ನು ಹುಟ್ಟಿಸಿ, ನೀತಿಯ ವೃಷ್ಟಿಯನ್ನುಂಟುಮಾಡಿ, ಧರ್ಮಭಾವನೆ ಯನ್ನು ಮೈಗೂಡಿಸಿ, ಅವರ ಉದ್ಧಾರವೂ ಹಾಗೂ ಸಮಾಜಕ್ಕೆ ಲಾಭವೂ ಆಗುವುದಾದರೆ ಅದರಂತೆಯೇ ಏಕೆತಾನೆ ಏರ್ಪಡಿಸಬಾರದು? ಒಂದು ದಿನ ಮಂದಿರ ಪ್ರವೇಶ ಮಾಡಿಸಿ ಅವರನ್ನು ಕೈಬಿಡುವುದಕ್ಕಿಂತಲೂ ಅವರ ಅಡಿ-ಅಡಚಣೆಗಳನ್ನೂ, ಸುಖದುಃಖಗಳನ್ನೂ ಪರ್ಯಾಲೋಚಿಸಿ, ಅವುಗಳ ನಿವಾರಣೆಯನ್ನುಮಾಡಿ ಅವರ ಸುಖದ ಮತ್ತು ಪವಿತ್ರ ಜೀವನದ ಬಾಳಿಗೆ ಕಾರಣವಾಗುವಂತೆ ತಕ್ಕ ಉಪಾಯಗಳನ್ನೂ, ಧಾರ್ಮಿಕ ಶಿಕ್ಷಣ ವನ್ನೂ ಏಕೆ ಏರ್ಪಡಿಸಬಾರದು?

## ವೈದಿಕ ರಾಷ್ಟ್ರಗೀತೆ

ಆ ಬ್ರಹ್ಮನ್ ಬ್ರಾಹ್ಮಣೋ ಬ್ರಹ್ಮವರ್ಚಸೀ ಜಾಯತಾಮ್ ।
ಆ ರಾಷ್ಟ್ರೇ ರಾಜನ್ಯಃ ಶೂರ ಇಷವ್ಯೋಽತಿವ್ಯಾಧೀ ಮಹಾರಥೋ ಜಾಯತಾಂ ॥
ದೋಗ್ಧ್ರೀ ಧೇನುರ್ವೋಢಾನಡ್ವಾನಾಶುಃ ಸಪ್ತಿಃ ಪುರನ್ಧಿರ್ಯೋಷಾ ।
ಜಿಷ್ಣೂರಥೇಷ್ಠಾಃ ಸಭೇಯೋ ಯುವಾಸ್ಯ ಯಜಮಾನಸ್ಯ ವೀರೋ ಜಾಯತಾಂ ॥
ನಿಕಾಮೇ ನಿಕಾಮೇ ನಃ ಪರ್ಜನ್ಯೋ ವರ್ಷತು ಫಲವತ್ಯೋ ನ ಓಷಧಯಃ
ಪಚ್ಯನ್ತಾಮ್ । ಯೋಗಕ್ಷೇಮೋ ನಃ ಕಲ್ಪತಾಮ್ ॥ (ಯಜು. ಸಂ. ೨೨–೨೨)

ವ್ಯಕ್ತಿಯ ಕರ್ಮದ ಮತ್ತು ಜೀವನಕ್ಕೆ ಬೇಕಾದ ಪ್ರಾಣಿ ಪದಾರ್ಥ ಗಳ ಉಚ್ಚ ಆದರ್ಶ ರಾಷ್ಟ್ರದಲ್ಲಿರಬೇಕೆಂದು ಯಾರುತಾನೇ ಕೋರಲಿಕ್ಕಿಲ್ಲ? ತನ್ನ ರಾಷ್ಟ್ರವು ಎಲ್ಲಾ ಸಾಧನ ಸಮೃದ್ಧಿಗಳಿಂದ ಹೆಚ್ಚಿನ ಉನ್ನತವಾಗಿರ ಬೇಕೆಂದು ಯಾರುತಾನೇ ಬಯಸರು? ಬ್ರಾಹ್ಮಣರು ರಾಷ್ಟ್ರದ ಜೀವನಾ ಧಾರವಾದವರು, ಐಹಿಕ-ಪಾರಲೌಕಿಕ ಜೀವನದ ಆದರ್ಶ ಮಾರ್ಗ

ದರ್ಶಕರು. ಮುಂದಾಳುಗಳ ಅವನತಿಯಿಂದ ರಾಷ್ಟ್ರದ ಅವನತಿಯಾದಂತೆ ಬ್ರಾಹ್ಮಣರ ಅವನತಿಯಿಂದ ರಾಷ್ಟ್ರವು ಅವನತವಾಗುವುದು. ಈ ದೃಷ್ಟಿಯಿಂದ ಈ ವೈದಿಕ ಪ್ರಾರ್ಥನೆಯಲ್ಲಿ ಸರ್ವ ಪ್ರಥಮ ಬ್ರಾಹ್ಮಣರ ಉಲ್ಲೇಖವಿದೆ—ನಮ್ಮ ರಾಷ್ಟ್ರದಲ್ಲಿ ಬ್ರಾಹ್ಮಣರು ಎಲ್ಲಾ ವಿಧದಿಂದ ವಿದ್ವಾಂಸರಾಗಬೇಕು, ಜ್ಞಾನ ವಿಜ್ಞಾನಸಂಪನ್ನರಾಗಬೇಕು, ಅಪಾರ ಬ್ರಹ್ಮತೇಜಸ್ಸಿನಿಂದ ಕಂಗೊಳಿಸುತ್ತಿರಬೇಕು, ಅವರ ತಪಃ ಪ್ರಧಾನವಾಗಿರುವಂಥಾ ಆದರ್ಶ ತ್ಯಾಗಜೀವನ ಸರ್ವತೋಪರಿ ರಾಷ್ಟ್ರದ ಅಭ್ಯುದಯ ನಿಃಶ್ರೇಯಸ್ಸುಗಳಿಗೆ ಕಾರಣವಾಗಬೇಕು. ರಾಷ್ಟ್ರದಲ್ಲಿ ರಕ್ಷಣೆಗಾಗಿ ಇರುವ ಕ್ಷತ್ರಿಯವರ್ಗವು ಶೂರವಾಗಿಯೂ, ಯುದ್ಧಕಲಾನಿಪುಣವಾಗಿಯೂ, ಲಕ್ಷ್ಯಭೇದಿಯಾಗಿಯೂ ಸಾವಿರಾರು ಜನರ ಸಂಗಡ ಒಬ್ಬನೇ ನಿಂತು ಯುದ್ಧಮಾಡುವಂಥ ಸಾಮರ್ಥ್ಯವುಳ್ಳದ್ದಾಗಿಯೂ ಇರಬೇಕು. ನೀತಿ, ವಿನಯ, ಧರ್ಮಪಾಲನೆ, ಧರ್ಮರಕ್ಷಣೆಗಾಗಿ ಅದು ಯಾವತ್ತೂ ಆತ್ಮಯಜ್ಞವನ್ನುಮಾಡುವುದಕ್ಕಾಗಿ ಸಿದ್ಧವಾಗಿರಬೇಕು. ರಾಷ್ಟ್ರದಲ್ಲಿ ದರ್ಶನಾನಂದವನ್ನೀಯುವ ತನ್ನ ದರ್ಶನದಿಂದಲೇ ಪ್ರತಿಯೊಬ್ಬರ ಹೃದಯದಲ್ಲಿ ಸತ್ವಗುಣದ ಸಾಮ್ರಾಜ್ಯವನ್ನು ಹೆಚ್ಚಿಸುವ ಸುಂದರ ಮತ್ತು ಪುಷ್ಟ ಆಕಳುಗಳ ಹಿಂಡು ಅಮೃತೋಪಮವಾದ ದುಗ್ಧವನ್ನು ಸುರಿಸುತ್ತ ನಮ್ಮ ರಾಷ್ಟ್ರದಲ್ಲಿ ದಿನದಿನಕ್ಕೂ ಬೆಳೆಯುತ್ತಲೇ ಇರಬೇಕು. ನಮ್ಮ ರಾಷ್ಟ್ರದಲ್ಲಿ ಪುಷ್ಟವಾಗಿರುವಂಥ, ಎಂಥಾ ಭಾರವನ್ನೂ ಎಳೆಯುವ, ಬಲಿಷ್ಠ ಎತ್ತುಗಳ ಸಂಖ್ಯೆ ದಿನದಿನಕ್ಕೂ ಹೆಚ್ಚುತ್ತಲೇ ಇರಬೇಕು. ದುರ್ಗಮ ಮಾರ್ಗದಲ್ಲಿಯೂ ಅತಿವೇಗದಿಂದ ಹೋಗತಕ್ಕ ವಾಯುವೇಗದ ಕುದುರೆಗಳು ನಮ್ಮ ದೇಶದಲ್ಲಿ ಹೆಚ್ಚಾಗಿ ಇರಬೇಕು. ನಮ್ಮ ದೇಶದಲ್ಲಿ ಸುಮಂಗಲಿಯರ ಸಂಖ್ಯೆ ಹೆಚ್ಚಾಗಿರಬೇಕು. ಗುಣ, ಶೀಲ, ಸೌಂದರ್ಯಗಳಿಂದ ಅವರು ಸಾತ್ವಿಕ ಮಾತೃವರ್ಗದ ಒಂದು ಆದರ್ಶವಾಗಿ ಪತಿಪರಾಯಣರಾಗಿರಬೇಕು. ಗೃಹಕೃತ್ಯದಲ್ಲಿ ಅತಿ ದಕ್ಷರಾಗಿರಬೇಕು. ಕಾರ್ಯಾಕಾರ್ಯವಿಚಕ್ಷಣರಾಗಿರಬೇಕು. ಧರ್ಮರಕ್ಷಣಕ್ಕಾಗಿ ಬದ್ಧಕಂಕಣರಾದ ರಥಾರೂಢರಾದ ವೀರರ ಜಯಭೇರಿ ಮತ್ತು ಯಶೋಗಾನವು ಜಗತ್ತಿನಲ್ಲೆಲ್ಲಾ ಮೊಳೆಯುತ್ತಿರಬೇಕು. ಯಜ್ಞಾರ್ಥ ಕರ್ಮ ಮಾಡತಕ್ಕ ಶೂರ ಸುಕೃತಿಗಳಾದ ಯುವಕರು

ಸುರಕ್ಷಿತರಾಗಿಯೂ, ವಿವೇಕ ವಿಚಾರ ಸಂಪನ್ನರಾಗಿಯೂ, ಸಭ್ಯರಾಗಿಯೂ ಸೌಮ್ಯ, ಸರಳ ಗುಣವುಳ್ಳವರಾಗಿಯೂ, ಮಾತಾಪಿತೃ ಗುರುದೇವತೆಗಳಲ್ಲಿ ನಿಷ್ಠೆಯುಳ್ಳವರಾಗಿಯೂ ಇರಬೇಕು. ರಾಷ್ಟ್ರದ ನಿಜವಾದ ಆಧಾರ ಸ್ತಂಭಗಳಾಗಿರಬೇಕು. ಸಕಾಲದಲ್ಲಿ ನಮ್ಮ ರಾಷ್ಟ್ರದಲ್ಲಿ ಮಳೆಯಾಗಬೇಕು. ನಮ್ಮ ರಾಷ್ಟ್ರದ ಎಲ್ಲಾ ಉದ್ಯಾನಗಳೂ ಫಲಭಾರದಿಂದ ಬಗ್ಗಿರುವ ನಯನ ಮನೋಹರವಾದ ವೃಕ್ಷಗಳಿಂದ ಜನರ ಆನಂದವನ್ನು ಹೆಚ್ಚಿಸುತ್ತಿರಬೇಕು. ನಮ್ಮ ರಾಷ್ಟ್ರವು ಧನಧಾನ್ಯಗಳಿಂದ ತುಂಬಾ ಸಮೃದ್ಧವಾಗಿರಬೇಕು. ಪರಮಾತ್ಮನು ಅವಶ್ಯವಾದುದನ್ನೆಲ್ಲಾ ಕೊಟ್ಟು ಸ್ಥಿರಚರ ಸಂಪತ್ತಿಯ ಮಾನಸಿಕ ಸ್ವಾಸ್ಥ್ಯದ ಪ್ರಗತಿಜೀವನದ ರಕ್ಷಣೆಯನ್ನು ಮಾಡಲಿ! ತನ್ನ ಮತ್ತು ರಾಷ್ಟ್ರದ ಅಭ್ಯುದಯ ನಿಃಶ್ರೇಯಸ್ಸುಗಳನ್ನು ಕೋರುವ ಮಾನವಾತನುತಾನೆ ಈ ವಿಧವಾಗಿ ಪರಮಾತ್ಮನ ಪಾದಕಮಲಗಳಲ್ಲಿ ಪ್ರಾರ್ಥಿಸನು!

## ಗೋರಕ್ಷಣ

“ಮಾತರಃ ಸರ್ವಭೂತಾನಾಂ ಗಾವಃ ಸರ್ವಸುಖಪ್ರದಾಃ”

ಆಕಳುಗಳು ರಾಷ್ಟ್ರದ ತಾಯಂದಿರೇ ಸರಿ. ಎಲ್ಲಾ ಮಕ್ಕಳ ಸಂಗೋಪನ ಮತ್ತು ಸಂವರ್ಧನಕ್ಕಾಗಿ ತಾಯಿಯು ಇರುವಂತೆ ರಾಷ್ಟ್ರದ ಎಲ್ಲಾ ಜನರ ಸಂವರ್ಧನ ಮತ್ತು ಸಂಗೋಪನಗಳಿಗಾಗಿ ಆಕಳುಗಳು ಇರುವುವು. ತಾಯಿಯಂತೆ ಸಮದೃಷ್ಟಿಯಿಂದ ಎಲ್ಲರ ಪೋಷಣೆಯನ್ನು ಆಕಳುಗಳು ಮಾಡುವವು. ತನ್ನ ಮೈ ಹಾಲನ್ನು ಉಣಿಸಿ ಮಕ್ಕಳನ್ನು ಬೆಳೆಸುವ ತಾಯಿಯಂತೆ ಗೋವುಗಳು ಇರುವುವು. ತಾಯಿಯು ತನ್ನ ತರಳರಿಗೆ ಮಾತ್ರ ಹಾಲನ್ನು ಉಣ್ಣಿಸುವುದಾದರೆ ಈ ಗೋಮಾತೆಯು ಆಬಾಲವೃದ್ಧರಿಗೂ ಮರಣ ಪರ್ಯಂತವಾಗಿ ಸ್ವಪರವೆಂದೆನ್ನದೆ ವಧೆ, ವರ್ಧನಮಾಡತಕ್ಕವರಿಗೂ ಸಹ ವಾತ್ಸಲ್ಯದಿಂದ ಮೈ ಹಾಲನ್ನು ಉಣ್ಣಿಸುವುದು. ಈ ದೃಷ್ಟಿಯಿಂದ ವಿಚಾರ ಮಾಡುವಾಗ ಗೋಮಾತೆಯ ಸ್ಥಾನವು ಅತ್ಯಂತ ಉಚ್ಚವರ್ಗಕ್ಕೆ ಸೇರಿದ್ದೆಂದು ಯಾರುತಾನೆ ಎಣಿಸಲಿಕ್ಕಿಲ್ಲ? ಗೋವಧೆ ಎಂದರೆ ಆದರ್ಶ ತಾಯಿಯ ವಧೆಯೇ ಸರಿ ಎಂದು ಯಾರುತಾನೆ ಭಾವಿಸಲಿಕ್ಕಿಲ್ಲ! ಮುದಿ ಆಕಳುಗಳ ರಕ್ಷಣೆ ಕೃತಜ್ಞತೆಯ ಮೂಲಕವಾಗಿ ಮಾತೃಭಾವನೆಯಿಂದ ಯಾರು ತಾನೆ

ಮಾಡಲಿಕ್ಕಿಲ್ಲ. ಗೋವುಗಳು ಹಿಂದೂ ಜನರಿಗೆ ಮಾತ್ರ ತಪ್ಪ ಹಾಲನ್ನು ನೀಡಿ, ಮಿಕ್ಕ ಮಹಮದ್, ಈಸಾಯಿ ಸಂತತಿಗಾಗಿ ಹಾಲನ್ನು ಉಣ್ಣಿಸದಿರುವ ಪಕ್ಷದಲ್ಲಿ ಗೋವಧಬಂದಿಯ ಕೂಗಾಟವು ಸಾಂಪ್ರದಾಯಿಕವಿದೆ ಎಂದು ಇಂದಿನ ಶಾಸನಕರ್ತೃಗಳು ಭಾವಿಸಲು ಅವಕಾಶವಿತ್ತು.

"ಯದ್ಗೃಹೇ ದುಃಖಿತಾ ಗಾವಃ ಸ ಯಾತಿ ನರಕನ್ನರಃ" ಯಾವಾತನ ಗೃಹದಲ್ಲಿ ಗೋಮಾತೆಯು ಅಸಹ್ಯ ಕರ್ಮಗಳಿಂದ ಕಣ್ಣೀರನ್ನು ಸುರಿಸುವುದೋ ಆ ನರನು ನರಕವನ್ನೈದುವನೆಂಬ ಈ ಹೇಳಿಕೆಯ ಸತ್ಯತೆಯನ್ನು ಯಾರುತಾನೆ ಮನಗಾಣಲಿಕ್ಕಿಲ್ಲ!

"ಗವಾಂ ಸೇವಾ ತು ಕರ್ತವ್ಯಾ ಗೃಹಸ್ಥೈಃ ಪುಣ್ಯಲಿಪ್ಸುಭಿಃ।
ಗವಾಂ ಸೇವಾಪರೋ ಯಸ್ತು ತಸ್ಯ ಶ್ರೀರ್ವರ್ಧತೇ ಚಿರಾತ್॥"
ಪುಣ್ಯದ ಇಚ್ಛೆಯುಳ್ಳ ಗೃಹಸ್ಥರೆಲ್ಲಾ ಆಸೆಯಿಂದ ಗೋಸೇವೆಯನ್ನು ಮಾಡತಕ್ಕದ್ದು. ಗೋಸೇವಾಪರನಾಗಿರುವವನ ವೈಭವವು ಸರ್ವತೋಮುಖವಾಗಿ ವೃದ್ಧಿಗೊಳ್ಳುವುದು. ಗೋವುಗಳನ್ನು ಸಾಕುವ ಮನುಷ್ಯನ ಮನೆಯ ಮುದ್ದಾದ ಮಕ್ಕಳು ಆರೋಗ್ಯಭಾಗ್ಯದಿಂದ ಕೂಡಿ ಈ ಸಂತತಿಯ ಸಂಪತ್ತು ಚಿತ್ತಾಕರ್ಷಕವಾಗಿಯೂ, ಚಿತ್ತಾಹ್ಲಾದಕವಾಗಿಯೂ ತುಂಬಾ ವೃದ್ಧಿಗೊಳ್ಳುವುದು. ಗೊಬ್ಬರದಿಂದ ಪೈರು ಚೆನ್ನಾಗಿ ಆಗಿ ಮನೆಯಲ್ಲಿ ಧಾನ್ಯದ ಸಮೃದ್ಧಿಯಾಗುವುದು. ಧಾನ್ಯಸಮೃದ್ಧಿಯಿಂದ ಧನಸಮೃದ್ಧಿಯೂ ಆಗುವುದು. ಪರಿವಾರದ ಜನರೂ ದಷ್ಟಪುಷ್ಟರಾಗಿ ತಮ್ಮ ಬುದ್ಧಿ ಮತ್ತು ಆರೋಗ್ಯ ವೈಭವದಿಂದ ದರ್ಶನಾನಂದವನ್ನುಂಟುಮಾಡುವರು. ತಾಯಿಯ ಸೇವೆಯಿಂದ ಪುಣ್ಯಪ್ರಾಪ್ತಿಯಾದಂತೆ ಗೋಮಾತೆಯ ಸೇವೆಯಿಂದ ಪುಣ್ಯಪ್ರಾಪ್ತಿ ಆಗಲಾರದೆಂದು ಯಾರುತಾನೆ ಭಾವಿಸುವರು? ಎಲ್ಲಾ ದೇವತೆಗಳ ಆವಾಸಸ್ಥಾನವಾದ ಈ ಗೋಮಾತೆಯ ಸೇವೆಗಿಂತಲೂ ಪುಣ್ಯಪ್ರಾಪಕವಾದ ಮತ್ತಾವ ಪರಮಾರ್ಥಸಾಧನವಿದೆ? ಪರೋಪಕಾರವೇ ಪುಣ್ಯವೆಂದಾಗುವಲ್ಲಿ ಪುಣ್ಯವಂತರಲ್ಲಿ ಹೆಚ್ಚಿನ ಅಂಶದಿಂದ ಪರಮಾತ್ಮನು ಇರುವನೆಂದಾದರೆ ಪರಮಾತ್ಮನ ಬಳಿಕ ಎಲ್ಲಾ ದೇವತೆಗಳೂ ಇರುವಂತೆ ಈ ಗೋವಿನಲ್ಲಿ ಎಲ್ಲಾ ದೇವತೆಗಳ ವಾಸವಿದೆ ಎಂಬ ಮಾತು ಹೇಗೆ ತಾನೆ ಸತ್ಯವಾಗದು? ಗೋವಿನಂತಹ ಪರೋಪಕಾರಕ ವಸ್ತು

ನುತ್ತೊಂದಿಲ್ಲ. ಜೀವಂತವಿರುವಾಗ ಇದರ ಹಾಲಿನ ಉಪಯೋಗವಾಗಿ ಗೋಮೂತ್ರ, ಗೋಮಯವೂ ಸಹ ಉಪಯೋಗಕ್ಕೆ ಬರುವುವು. ದೇಹ ಬಿದ್ದುಹೋದಮೇಲೂ ಇದರ ಚರ್ಮ, ಎಲುಬು, ಕೊಂಬುಗಳಿಂದ ಜೀವನಸಾಧಕವಾದ ಪದಾರ್ಥಗಳ ಉತ್ಪತ್ತಿಯಾಗುವುದು. ತಾನು ಹುಲ್ಲುಕಡ್ಡಿಯಿಂದ ಜೀವಿಸಿ ಜಗತ್ತಿಗೆ ಇಂಥ ಉಪಕಾರವನ್ನೀಯುವ ಈ ಗೋಮಾತೆಗಿಂತಲೂ ಹೆಚ್ಚಿನ ಆಪ್ತರಾರಿಹರು!

ತೀರ್ಥಸ್ನಾನೇಷು ಯತ್ಪುಣ್ಯಂ ಯತ್ಪುಣ್ಯಂ ವಿಪ್ರಭೋಜನೇ ।
ಯತ್ಪುಣ್ಯಂ ಚ ಮಹಾದಾನೇ ಯತ್ಪುಣ್ಯಂ ಹರಿಸೇವನೇ ॥

ಸರ್ವವ್ರತೋಪವಾಸೇಷು ಸರ್ವೇಷ್ವೇವ ತಪಸ್ಸುಚ ।
ಭೂಮಿಪರ್ಯಟನೇ ಯತ್ತು ಸತ್ಯವಾಕ್ಯೇಷುಯದ್ಭವೇತ್ ॥

ತತ್ಪುಣ್ಯಂ ಪ್ರಾಪ್ಯತೇ ಸದ್ಯಃ ಕೇವಲಂ ಧೇನುಸೇವಯಾ ।

ತೀರ್ಥಸ್ನಾನಗಳಿಂದಲೂ, ಬ್ರಾಹ್ಮಣ ಭೋಜನದಿಂದಲೂ, ಮಹಾದಾನಗಳಿಂದಲೂ, ಹರಿಸೇವೆಯಿಂದಲೂ, ಎಲ್ಲಾ ವ್ರತೋಪವಾಸಗಳಿಂದಲೂ, ಎಲ್ಲಾ ತಪಸ್ಸುಗಳಿಂದಲೂ, ಭೂಪ್ರದಕ್ಷಣೆಯಿಂದಲೂ, ಸತ್ಯವಾಕ್ಯದಿಂದಲೂ ಯಾವ ಪುಣ್ಯವು ಲಭಿಸುವುದೋ ಅದು ಒಂದು ಧೇನುಸೇವೆಯಿಂದಲೇ ಮನುಷ್ಯರಿಗೆ ಕೂಡಲೆ ಲಭಿಸುವುದು.

ಪೃಷ್ಠೇ ಬ್ರಹ್ಮಾ ಗಲೇ ವಿಷ್ಣುರ್ಮುಖೇ ರುದ್ರಃ ಪ್ರತಿಷ್ಠಿತಃ ।
ಮಧ್ಯೇ ದೇವಗಣಾಃ ಸರ್ವೇ ರೋಮಕೂಪೇ ಮಹರ್ಷಯಃ ॥

ನಾಗಾಃ ಪುಚ್ಛೇ ಖುರಾಗ್ರೇಷು ಯೇಚಾಷ್ಟೌಕುಲಪರ್ವತಾಃ ।
ಮೂತ್ರೇ ಗಂಗಾದಯೋ ನದ್ಯೋನೇತ್ರಯೋಃ ಶಶಿಭಾಸ್ಕರೌ ॥

ಯೇನ ಯಸ್ಯಾಸ್ತನೌ ವೇದಾಃ ಸಾ ಧೇನುರ್ವರದಾಸ್ತುಮೇ ।

ಆಕಳ ಬೆನ್ನಿನಲ್ಲಿ ಬ್ರಹ್ಮದೇವನನ್ನೂ, ಕೊರಳಲ್ಲಿ ವಿಷ್ಣುವನ್ನೂ, ಮುಖದಲ್ಲಿ ರುದ್ರನನ್ನೂ, ಮಧ್ಯದಲ್ಲಿ ದೇವಗಣಗಳನ್ನೂ, ರೋಮಕೂಪಗಳಲ್ಲಿ ಮಹರ್ಷಿಗಳನ್ನೂ, ಬಾಲದಲ್ಲಿ ಎಲ್ಲಾ ನಾಗರುಗಳನ್ನೂ, ಗೊರಸುಗಳ ಅಗ್ರಗಳಲ್ಲಿ ಅಷ್ಟಕುಲಪರ್ವತಗಳನ್ನೂ, ಮೂತ್ರದಲ್ಲಿ ಗಂಗಾದಿ ಪುಣ್ಯನದಿಗಳನ್ನೂ, ನೇತ್ರಗಳಲ್ಲಿ ಸೂರ್ಯಚಂದ್ರರನ್ನೂ, ಸ್ತನಗಳಲ್ಲಿ ವೇದ

ಗಳನ್ನೂ ಇಟ್ಟುಕೊಂಡಿರುವ ಗೋಮಾತೆಯು ನಮ್ಮಗಳಿಗೆ ವರವನ್ನು ಕೊಡುವಂಥವಳಾಗಲಿ! ಇಂಥಾ ಗೋಮಾತೆಯ ವಧೆಯೆಂದರೆ ಏನೆಂಬು ದನ್ನು ಅವರೇ ತಿಳಿದುಕೊಳ್ಳಲಿ.

ಅಘ್ನ್ಯಾಃ ಇತಿ ಗವಾಸ್ನಾಮ ಕಏನಾಂ ಹಂತು ಮರ್ಹತಿ ।

'ಅಘ್ನ್ಯಾ' ಎಂದರೆ ಅವಧ್ಯಳು; ಇದು ಗೋವಿನ ಹೆಸರು. ಹೆಸರಿ ನಿಂದಲೇ ಅವಧ್ಯಳಾದ ಈ ಗೋಮಾತೆಯನ್ನು ವಧಿಸಲು ಯಾರುಅರ್ಹರು? ಭಾರತೀ ಸಂಸ್ಕೃತಿಯ ಗೋವು ಒಂದು ಮುಖ್ಯ ಅಂಗವಾಗಿರುವುದು.

ತ್ವಂ ಮಾತಾ ಸರ್ವದೇವಾನಾಂ ತ್ವಂ ಚ ಯಜ್ಞಸ್ಯ ಕಾರಣಮ್ ।
ತ್ವಂ ತೀರ್ಥಂ ಸರ್ವತೀರ್ಥಾನಾಂ ನಮಸ್ತೇಽಸ್ತು ಸದಾನಘೇ ॥
(ಸ್ಕಂದ-ಬ್ರಹ್ಮ-ಧರ್ಮಾರಣ್ಯ. ೧೦-೧೪)

ಹೇ ವಿಮಲೇ! ನೀನು ಮನುಷ್ಯರ ತಾಯಿ ಒಂದೇ ಅಲ್ಲ, ನೀನು ಸಮಸ್ತ ದೇವತೆಗಳಿಗೂ ತಾಯಿಯಾಗಿರುವೆ, ನೀನು ಯಜ್ಞಗಳ ಕಾರಣ, ಎಲ್ಲಾ ತೀರ್ಥಗಳಿಗೂ ನೀನು ತೀರ್ಥ, ನಿನಗೆ ಯಾವಾಗಲೂ ನನ್ನ ನಮಸ್ಕಾರವಿರಲಿ, ಎಂಬುದಾಗಿ ಗೋವಿನ ಸ್ತುತಿಯು ಮಾಡಲ್ಪಟ್ಟಿದೆ. ಈ ಶ್ಲೋಕದಿಂದ ಆಕಳ ಮಹತ್ವವು ತೋರಿಬರುವಂತಿದೆ.

ಗಾವೋ ಯಜ್ಞಸ್ಯ ಹಿ ಫಲಂ ಗೋಷು ಯಜ್ಞಾಃ ಪ್ರತಿಷ್ಠಿತಾಃ ।
(ಮಹಾಭಾರತ)

ಗೋಮಾತೆಯೇ ಯಜ್ಞಫಲರೂಪವಾಗಿರುವಳು. ಗೋವುಗಳಲ್ಲಿಯೇ ಯಜ್ಞಗಳು ಪ್ರತಿಷ್ಠೆಗೊಂಡಿರುವುವು.

ಯಜ್ಞಗಳಿಗೆ ಬೇಕಾದ ಘೃತವು ಗೋವಿನಿಂದಲೇ ಉಂಟಾಗು ವಂಥಾದ್ದಲ್ಲವೇ! ಸ್ಥಳಶುದ್ಧಿಗಾಗಿಯೂ, ಶುದ್ಧವಾತಾವರಣ ನಿರ್ಮಾಣ ಕ್ಕಾಗಿಯೂ, ಆರೋಗ್ಯಕ್ಕಾಗಿಯೂ, ಗೋಮಯದಿಂದ ಸಾರಿಸುವಂಥ ಪದ್ಧತಿಯು ಇದೆ. ದೇಹಶುದ್ಧಿಗಾಗಿಯೂ, ಮನಃಶುದ್ಧಿಗಾಗಿಯೂ, ಪ್ರಾಯಶ್ಚಿತ್ತರೂಪವಾಗಿಯೂ ಪಂಚಗವ್ಯಪ್ರಾಶನದ ಕ್ರಮವು ಆರ್ಯ ರಲ್ಲಿದೆ. ಹೀಗೆ ಸರ್ವತೋಪರಿ ಉಪಯುಕ್ತವಾದ ಗೋವಿನ ವಧೆಯೆಂದರೆ ಜೀವನಕ್ಕೆ ಅತಿ ಉಪಯುಕ್ತವಾದ ವಸ್ತುವಿನ ನಾಶವೇ ಸರಿ.

ಭಾರತದಲ್ಲಿ ಗೋವಧೆ ನಿಷೇಧ ಮಾಡುವಂಥಾ ಪ್ರಜೆಗಳ ಸಂಖ್ಯೆಯು ಹೆಚ್ಚಿದೆ. ಮಾಂಸದ ಉಪಯೋಗ ಕೆಲಜನರಿಗೆ ಮಾತ್ರ. ಆದರೆ, ಗೋದುಗ್ಧದ ಉಪಯೋಗವು ಭಾರತವರ್ಷದ ಆಬಾಲವೃದ್ಧರಿಗೂ, ರೋಗಿ-ಆರೋಗ್ಯವಂತರಿಗೂ, ಶಕ್ತ-ಅಶಕ್ತರಿಗೂ ಆಗುವುದು. ಗೋವಧ ದಿಂದ ಎಲ್ಲರ ಅನಹಿತವೂ ಆಗುವುದು. ಬಹುಜನರ ಹಿತವನ್ನು ಸಾಧಿಸು ವಂಥಾದ್ದು ರಾಜಶಾಸನದ ಉದ್ದೇಶ. ಗೋರಕ್ಷಣೆ ಎಲ್ಲರಿಗೂ ಬೇಕಾಗು ವುದು. ಅದು ಒಂದು ಭಾರತದ ಧನ—ಜಗತ್ತಿನ ಜೀವನ.

ಮಹಾಭಾರತದ ಅನುಶಾಸನಪರ್ವದಲ್ಲಿ '**ಗೋಭಿಸ್ತುಲ್ಯಂ ನ ಪಶ್ಯಾಮಿ**' ಎಂಬುದಾಗಿ ಚವನ ಮಹರ್ಷಿಯು ನಹುಷರಾಜನಿಗೆ ಹೇಳಿದ್ದುದು ಎಷ್ಟು ಸಾರ್ಥಕವಿದೆ!

ಈ ಎಲ್ಲಾ ದೃಷ್ಟಿಯಿಂದ '**ಯದ್ಯದ್ವಿಭೂತಿಮತ್ಸತ್ವಂ**' ಎಂಬ ಭಗವಂತನ ವಚನದ ಪ್ರಕಾರ ಆರ್ಯರು ಆಕಳಲ್ಲಿ ದೇವತಾ ಬುದ್ಧಿ ಯನ್ನಿಟ್ಟು ಅದರ ಸೇವೆಯಿಂದ ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸುವರು. ವಿಶ್ವದ ಎಲ್ಲಾ ಜನರಲ್ಲಿಯೂ ಈ ಕೃತಜ್ಞತೆಯು ಇರಬೇಕಾದುದಲ್ಲವೇ!

ವಿಶೇಷತಃ ಭಾರತದ ಕೃಷಿಯು ಎಂದರೆ ಜೀವನವು ಗೋಪ್ರಾಣ ವಾಗಿರುವುದು. ಆಕಳು ತಾನು ಉಪಕಾರಮಾಡುವುದಲ್ಲದೆ, ತನ್ನ ಗಂಡು ಸಂತತಿಯಿಂದಲೂ ಕೃಷಿಗೆ ಕಾರಣವಾಗಿ ಜಗತ್ತಿನ ಜೀವನಕ್ಕೆ ಆಧಾರ ವಾಗಿರುವುದು.

ಪರಧರ್ಮೀಯರ ಆಡಳಿತದ ಕಾಲದಲ್ಲಿ ಇದೊಂದು ಅರ್ಥೋ ತ್ಪತ್ತಿಯ ಸಾಧನವೆಂದು ಮಾಡಲ್ಪಟ್ಟರೂ, ಈ ನಿಂದ್ಯವಾದ ಅರ್ಥೋ ತ್ಪಾದನದ ಸಾಧನವು ಸರ್ವಹಿತ ಪ್ರಧಾನವಾದ ಸ್ವರಾಜ್ಯದಲ್ಲಿ—ಈ ರಾಮ ರಾಜ್ಯದಲ್ಲಿ—ಇನ್ನೂ **ಗೋವಧೆಯು** ಹೇಗೆತಾನೇ ನಿಷೇಧಿಸಲ್ಪಡಲಿಲ್ಲ ವೆಂದು ಬಹು ಜನರು ಆಲೋಚನಾಪರರಾಗಿದ್ದಾರೆ.

ಮಾಂಸದಿಂದ ಮೇದೋವೃದ್ಧಿಯಾದರೆ '**ಸದ್ಯಃ ಶುಕ್ರಕರಂ ಪಯಃ**' ಗೋದುಗ್ಧವು ಶೀಘ್ರವಾಗಿ ವೀರ್ಯೋತ್ಪಾದಕವಾಗಿರುವುದು. ಎಲ್ಲಾ ಧಾತುಗಳಲ್ಲಿ ಸಾರಭೂತವಾದ ದೇಹದ ಬಾಳಿಗೆ ಸರ್ವಥೈವ ಕಾರಣವಾದ ವೀರ್ಯಶಕ್ತಿದಿಂದಲೇ ವಿಜ್ಞಾತವಾದ ಶುಕ್ರೋತ್ಪಾದಕ

ಗಳನ್ನೂ ಇಟ್ಟುಕೊಂಡಿರುವ ಗೋಮಾತೆಯು ನಮ್ಮಗಳಿಗೆ ವರವನ್ನು ಕೊಡುವಂಥವಳಾಗಲಿ! ಇಂಥಾ ಗೋಮಾತೆಯ ವಧೆಯೆಂದರೆ ಏನೆಂಬು ದನ್ನು ಅವರೇ ತಿಳಿದುಕೊಳ್ಳಲಿ.

ಅಘ್ನ್ಯಾಃ ಇತಿ ಗವಾಸ್ನಾಮ ಕವಿನಾಂ ಹಂತು ಮರ್ಹತಿ ।

'ಅಘ್ನ್ಯ' ಎಂದರೆ ಅವಧ್ಯಳು; ಇದು ಗೋವಿನ ಹೆಸರು. ಹೆಸರಿನಿಂದಲೇ ಅವಧ್ಯಳಾದ ಈ ಗೋಮಾತೆಯನ್ನು ವಧಿಸಲು ಯಾರುಅರ್ಹರು? ಭಾರತೀ ಸಂಸ್ಕೃತಿಯ ಗೋವು ಒಂದು ಮುಖ್ಯ ಅಂಗವಾಗಿರುವುದು.

ತ್ವಂ ಮಾತಾ ಸರ್ವದೇವಾನಾಂ ತ್ವಂ ಚ ಯಜ್ಞಸ್ಯ ಕಾರಣಮ್ ।
ತ್ವಂ ತೀರ್ಥಂ ಸರ್ವತೀರ್ಥಾನಾಂ ನಮಸ್ತೇಽಸ್ತು ಸದಾನಘೇ ॥
(ಸ್ಕಂದ-ಬ್ರಹ್ಮ-ಧರ್ಮಾರಣ್ಯ. ೧೦-೧೮)

ಹೇ ವಿಮಲೇ! ನೀನು ಮನುಷ್ಯರ ತಾಯಿ ಒಂದೇ ಅಲ್ಲ, ನೀನು ಸಮಸ್ತ ದೇವತೆಗಳಿಗೂ ತಾಯಿಯಾಗಿರುವೆ, ನೀನು ಯಜ್ಞಗಳ ಕಾರಣ, ಎಲ್ಲಾ ತೀರ್ಥಗಳಿಗೂ ನೀನು ತೀರ್ಥ, ನಿನಗೆ ಯಾವಾಗಲೂ ನನ್ನ ನಮಸ್ಕಾರವಿರಲಿ, ಎಂಬುದಾಗಿ ಗೋವಿನ ಸ್ತುತಿಯು ಮಾಡಲ್ಪಟ್ಟಿದೆ. ಈ ಶ್ಲೋಕದಿಂದ ಆಕಳ ಮಹತ್ವವು ತೋರಿಬರುವಂತಿದೆ.

ಗಾವೋ ಯಜ್ಞಸ್ಯ ಹಿ ಫಲಂ ಗೋಷು ಯಜ್ಞಾಃ ಪ್ರತಿಷ್ಠಿತಾಃ ।
(ಮಹಾಭಾರತ)

ಗೋಮಾತೆಯೇ ಯಜ್ಞಫಲರೂಪವಾಗಿರುವಳು. ಗೋವುಗಳಲ್ಲಿಯೇ ಯಜ್ಞಗಳು ಪ್ರತಿಷ್ಠೆಗೊಂಡಿರುವುವು.

ಯಜ್ಞಗಳಿಗೆ ಬೇಕಾದ ಘೃತವು ಗೋವಿನಿಂದಲೇ ಉಂಟಾಗುವಂಥಾದ್ದಲ್ಲವೇ! ಸ್ಥಳಶುದ್ಧಿಗಾಗಿಯೂ, ಶುದ್ಧವಾತಾವರಣ ನಿರ್ಮಾಣಕ್ಕಾಗಿಯೂ, ಆರೋಗ್ಯಕ್ಕಾಗಿಯೂ, ಗೋಮಯದಿಂದ ಸಾರಿಸುವಂಥ ಪದ್ಧತಿಯು ಇದೆ. ದೇಹಶುದ್ಧಿಗಾಗಿಯೂ, ಮನಃಶುದ್ಧಿಗಾಗಿಯೂ, ಪ್ರಾಯಶ್ಚಿತ್ತರೂಪವಾಗಿಯೂ ಪಂಚಗವ್ಯಪ್ರಾಶನದ ಕ್ರಮವು ಆರ್ಯರಲ್ಲಿದೆ. ಹೀಗೆ ಸರ್ವತೋಪರಿ ಉಪಯುಕ್ತವಾದ ಗೋವಿನ ವಧೆಯೆಂದರೆ ಜೀವನಕ್ಕೆ ಅತಿ ಉಪಯುಕ್ತವಾದ ವಸ್ತುವಿನ ನಾಶವೇ ಸರಿ.

ಭಾರತದಲ್ಲಿ ಗೋವಧೆ ನಿಷೇಧ ಮಾಡುವಂಥಾ ಪ್ರಜೆಗಳ ಸಂಖ್ಯೆಯು ಹೆಚ್ಚಿದೆ. ಮಾಂಸದ ಉಪಯೋಗ ಕೆಲಜನರಿಗೆ ಮಾತ್ರ. ಆದರೆ, ಗೋದುಗ್ಧದ ಉಪಯೋಗವು ಭಾರತವರ್ಷದ ಆಬಾಲವೃದ್ಧರಿಗೂ, ರೋಗಿ-ಆರೋಗ್ಯವಂತರಿಗೂ, ಶಕ್ತ-ಅಶಕ್ತರಿಗೂ ಆಗುವುದು. ಗೋವಧದಿಂದ ಎಲ್ಲರ ಅಸಹಿತವೂ ಆಗುವುದು. ಬಹುಜನರ ಹಿತವನ್ನು ಸಾಧಿಸುವಂಥಾದ್ದು ರಾಜಶಾಸನದ ಉದ್ದೇಶ. ಗೋರಕ್ಷಣೆ ಎಲ್ಲರಿಗೂ ಬೇಕಾಗುವುದು. ಅದು ಒಂದು ಭಾರತದ ಧನ—ಜಗತ್ತಿನ ಜೀವನ.

ಮಹಾಭಾರತದ ಅನುಶಾಸನಪರ್ವದಲ್ಲಿ '**ಗೋಭಿಸ್ತುಲ್ಯಂ ನ ಪಶ್ಯಾಮಿ**' ಎಂಬುದಾಗಿ ಚವನ ಮಹರ್ಷಿಯು ನಹುಷರಾಜನಿಗೆ ಹೇಳಿದ್ದುದು ಎಷ್ಟು ಸಾರ್ಥಕವಿದೆ!

ಈ ಎಲ್ಲಾ ದೃಷ್ಟಿಯಿಂದ '**ಯದ್ಯದ್ವಿಭೂತಿಮತ್ಸತ್ವಂ**' ಎಂಬ ಭಗವಂತನ ವಚನದ ಪ್ರಕಾರ ಆರ್ಯರು ಆಕಳಲ್ಲಿ ದೇವತಾ ಬುದ್ಧಿಯನ್ನಿಟ್ಟು ಅದರ ಸೇವೆಯಿಂದ ತಮ್ಮ ಕೃತಜ್ಞತೆಯನ್ನು ವ್ಯಕ್ತಪಡಿಸುವರು. ವಿಶ್ವದ ಎಲ್ಲಾ ಜನರಲ್ಲಿಯೂ ಈ ಕೃತಜ್ಞತೆಯು ಇರಬೇಕಾದುದಲ್ಲವೇ!

ವಿಶೇಷತಃ ಭಾರತದ ಕೃಷಿಯು ಎಂದರೆ ಜೀವನವು ಗೋಪ್ರಾಣವಾಗಿರುವುದು. ಆಕಳು ತಾನು ಉಪಕಾರಮಾಡುವುದಲ್ಲದೆ, ತನ್ನ ಗಂಡು ಸಂತತಿಯಿಂದಲೂ ಕೃಷಿಗೆ ಕಾರಣವಾಗಿ ಜಗತ್ತಿನ ಜೀವನಕ್ಕೆ ಆಧಾರವಾಗಿರುವುದು.

ಪರಧರ್ಮೀಯರ ಆಡಳಿತದ ಕಾಲದಲ್ಲಿ ಇದೊಂದು ಅರ್ಥೋತ್ಪತ್ತಿಯ ಸಾಧನವೆಂದು ಮಾಡಲ್ಪಟ್ಟರೂ, ಈ ನಿಂದ್ಯವಾದ ಅರ್ಥೋತ್ಪಾದನದ ಸಾಧನವು ಸರ್ವಹಿತ ಪ್ರಧಾನವಾದ ಸ್ವರಾಜ್ಯದಲ್ಲಿ—ಈ ರಾಮರಾಜ್ಯದಲ್ಲಿ—ಇನ್ನೂ **ಗೋವಧೆಯು** ಹೇಗೆತಾನೇ ನಿಷೇಧಿಸಲ್ಪಡಲಿಲ್ಲವೆಂದು ಬಹು ಜನರು ಆಲೋಚನಾಪರರಾಗಿದ್ದಾರೆ.

ಮಾಂಸದಿಂದ ಮೇದೋವೃದ್ಧಿಯಾದರೆ '**ಸದ್ಯಃ ಶುಕ್ರಕರಂ ಪಯಃ**' ಗೋದುಗ್ಧವು ಶೀಘ್ರವಾಗಿ ವೀರ್ಯೋತ್ಪಾದಕವಾಗಿರುವುದು. ಎಲ್ಲಾ ಧಾತುಗಳಲ್ಲಿ ಸಾರಭೂತವಾದ ದೇಹದ ಬಾಳಿಗೆ ಸರ್ವಥೈವ ಕಾರಣವಾದ ವೀರ್ಯಶಕ್ತಿದಿಂದಲೇ ವಿಜ್ಞಾತವಾದ ಶುಕ್ರೋತ್ಪಾದಕ

ಗೋದುಗ್ಧವು ರಾಷ್ಟ್ರದ ಆರೋಗ್ಯಭಾಗ್ಯಕ್ಕೂ, ವೀರ್ಯವತ್ತರವಾದ ಕಾರ್ಯಗಳಿಗೂ, ಬುದ್ಧಿಮತ್ತೆಗೂ ಇಷ್ಟೊಂದು ಕಾರಣವಾಗಿರುವಾಗ ಗೋವಧೆಯನ್ನು ರಾಷ್ಟ್ರಹಿತವನ್ನು ಸಾಧಿಸುವ ಶಾಸನಕರ್ತೃಗಳಿಗೆ ಈವರೆಗೂ ನಿಲ್ಲಿಸದಿರುವುದು ಯೋಗ್ಯವಾದೀತೇ?

ಹಿಂಸೆ ಎಂದರೆ ದುಃಖ. ಅದು ತನ್ನ ವಿಷಯದಲ್ಲಿಯೂ, ಪರರ ವಿಷಯದಲ್ಲಿಯೂ ಅನಿಷ್ಟವೇ ಸರಿ. ತನ್ನ ವಧೆಯಾದರೂ, ಪರರು ತನ್ನ ಮಾಂಸವನ್ನು ತಿಂದರೂ, ಹರ್ಷಗೊಳ್ಳುವುದಾದರೆ ಮಾತ್ರ ಗೋವಧವು ಮಾಡಬಹುದಲ್ಲದೆ ತನ್ನ ದೇಹರಕ್ಷಣದ ಆಸೆಯುಳ್ಳ ಮನುಷ್ಯನಿಗೆ ಯಾವ ವಿಧದಿಂದಲೂ, ಪರವಧೆ, ಪರಹಿಂಸೆ, ವಿಹಿತವಾದುದಲ್ಲ. ಇದು ಸರ್ವ ಸಾಮಾನ್ಯ ನೀತಿ. ಈ ದೃಷ್ಟಿಯಿಂದ ಗೋವಧವೊಂದೇ ನಿಷಿದ್ಧವಾಗದೆ ಎಲ್ಲಾ ಪ್ರಾಣಿಗಳ ವಧವೂ ನಿಷಿದ್ಧವಾಗುವುದು. "ನ ಹಿಂಸ್ಯಾತ್ ಸರ್ವ ಭೂತಾನಿ" "ಅಹಿಂಸಾ ಪರಮೋಧರ್ಮಃ" ಎಲ್ಲಾ ಪ್ರಾಣಿಗಳಲ್ಲಿಯೂ ಎಲ್ಲೆಡೆಯಲ್ಲಿಯೂ ಆನಂದವನ್ನು ಬೀರುವುದಕ್ಕಾಗಿ ಈ ಶ್ರುತಿಸ್ಮೃತಿ ವಾಕ್ಯಗಳು ಹಿಂಸೆಯ ನಿಷೇಧವನ್ನು ಮಾಡಿ ಅಹಿಂಸೆ ಯನ್ನು ವಿಧಿಸುತ್ತಿವೆ.

> ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।
> ಸುಖಂ ವಾ ಯದಿ ವಾ ದುಃಖಂ ಸಯೋಗೀ ಪರಮೋ ಮತಃ ॥
>
> (ಗೀತಾ ೬-೩೨)

ತನ್ನಂತೆ ಪರರ ಸುಖದುಃಖಗಳನ್ನು ಎಣಿಸುವವನು ಪರಮಯೋಗಿ ಎಂದು ಭಗವಂತನೇ ತನ್ನ ಶ್ರೀಮುಖದಿಂದ ಪ್ರಕಟಪಡಿಸಿರುವನು.

ಶ್ರುತಿಯು "ಆತ್ಮೈವೇದಂ ಸರ್ವಂ ಅಹಮೇವೇದಂ ಸರ್ವಂ" ಎಂದು ಹೇಳುತ್ತಿದೆ. ಎಲ್ಲೆಡೆಯಲ್ಲಿಯೂ ತನ್ನ ವ್ಯಾಪ್ತಿಯೇ ಇರುವುದೆಂಬುದು ಇವರ ಅರ್ಥ. ಪರರ ಹಿಂಸೆ ಎಂದರೆ ಅದು ತನ್ನ ಹಿಂಸೆಯೇ ಸರಿ. ಆದುದರಿಂದಲೇ "ಆತ್ಮೌಪಮ್ಯೇನ" ಎಂಬುದಾಗಿ ಹೇಳಲ್ಪಟ್ಟಿದೆ. ಅಹಿಂಸೆಯಲ್ಲಿ ಈ ಉನ್ನತ ಆತ್ಮೀಯ ದೃಷ್ಟಿಯಿದೆ. ಸರ್ವಾತ್ಮರೂಪದ ಸಾಕ್ಷಾತ್ಕಾರಕ್ಕಾಗಿಯೇ ಅಹಿಂಸೆಯು ಸಾರಲ್ಪಟ್ಟಿದೆ. ಅಹಿಂಸೆಯಲ್ಲಿ "ಏಷತಾತ್ಮಾ ಸರ್ವಾಂತರಃ" ಈ ಉಪದೇಶವು ಅಡಕವಾಗಿದೆ. ನಿನ್ನ

ಆತ್ಮರೂಪವೇ, ನೀನೇ ಸರ್ವಾಂತರದಲ್ಲಿರುವೆ, ಸರ್ವಹೃದಯ ನಿವಾಸಿಯಾಗಿರುವೆ. ಪರರ ಸುಖದುಃಖ ನಿನ್ನ ಸುಖದುಃಖವೇ ಸರಿ ಎಂಬೀ ಉಚ್ಚಮಟ್ಟದ ತತ್ತ್ವೋಪದೇಶವು ಅಹಿಂಸೆಯಲ್ಲಿ ಪ್ರತಿಷ್ಠಿತವಾಗಿರುವುದು. "ಆನಂದ ಆತ್ಮಾ" ಆತ್ಮಸ್ವರೂಪವು ಕೇವಲ ಆನಂದರೂಪವಾದುದು. ಅದೇ ಆಗಿದ್ದ ನಿನಗೆ ಪರರ ಹಿಂಸೆಯಿಂದ, ಮಾಂಸದ ಅಮೇಧ್ಯ ಆಹಾರದಿಂದ ಏನುತಾನೆ ಆಗತಕ್ಕದ್ದು? ಆನಂದ ಮಾತ್ರತೆಯಲ್ಲಿ ಹಿಂಸಾಪರವಾದ ಈ ದುಃಖವನ್ನು ಏಕೆತಾನೆ ಉಂಟುಮಾಡುವೆ? ಎಂಬ ಈ ಹಿತದ ನುಡಿಯು ಕೇವಲ ಆನಂದಪ್ರಾಪ್ತಿಯ ಸಾಧನವು—ಏಕಾತ್ಮಭಾವವು—ಆತ್ಮಸಾಕ್ಷಾತ್ಕಾರವು. ಅಹಿಂಸೆಯ ತತ್ತ್ವವು ಎದ್ದುಕಾಣಿಸಿ ಕಂಗೊಳಿಸುತ್ತಿದೆ.

ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯನ್ತೇ।
ಆನಂದೇನ ಜಾತಾನಿ ಜೀವನ್ತಿ। ಆನಂದಂ ಪ್ರಯನ್ತ್ಯಭಿಸಂವಿಶನ್ತೀ॥

(ತೈ. ಭೃ.). ವೈದಿಕ ಆರ್ಯಸಂಸ್ಕೃತಿಯ ಈ ಸ್ಥಿರಚರ ರೂಪವಾದ ಅಖಿಲ ವಿಶ್ವವು ಒಂದು ಆನಂದದಿಂದಲೇ ಉಂಟಾಗಿ ಆನಂದರೂಪದಿಂದಲೇ ತನ್ನ ಆನಂದವನ್ನು ಅನುಭವಿಸುತ್ತಾ ಜೀವಿಸುವುದೆಂತಲೂ, ಆ ಅದ್ವಿತೀಯ ಆನಂದದೆಡೆಗೆ ತನ್ನ ಕ್ಷಣನಿಮಿಷದ ಪ್ರಗತಿಪರ ಜೀವನವನ್ನು ಸಾಗಿಸುತ್ತಿದೆ ಎಂತಲೂ, ಜಗತ್ತಿನ ನಾಮರೂಪಾದಿ ಉಪಾಧಿಗಳ ತ್ಯಾಗರೂಪವಾದ ವ್ಯತಿರೇಕದಿಂದಲೂ, ಚಿನ್ನದ ಒಡವೆಗಳಲ್ಲಿ ಚಿನ್ನವೇ ಕೂಡಿರುವಂತೆ ಈ ಎಲ್ಲಾ ನಾಮರೂಪವಾದ ಉಪಾಧಿಗಳಲ್ಲಿ ಸಚ್ಚಿದಾನಂದ ಸ್ವರೂಪವೊಂದೇ ಹೊರಹೊಮ್ಮುತ್ತಲಿದೆ ಎಂಬ ಅನ್ವಯದಿಂದಲೂ, ಇದು ಕೊನೆಯಲ್ಲಿ ಅದ್ವಿತೀಯವಾದ ನಿರವಧಿ ಆನಂದದಲ್ಲಿಯೇ ಮೈಮರೆತು ಒಂದಾಗುವುದೆಂತಲೂ, ಪರಮಾತ್ಮ ಪ್ರಣೀತವಾದ ವೇದಗಳನ್ನು ಮುಂದಿಟ್ಟು ತನ್ನ ಹೃದಯದ ಅನುಭವವನ್ನು ಬಿಚ್ಚಿ, ವಿಶ್ವಜನರನ್ನೆಲ್ಲಾ ಅವರ ನಿಜವಾದ ಅಭ್ಯುದಯ, ನಿಃಶ್ರೇಯಸ್ಸುಗಳನ್ನು ಕೋರಿ ಆರ್ಯ ಸಂಸ್ಕೃತಿಯು ಅನವರತ ಬೋಧಿಸುತ್ತಿದೆ. ವೈದಿಕಧರ್ಮವೇ ವಿಶ್ವಧರ್ಮವೆಂದು ಸಾರುತ್ತಿದೆ.

ಆರ್ಯಸಂಸ್ಕೃತಿಯು ವೈದಿಕಧರ್ಮದ ಸಲಕ್ಷಣವಾದ ಹಿರಿಮೆ-ಮೇಲ್ಮೆಗಳನ್ನು ಸಪ್ರಮಾಣವಾಗಿ ತಿಳಿಯಪಡಿಸಿ ತನ್ನ ವಿಶ್ವಕಲ್ಯಾಣದ

ಉದಾತ್ತ ಧ್ಯೇಯವನ್ನೂ, ಉದಾರ ಹೃದಯವನ್ನೂ, ವಿಶ್ವಾತ್ಮಭಾವದ ಸ್ವಭಾವವನ್ನೂ ವಿಶ್ವವಿದಿತ ಮಾಡುವುದು.

ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ ಭೂಮೈವ ಸುಖಂ (ಛಾಂದೋಗ್ಯ). ಈ ಶ್ರುತಿಯು ಜಗತ್ತಿನ ಯಥಾರ್ಥರೂಪವಾದ ಆನಂದಘನತೆಯನ್ನು ಬೋಧಿಸುತ್ತಿದೆ. ಎಲ್ಲಿ ಇನ್ನೊಂದನ್ನು ನೋಡನೋ, ಕೇಳನೋ, ಭಾವಿಸನೋ ಅದೇ ಅನಂತ ರೂಪ— ಅದ್ವಿತೀಯಸ್ವರೂಪ. ಈ ಅನಂತ ಅದ್ವಿತೀಯಸ್ವರೂಪವೇ "ಭೂಮಾ" ಎಂದೆನಿಸಿಕೊಳ್ಳುವುದು. ಇದೇ ನಿಜವಾದ ಸುಖವು. 'ಸಚ್ಚಿದಾನಂದಸ್ವರೂಪಂ ಜ್ಞಾತ್ವಾ ಆನಂದರೂಪಾ ಯಾ ಸ್ಥಿತಿಃ ಸೈವ ಸುಖಂ' (ನಿರಾಲಂಬೋಪನಿಷತ್). ತನ್ನ ಸಚ್ಚಿದಾನಂದಸ್ವರೂಪವನ್ನರಿತು ಮೈಗೊಂಡ ಆನಂದರೂಪ ಸ್ಥಿತಿಯೇ ಒಂದು ನಿಜವಾದ ಸುಖ.

ವಿಶ್ವಧರ್ಮವನ್ನು ಬೋಧಿಸುವ ಆರ್ಯಸಂಸ್ಕೃತಿಯ ಸದುಪದೇಶದಿಂದ ಈ ನಿರವಧಿಭಾಗ್ಯವು ವಿಶ್ವಜನರಿಗೆಲ್ಲಾ ಒದಗಲಿ!

ಸ್ವಸ್ತಿ ವಃ ಪರಾಯ ತಮಸಃ ಪರಸ್ತಾತ್ ।
ಸರ್ವೇ ಚ ಸುಖಿನಃ ಸಂತು ।
ಸರ್ವೇ ಸಂತು ನಿರಾಮಯಾಃ ।
ಸರ್ವೇ ಭದ್ರಾಣಿ ಪಶ್ಯಂತು ।
ಮಾ ಕಶ್ಚಿದ್ದುಃಖಮಾಪ್ನುಯಾತ್ ॥

॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

ಶುಭಂ ಭವತು

ಇತಿ ಶಮ್



ಓಂ

# ವಿಶ್ವಧರ್ಮಾಭ್ಯುದಯಮ್

ಪರಿಹರಿಸುತ ಜ್ಞಾನತಮವನು ।
ಮರೆಯಿಸುತಲಾ ವಿಷಯತಾಪವ ।
ಇರುತನಿರುತಾವದು ವಿಶುದ್ಧದಿ ಜಗವ ರಕ್ಷಿಪುದೋ ॥
ಪರವಿರತಿಪರವಾಗುತನುದಿನ ।
ವರಮುಮುಕ್ಷು ಚಕೋರ ಭಾವದಿ ।
ಪರಮ ವಿಮಲ ಬ್ರಹ್ಮಸುಖವನು ಕೋರುತಲಿ ನಿತ್ಯ ॥ ೧ ॥

ಯಾವ ವಿಧುವನು ದುಃಖ ನೀಗಲು ।
ಭಾವದಿಂದಲಿ ಸೇವಿಸುವುದದು ।
ತೀವಿ ಬೆಳಗುವ ಜಗದಿದೊಂದೇ ವಿಶ್ವಧರ್ಮವಲಾ ॥
ಆವ ಬ್ರಹ್ಮವು ನಿತ್ಯಮಂಗಲ ।
ಸಾವುನೋವುಗಳಿಂದ ರಹಿತವೋ ।
ಆ ವಿಮಲ ಸುಖಶರಧಿಯಿಂದಲಿ ಜನಿಸಿ ಜಗದೊಳಗೆ ॥ ೨ ॥

ಅರಳಿಸುತ ಹೃತ್ಕುಮುದಸಿರಿಯನು ।
ಭರದಿನಾಶಿಸಿ ವಿಶ್ವದುಃಖವ ।
ಪರಮ ಬ್ರಹ್ಮಾನಂದ ಬೀರುತ ವಿಶ್ವಧರ್ಮವಿದೂ ॥
ವರಕಣಾ ಪರಬ್ರಹ್ಮ ನೀನದು ।
ಕರಚರಣದಿಂ ರಹಿತನಾಗಿಹೆ ।
ಮರಣಭಯ ನಿನಗಿಲ್ಲವೆಂಬುದು ಸಾರುವುದು ಸತತ ॥ ೩ ॥

ಇದುವೆ ವೈದಿಕ ವಿಶ್ವಧರ್ಮವು ।
ಇದುವೆ ನಿಜ ಭವ ಮೋಕ್ಷಕಾರಣ ।
ಇದುವೆ ವಿಶ್ವದ ಧರ್ಮಕಿರಣದಿ ತಾನೆ ಬೆಳಗಿಪುದು ॥
ಇದುವೆ ನಿತನಿಜ ಸುಖದ ಶರಧಿಯು ।
ಇದುವೆ ನಿತನಿಜ ಶಾಂತಿನಿಲಯವು ।
ಇದುವೆ ನಿತ ಆಶ್ರಯಿಸಿ ನಿಜ ಸುಖಕೋರಿ ಸಜ್ಜನರಾ ॥ ೪ ॥

ಮನ್ಮಥ ಸಂವತ್ಸರ
ಕಾರ್ತೀಕ ಶುದ್ಧ ಪೌರ್ಣಿಮಾ

ಸನ್ಮಾರ್ಗ ಮಹಾಮಂಡಲ,
ಮಂಗಳೂರು.

॥ ॐ ॥

# ॥ विश्वधर्माभ्युदयम् ॥

सकलविश्वतमोविनिवारयन्
निखिलतापभयं प्रविलापयन्
सुविमलोऽखिलविश्वमवन्सदा
जयति विश्वसुधर्मसुधाकरः ॥ १ ॥

विरतियुक्तमुमुक्षु चकोरकाः
विमलभूमसुखंहि बुभुक्षवः
यमनिशं विमलाः समुपासते
जयति विश्वसुधर्मसुधाकरः ॥ २ ॥

अमलभूमपरात्मसुखाब्धिजः
सकलहृत्कुमुदं सुविकासयन्
विषयशून्यसुखं वितरन्मुदा
जयति विश्वसुधर्मसुधाकरः ॥ ३ ॥

जगति 'तत्वमसीति' सुबोधयन्
अचलभूमसुखं विदधद्भुवि
सकलजीवविमोक्षणकारणम्
जयति विश्वसुधर्मसुधाकरः ॥ ४ ॥

सकलधर्मकरैश्चविराजितम्
अखिलसौख्यनिधिं परमावधिम्
भजतरे निजसौख्य विलोलुपाः
जयति विश्वसुधर्मसुधाकरः ॥ ५ ॥

मन्मथ संवत्सर
कार्तीक शुद्ध पौर्णिमा

सन्मार्ग महामंडल,
मंगळूरु.

(संस्कृतं)

॥ ॐ ॥

# ॥ विश्वधर्माभ्युदयम् ॥

करुनि दूर तमां सकळांचिया ।
हरित जो भुवि ताप तथा भया ।
असुनि शुद्ध सदा जग पाळित ।
जगतिं विश्वसुधर्म विराजत ॥ १ ॥

विरतियुक्तमुमुक्षुचकोर जे ।
विमलभूमसुखासि बुभुक्षु जे ।
अमलइंदुसि ज्या सदुपासित ।
जगतिं विश्वसुधर्म विराजत ॥ २ ॥

अमलभूमपराब्धिसुखोद्भव ।
'फुलवि हृत्कुमुदां' जगिं गौरव ।
विषयशून्यसुखा नित दावित ।
जगतिं विश्वसुधर्म विराजत ॥ ३ ॥

विमल ब्रह्मचि तूं जगिं बोधित ।
अचलब्रह्मखासिच प्रेरित ।
असुनिं मुक्तिसि कारण संतत ।
जगतिं विश्वसुधर्म विराजत ॥ ४ ॥

सकल धर्मकरान्वित अव्यया ।
अखिलसौख्यनिधीसि जगांत या ।
स्वसुखलोलुप हे भज या नित ।
जगतिं विश्वसुधर्म विराजत ॥ ५ ॥

मन्मथ संवत्सर
कार्तीक शुद्ध पौर्णिमा

सन्मार्ग महामंडल,
मंगळूरु.

(मराठी)

